# ದಾಂಪತ್ಯ
# ಹಕ್ಕು ಬಾಧ್ಯತೆಗಳು

ಇಸ್ಲಾಮೀ ದಾಂಪತ್ಯ ಕಾನೂನಿನ ಉದ್ದೇಶಗಳು
ನಿಕಾಹ್ ಮತ್ತು ತಲಾಕ್‌ನ ವಿಧಿ ನಿಯಮಗಳು ಮತ್ತು
ಪಾಶ್ಚಾತ್ಯರ ವಿವಾಹ ವಿಚ್ಛೇದನ ನಿಯಮಗಳ ಕುರಿತು
ಸಮಗ್ರ ಅಧ್ಯಯನ.

ಸೆ. ಸಯ್ಯದ್ ಅಬುಲ್ ಆಲಾ ಮೌದೂದಿ

ಪರಮದಯಾಮಯ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

ಜಗತ್ಪ್ರಸಿದ್ಧ ಇಸ್ಲಾಮೀ ಚಿಂತಕ ಮೌ| ಸೈಯದ್ ಅಬುಲ್ ಆಲಾ ಮೌದೂದಿಯವರ 'ಹುಕೂಕುಝ್ಝೌಜೈನ್' ಎಂಬ ಉರ್ದು ಕೃತಿಯನ್ನು 'ದಾಂಪತ್ಯ ಹಕ್ಕು ಬಾಧ್ಯತೆಗಳು' ಎಂಬ ಹೆಸರಿನಲ್ಲಿ ಇಬ್ರಾಹೀಮ್ ಸಈದ್ ಅವರು ಕನ್ನಡಕ್ಕೆ ಅನುವಾದಿಸಿದ್ದಾರೆ.

1985ರಲ್ಲಿ ಪ್ರಥಮ ಬಾರಿ ಮುದ್ರಿಸಲ್ಪಟ್ಟ ಈ ಗ್ರಂಥ ಮೂರು ಬಾರಿ ಮುದ್ರಣಗೊಂಡಿದ್ದು, ವಾಚಕರ ಬೇಡಿಕೆಯನ್ನು ಪರಿಗಣಿಸಿ ಇದರ ನಾಲ್ಕನೇ ಆವೃತ್ತಿಯನ್ನು ಸಮರ್ಪಿಸುತ್ತಿದ್ದೇವೆ. ಇನ್ನೂ ಹೆಚ್ಚಿನ ಜನರು ಇದರಿಂದ ಪ್ರಯೋಜನ ಪಡೆಯುವಂತಾಗಲೆಂದು ಹಾರೈಸುತ್ತೇವೆ.

"ಪ್ರಸಕ್ತ ಮೊಹಮ್ಮಡನ್ ಲಾ ಅಥವಾ ಮುಸ್ಲಿಮ್ ಪರ್ಸನಲ್ ಲಾ ಎಷ್ಟರ ಮಟ್ಟಿಗೆ ಧರ್ಮಕ್ಕೆ ಬದ್ಧವಾಗಿದೆ ಮತ್ತು ಅವುಗಳಲ್ಲಿ ಯಾವ ರೀತಿಯ ಸುಧಾರಣೆಯಾಗಬೇಕೆಂಬುದನ್ನು ಸೈಯದ್ ಮೌದೂದಿಯವರು ಈ ಗ್ರಂಥದಲ್ಲಿ ಪ್ರತಿಪಾದಿಸಿದಷ್ಟು ಸಮರ್ಪಕವಾಗಿ ಯಾರೂ ಪ್ರತಿಪಾದಿಸಿಲ್ಲ ಎಂದು ಪೂರ್ಣ ವಿಶ್ವಾಸದೊಂದಿಗೆ ಹೇಳಬಹುದು." ಇದು ಪ್ರೊ| ತಾಹಿರ್ ಮಹಮೂದ್ (ಪ್ರೊಫೆಸರ್ ಆಫ್ ಇಸ್ಲಾಮಿಕ್ ಸ್ಟಡೀಸ್, ದೆಹಲಿ ವಿಶ್ವವಿದ್ಯಾಲಯ)ರವರು ಈ ಗ್ರಂಥದ ಬಗ್ಗೆ ನೀಡಿದ ಅಭಿಪ್ರಾಯವಾಗಿದೆ.

ದಾಂಪತ್ಯ ಹಕ್ಕುಬಾಧ್ಯತೆಗಳನ್ನು ಇಸ್ಲಾಮ್ ಮತ್ತು ಇಸ್ಲಾಮೀ ಕಾನೂನು ಸಂಹಿತೆಯ (ಶರೀಅತ್) ಬೆಳಕಿನಲ್ಲಿ ಯಥಾವತ್ತಾಗಿ ಮನನ ಮಾಡಲು ಈ ಕೃತಿ ಹೆಚ್ಚು ಸಹಕಾರಿಯಾಗಬಹುದೆಂದು ನಿರೀಕ್ಷಿಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಮುನ್ನುಡಿ

ಯಾವುದೇ ಸಮಾಜದ ನಾಗರಿಕತೆಯನ್ನು ರೂಪಿಸಲು ಎರಡು ವಿಷಯಗಳು ಅಗತ್ಯ. ಮೊದಲನೆಯದು ಅದರ ನಾಗರಿಕತೆಯ ವಿಶಿಷ್ಟ ಸ್ವರೂಪ ಮತ್ತದರ ಸ್ವಭಾವವನ್ನು ಪರಿಗಣಿಸಿ ರೂಪಿಸಲ್ಪಟ್ಟ ಸಮಗ್ರ ಕಾನೂನು. ಎರಡನೆಯದು ಆ ಕಾನೂನನ್ನು ಅದರ ರಚನೆಯ ಹಿಂದಿರುವ ನೈಜ ಸ್ಫೂರ್ತಿಯೊಂದಿಗೆ ಜಾರಿಗೊಳಿಸಬಲ್ಲ ಒಂದು ಆಡಳಿತ ವ್ಯವಸ್ಥೆ. ದುರದೃಷ್ಟವಶಾತ್ ಭಾರತೀಯ ಮುಸಲ್ಮಾನರು ಈಗ ಈ ಎರಡೂ ವಿಷಯಗಳಿಂದ ವಂಚಿತರಾಗಿದ್ದಾರೆ. ಅವರ ಬಳಿ ಗ್ರಂಥಗಳಲ್ಲಿ ಬರೆಯಲ್ಪಟ್ಟ ಒಂದು ಕಾನೂನು ಇದೆ ಎಂಬುದರಲ್ಲಿ ಸಂಶಯವಿಲ್ಲ. ಅದು ಇಸ್ಲಾಮೀ ಸಂಸ್ಕೃತಿ ಮತ್ತು ನಾಗರಿಕತೆಗೆ ಪೂರ್ಣವಾಗಿ ಬದ್ಧವಾಗಿದೆ. ನಾಗರಿಕತೆ ಮತ್ತು ಸಾಮಾಜಿಕ ಜೀವನದ ಎಲ್ಲ ಭಾಗಗಳನ್ನೂ ಅದು ಆವರಿಸಿದೆ. ಆದರೆ ಈಗ ಕಾರ್ಯತಃ ಈ ಕಾನೂನು ಅನೂರ್ಜಿತಗೊಂಡಿದೆ. ಅದರ ಸ್ಥಾನದಲ್ಲಿ ಈಗ ಜಾರಿಯಲ್ಲಿರುವ ಕಾನೂನು ನಾಗರಿಕ-ಸಾಮಾಜಿಕ ವ್ಯವಹಾರಗಳ ಹೆಚ್ಚಿನೆಲ್ಲಾ ವಿಷಯಗಳಲ್ಲಿ ಪೂರ್ಣ ಇಸ್ಲಾಮೇತರವಾಗಿದೆ. ಕೆಲವು ವಿಷಯಗಳಲ್ಲಿ ಇಸ್ಲಾಮೀ ಕಾನೂನುಗಳಿದ್ದರೂ ಅವು ಅಪೂರ್ಣವಾಗಿವೆ. ಈಗ ಮುಸಲ್ಮಾನರು ಯಾವ ಆಡಳಿತ ವ್ಯವಸ್ಥೆಗೆ ಒಳಪಟ್ಟಿರುವರೋ ಅದು ಅವರ ನಾಗರಿಕ ಜೀವನವನ್ನು ಕಾರ್ಯತಃ ಎರಡು ರಂಗಗಳಲ್ಲಿ ವಿಂಗಡಿಸಿದೆ. ಮೊದಲನೆಯ ರಂಗದಲ್ಲಿ ಭಾರತದ ಇತರ ಜನಾಂಗಗಳ ಜೊತೆಗೆ ಮುಸಲ್ಮಾನರ ಮೇಲೂ ಇಸ್ಲಾಮೀ ಸಂಸ್ಕೃತಿಗೆ ತೀರಾ ನಿಲುಕದ ಕಾನೂನುಗಳನ್ನು ಜಾರಿಗೊಳಿಸಿದೆ. ಎರಡನೆಯ ರಂಗದಲ್ಲಿ ಮುಸಲ್ಮಾನರ ಮೇಲೆ ಇಸ್ಲಾಮೀ ಕಾನೂನನ್ನೂ ಜಾರಿಗೊಳಿಸಬೇಕೆಂಬ ಮುಸ್ಲಿಮರ ಹಕ್ಕನ್ನು ಸರಕಾರವು ತಾತ್ವಿಕವಾಗಿ ಒಪ್ಪಿ ಕೊಂಡರೂ ಕಾರ್ಯತಃ ಆ ರಂಗದಲ್ಲೂ ಇಸ್ಲಾಮೀ ಕಾನೂನನ್ನು ಸರಿಯಾಗಿ ಜಾರಿಗೊಳಿಸಿಲ್ಲ. 'ಮುಹಮ್ಮಡನ್ ಲಾ' ಎಂಬ ಹೆಸರಲ್ಲಿ ಈ ರಂಗದಲ್ಲಿ ಜಾರಿಗೊಳಿಸಲಾಗಿರುವ ಕಾನೂನು ತನ್ನ ಸ್ವರೂಪ ಮತ್ತು ಚೇತನದ ದೃಷ್ಟಿಯಿಂದ ನೈಜ ಇಸ್ಲಾಮೀ ಶರೀಅತ್‌ಗಿಂತ ಬಹಳಷ್ಟು ಭಿನ್ನವಾಗಿದೆ. ಆದ್ದರಿಂದ ಆ ಕಾನೂನಿನ ಜಾರಿಯನ್ನು ವಾಸ್ತವದಲ್ಲಿ ಇಸ್ಲಾಮೀ ಶರೀಅತ್‌ನ ಅನುಷ್ಠಾನ ಎನ್ನಲಾಗದು.

ಈ ಶೋಚನೀಯ ಪರಿಸ್ಥಿತಿಯು ಮುಸಲ್ಮಾನರ ನಾಗರಿಕ ಜೀವನಕ್ಕೆ ಉಂಟು ಮಾಡಿರುವ ನಷ್ಟಗಳಲ್ಲಿ ಅತಿ ದೊಡ್ಡ ನಷ್ಟವೆಂದರೆ, ಅದು ನಮ್ಮ ಕನಿಷ್ಟ ಶೇ. 75ರಷ್ಟು ಮನೆಗಳನ್ನು ನರಕ ಸದೃಶಗೊಳಿಸಿ ಬಿಟ್ಟಿದೆ. ನಮ್ಮ ಜನಸಂಖ್ಯೆಯ ಒಂದು ದೊಡ್ಡ ಭಾಗದ ಜೀವನವನ್ನು ಅದು ಅಸಹ್ಯಗೊಳಿಸಿರುವುದು ಮಾತ್ರವಲ್ಲ ಅದನ್ನು ನಾಶಗೊಳಿಸಿದೆ. ಸ್ತ್ರೀ-ಪುರುಷರ ವೈವಾಹಿಕ ಸಂಬಂಧವು ವಾಸ್ತವದಲ್ಲಿ ಮಾನವೀಯ ನಾಗರಿಕತೆಯ ಅಡಿಪಾಯವಾಗಿದೆ. ಈ ಸಂಬಂಧವನ್ನು

ವ್ಯವಸ್ಥಿತಗೊಳಿಸಲು ರಚಿಸಲಾಗಿರುವ ಕಾನೂನಿನ ಚೌಕಟ್ಟಿನಿಂದ ಸ್ತ್ರೀಯಾಗಲೀ ಪುರುಷನಾಗಲೀ ಯಾವ ವ್ಯಕ್ತಿಯೂ ಹೊರತಲ್ಲ. ಏಕೆಂದರೆ ಬಾಲ್ಯದಿಂದ ವೃದ್ಧಾಪ್ಯದ ತನಕ ವಯಸ್ಸಿನ ಎಲ್ಲ ಹಂತಗಳಲ್ಲಿಯೂ ಈ ಕಾನೂನು ಮನುಷ್ಯ ಜೀವನದ ಮೇಲೆ ಯಾವುದಾದರೊಂದು ರೀತಿಯಲ್ಲಿ ಪ್ರಭಾವ ಬೀರುತ್ತಿರುತ್ತದೆ. ಅವನು ಮಗುವಾಗಿದ್ದರೆ ತಂದೆ-ತಾಯಿಗಳ ಪರಸ್ಪರ ಸಂಬಂಧ ಅವನ ತರಬೇತಿಯಲ್ಲಿ ಪ್ರಭಾವ ಬೀರುತ್ತದೆ. ಅವನು ಯುವಕನಾಗಿದ್ದರೆ ಓರ್ವ ಜೀವನ ಸಂಗಾತಿಯ ಸಂಪರ್ಕ ಮಾಡಿಕೊಳ್ಳಬೇಕಾಗುತ್ತದೆ. ಅವನು ವೃದ್ಧನಾಗಿದ್ದರೆ ಅವನ ಸಂತತಿಗಳು ವೈವಾಹಿಕ ಬಂಧನದಲ್ಲಿ ಬಂಧಿತರಾಗಿರುತ್ತಾರೆ. ಅವನ ಮನಸ್ಸು ಮತ್ತು ಆತ್ಮದ ನೆಮ್ಮದಿ ಹಾಗೂ ಅವನ ಜೀವನದ ಶಾಂತಿ, ಮಗ ಮತ್ತು ಸೊಸೆ ಹಾಗೂ ಮಗಳು ಮತ್ತು ಅಳಿಯನ ಉತ್ತಮ ಸಂಬಂಧಗಳನ್ನು ಹೊಂದಿಕೊಂಡಿರುತ್ತದೆ. ಒಟ್ಟಿನಲ್ಲಿ ವೈವಾಹಿಕ ಕಾನೂನು ನಾಗರಿಕ ಕಾನೂನುಗಳ ಪೈಕಿ ಅತ್ಯಂತ ವ್ಯಾಪಕ ಪರಿಣಾಮ ಹೊಂದಿರುವ ಕಾನೂನಾಗಿದೆ. ಇಸ್ಲಾಮಿನಲ್ಲಿ ಈ ಕಾನೂನಿನ ನೈಜ ಮಹತ್ವವನ್ನು ಪರಿಗಣಿಸಿ ಅದನ್ನು ಸರಿಯಾದ ತತ್ವಗಳ ಆಧಾರದಲ್ಲಿ ಕ್ರೋಢೀಕರಿಸಲಾಗಿತ್ತು. ಮುಸಲ್ಮಾನರಿಗೆ ವೈವಾಹಿಕ ವ್ಯವಹಾರಗಳಲ್ಲಿ ತಮ್ಮ ಧರ್ಮದಿಂದ ಒಂದು ಉತ್ತಮ, ಸಮಗ್ರ ಮತ್ತು ಸಂಪೂರ್ಣ ಕಾನೂನು ಲಭ್ಯವಾಗಿತ್ತು. ಲೋಕದ ಇತರೆಲ್ಲ ವೈವಾಹಿಕ ಕಾನೂನುಗಳಿಗೆ ಹೋಲಿಸಿದರೆ, ಅದನ್ನು ಎಲ್ಲ ನೆಲೆಯಲ್ಲಿಯೂ ಅತ್ಯುತ್ತಮವೆನ್ನಬಹುದಾಗಿತ್ತು. ಆದರೆ ದುರದೃಷ್ಟವಶಾತ್ ಈ ಕಾನೂನು ಕೂಡಾ'ಮುಹಮ್ಮಡನ್ ಲಾ'ದ ಸುಳಿಯಲ್ಲಿ ಸಿಲುಕಿ ನಿಸ್ತೇಜಗೊಂಡಿತು. ಈಗ ಅದಕ್ಕೂ ನೈಜ ಇಸ್ಲಾಮೀ ಕಾನೂನಿಗೂ ದೂರದ ಒಂದು ಸಾಮ್ಯತೆ ಮಾತ್ರ ಉಳಿದಿದೆ. ಈಗ ಇಸ್ಲಾಮೀ ಶರೀಅತ್‌ನ ಹೆಸರಲ್ಲಿ ಮುಸಲ್ಮಾನರ ವೈವಾಹಿಕ ವ್ಯವಹಾರಗಳಲ್ಲಿ ಬಳಕೆಯಲ್ಲಿರುವ ಕಾನೂನು ಉತ್ತಮವೂ ಅಲ್ಲ, ಸಮಗ್ರವೂ ಅಲ್ಲ, ಸಂಪೂರ್ಣವೂ ಅಲ್ಲ. ಪ್ರಾಯಶಃ ಇತರ ಯಾವ ಕಾನೂನು ಕೂಡಾ ಉಂಟುಮಾಡದಷ್ಟು ದುಷ್ಪ್ರಭಾವವನ್ನು ಈ ಕಾನೂನಿನ ಕುಂದು ಕೊರತೆಗಳು ಮುಸಲ್ಮಾನರ ನಾಗರಿಕ ಜೀವನದಲ್ಲಿ ಉಂಟು ಮಾಡಿವೆ. ಈ ದೋಷಪೂರ್ಣ ಕಾನೂನಿನ ನಿಮಿತ್ತ ಒಂದು ಜೀವನವಾದರೂ ನಾಶವಾಗದ ಯಾವುದೇ ಅದೃಷ್ಟವಂತ ಕುಟುಂಬ ಭಾರತದಲ್ಲಿ ಸಿಗುವುದು ಕಷ್ಟ.

ಜೀವನಗಳ ನಾಶವನ್ನಂತೂ ಕ್ಷುಲ್ಲಕವೆನ್ನಬಹುದು. ಅದಕ್ಕಿಂತಲೂ ಮಿಗಿಲಾಗಿ ಈ ಕಾನೂನಿನ ಕುಂದುಕೊರತೆಗಳು ಅನೇಕ ಮುಸಲ್ಮಾನರ ಮಾನ ಮರ್ಯಾದೆಗಳನ್ನು ನಾಶ ಮಾಡಿವೆ. ಅವರ ಚಾರಿತ್ರ್ಯ ಮತ್ತು ವಿಶ್ವಾಸವನ್ನು ಕೆಡಿಸಿವೆ. ಅವರ ಧರ್ಮ ಮತ್ತು ಸಂಸ್ಕೃತಿಯ ಭದ್ರಕೋಟೆ ಎನಿಸಿದ್ದ ಅವರ ಮನೆಗಳಿಗೂ ಅಶ್ಲೀಲತೆ ಮತ್ತು ಧರ್ಮಭ್ರಷ್ಟತೆಯ ಪ್ರವಾಹವನ್ನು ತಲುಪಿಸಿವೆ.

ಕಾನೂನು ಮತ್ತು ಅದನ್ನು ಜಾರಿಗೊಳಿಸುವ ಯಂತ್ರದ ದೋಷಗಳಿಂದುಂಟಾದ ಕೆಡುಕುಗಳು ಸಾಲದೆಂಬಂತೆ ಮತ್ತಷ್ಟು ಕೆಡುಕುಗಳು ಎರಡು ಕಾರಣಗಳಿಂದ ಹುಟ್ಟಿಕೊಂಡಿವೆ. ಮೊದಲನೆಯದು ಧಾರ್ಮಿಕ ಶಿಕ್ಷಣದ ಕೊರತೆ. ಇದರಿಂದಾಗಿ ಮುಸಲ್ಮಾನರು ಇಸ್ಲಾಮಿನ ದಾಂಪತ್ಯ ಕಾನೂನುಗಳ ಬಗ್ಗೆ ಪೂರ್ಣ ಅಜ್ಞರಾಗಿದ್ದಾರೆ. ಅವರಲ್ಲಿನ ಉನ್ನತ ವಿದ್ಯಾವಂತರು

ಕೂಡಾ ಈ ಕಾನೂನಿನ ಸಾಮಾನ್ಯ ಸಮಸ್ಯೆಗಳ ಬಗ್ಗೆಯೂ ತಿಳುವಳಿಕೆ ಇಲ್ಲದವರಾಗಿದ್ದಾರೆ.* ವಿವರಗಳ ಮಾತಂತಿರಲಿ, ಅದರ ಮೂಲ ತತ್ವಗಳನ್ನಾದರೂ ತಿಳಿದ ಮುಸಲ್ಮಾನರು ತೀರಾ ವಿರಳ. ನ್ಯಾಯಾಲಯದ ಕುರ್ಚಿಗಳಲ್ಲಿ ಕುಳಿತು ಅವರ ವಿವಾಹ, ವಿವಾಹ ವಿಚ್ಛೇದನ ಇತ್ಯಾದಿ ವಿಷಯಗಳ ತೀರ್ಮಾನ ಮಾಡುವವರು ಕೂಡಾ ಇಸ್ಲಾಮೀ ದಾಂಪತ್ಯ ಕಾನೂನುಗಳ ಪ್ರಾಥಮಿಕ ನಿಯಮಗಳ ಬಗ್ಗೆಯೂ ಅಜ್ಞರಾಗಿದ್ದಾರೆ. ಈ ಸಾರ್ವತ್ರಿಕ ಅಜ್ಞಾನದಿಂದಾಗಿ ಮುಸಲ್ಮಾನರು ತಾವಾಗಿಯೇ ತಮ್ಮ ವೈವಾಹಿಕ ವ್ಯವಹಾರಗಳಲ್ಲಿ ಇಸ್ಲಾಮೀ ಕಾನೂನುಗಳನ್ನು ಸರಿಯಾಗಿ ಪಾಲಿಸುವುದು ಅಸಾಧ್ಯವಾಗಿ ಬಿಟ್ಟಿದೆ. ಎರಡನೆಯ ಕಾರಣ ಇಸ್ಲಾಮೇತರ ಸಂಸ್ಕೃತಿಯ ಪ್ರಭಾವವಾಗಿದೆ. ಇದರಿಂದ ಮುಸಲ್ಮಾನರ ಪರಸ್ಪರ ಸಂಬಂಧಗಳಲ್ಲಿ ಇಸ್ಲಾಮೀ ದಾಂಪತ್ಯ ಕಾನೂನಿನ ತತ್ವ ಮತ್ತು ಸ್ಫೂರ್ತಿಗೆ ವಿರುದ್ಧವಾದ ಅನೇಕ ಸಂಪ್ರದಾಯಗಳು ಮತ್ತು ಕಂದಾಚಾರಗಳು ನುಸುಳಿಕೊಂಡಿವೆ. ದಾಂಪತ್ಯದ ಇಸ್ಲಾಮೀ ಕಲ್ಪನೆಯೇ ಅವರಲ್ಲಿ ಹೆಚ್ಚಿನವರ ಮನಸ್ಸಿನಿಂದ ಮಾಯವಾಗಿದೆ. ಕೆಲವೆಡೆ ಹಿಂದೂ ಕಲ್ಪನೆ ಬಲವಾಗಿದೆ. ಅದರ ಪರಿಣಾಮವೆಂಬಂತೆ ಪತ್ನಿಯನ್ನು ದಾಸಿಯೆಂದೂ ಪತಿಯನ್ನು ಒಡೆಯನೆಂದೂ ದೇವರೆಂದೂ ಪರಿಗಣಿಸಲಾಗುತ್ತಿದೆ. ದಾಂಪತ್ಯ ಸಂಬಂಧವನ್ನು ವೈಚಾರಿಕವಾಗಿ ಅಲ್ಲದಿದ್ದರೂ ಕಾರ್ಯ ರೂಪದಲ್ಲಿ ಅವಿಚ್ಛಿನ್ನವೆಂದು ಬಗೆಯಲಾಗುತ್ತದೆ. ತಲಾಕ್ ಮತ್ತು ಖುಲಾಗಳನ್ನು ಅತ್ಯಂತ ಹೇಯವೆಂದು ಪರಿಗಣಿಸಲಾಗುತ್ತಿದೆ. ಅಗತ್ಯವಿದ್ದಾಗಲೂ ಎಲ್ಲಿ ತಮ್ಮ ಮಾನಮರ್ಯಾದೆಗೆ ಕುಂದು ಬರುವುದೋ ಎಂದು ಬಗೆದು ಅದರಿಂದ ದೂರವಿರುತ್ತಾರೆ. ಆದರೆ ಒಳಗಿಂದೊಳಗೆ ತಲಾಕ್ ಮತ್ತು ಖುಲಾಗಳಿಗಿಂತಲೂ ಹೇಯವಾದವುಗಳನ್ನೆಲ್ಲಾ ಮಾಡಲಾಗುತ್ತಿದೆ. ಪತಿಯು ಯಾವ ಸಂದರ್ಭದಲ್ಲಿಯೂ ತಲಾಕ್ ನೀಡದ ರೀತಿಯಲ್ಲಿ 'ಮಹರ್'ನ ಮೊತ್ತವನ್ನು ವಿಪರೀತವಾಗಿ ಏರಿಸಲಾಗುತ್ತದೆ. ಇದರಿಂದಾಗಿ ಪತಿ-ಪತ್ನಿಯರಲ್ಲಿ ವಿರಸವೇರ್ಪಟ್ಟಾಗ ಅವನು ತಲಾಕ್ ನೀಡದೆ ಆಕೆಯನ್ನು ತ್ರಿಶಂಕು ಸ್ಥಿತಿಯಲ್ಲಿ ಕಾರಣ- ಒಂದೇ. ಪಾಶ್ಚಾತ್ಯ ಸಂಸ್ಕೃತಿಯು ಮೊಳಗಿಸಿದ ಸ್ತ್ರೀ-ಪುರುಷ ಸಮಾನತೆಯ ಕೂಗು ಅವರನ್ನು ದಂಗುಬಡಿಸಿದೆ. ಇಸ್ಲಾಮಿನ ಸಾಮಾಜಿಕ ವ್ಯವಸ್ಥೆಯ ಆಧಾರವಾಗಿರುವ ಆ ನಿಖರ ಮತ್ತು ಸುಸ್ಥಿರ ವೈಚಾರಿಕ ತತ್ವಗಳನ್ನು ತಿಳಿಯುವ ಶಕ್ತಿ ಸಾಮರ್ಥ್ಯಗಳೇ ಅವರಲ್ಲಿ ಉಳಿದಿಲ್ಲ.

ಈ ವಿಭಿನ್ನ ಕಾರಣಗಳು ಸೇರಿ ಮುಸಲ್ಮಾನರ ಕೌಟುಂಬಿಕ ಜೀವನವನ್ನು ಪೂರ್ಣವಾಗಿ

---

* ಉದಾಹರಣೆಗಾಗಿ ಈ ಅಜ್ಞಾನದ ಫಲವಾಗಿ ತಲಾಕ್ ನೀಡುವ ಕೇವಲ ಒಂದೇ ವಿಧಾನವನ್ನು ಮುಸಲ್ಮಾನರು ತಿಳಿದಿದ್ದಾರೆ. ಅಂದರೆ ಮೂರು ತಲಾಕ್‌ಗಳನ್ನು ಏಕಕಾಲದಲ್ಲಿ ನೀಡುವುದು. ತಲಾಕ್‌ನ ದಸ್ತಾವೇಜುಗಳನ್ನು ಬರೆಯುವವರು ಕೂಡಾ ಮೂರು ತಲಾಕ್‌ಗಳನ್ನೇ ಬರೆದು ಬಿಡುತ್ತಾರೆ. ವಾಸ್ತವದಲ್ಲಿ ಇದು ಇಸ್ಲಾಮಿನಲ್ಲಿ ಒಂದು ನವೀನಾಚರಣೆ (ಬಿದ್‌ಅತ್) ಆಗಿದ್ದು ದೊಡ್ಡ ಅಪರಾಧವಾಗಿದೆ. ಅದರಿಂದಾಗಿ ಅನೇಕ ಕಾನೂನಿನ ತೊಡಕುಗಳು ಸೃಷ್ಟಿಯಾಗುತ್ತವೆ. ಒಂದೇ ತಲಾಕ್ ನೀಡುವುದರಿಂದ ಮೂರು ತಲಾಕ್‌ಗಳನ್ನು ಒಮ್ಮೆಲೇ ನೀಡುವ ಉದ್ದೇಶವು ಈಡೇರುತ್ತದೆ. ಮಾತ್ರವಲ್ಲ ಒಂದೇ ತಲಾಕ್ ನೀಡಿದ ಸಂದರ್ಭದಲ್ಲಿ ಇದ್ದತ್ ಕಾಲಾವಧಿ ಕಳೆಯುವ ಮೊದಲು ಮರಳಿ ವೈವಾಹಿಕ ಸಂಬಂಧ ಸ್ಥಾಪಿಸುವ ಮತ್ತು ಕಾಲಾವಧಿ ಕಳೆದ ಬಳಿಕ ಮರು ವಿವಾಹವಾಗುವ ಅವಕಾಶವೂ ಉಳಿದಿರುತ್ತದೆ. ಇದರಿಂದಾಗಿ ಎಷ್ಟೋ ಮನೆ ಹಾಳಾಗುವುದರಿಂದ ಉಳಿಯುತ್ತಿತ್ತು. ಎಷ್ಟೋ ಜನರು ಸುಳ್ಳು, ನೆವನ ಮತ್ತಿತರ ಕಾನೂನು ವಿರೋಧಿ ವರ್ತನೆಗಳಿಂದ ಮುಕ್ತವಾಗುತ್ತಿದ್ದರು.

ಕೆಡಿಸಿವೆ. ಅಜ್ಞಾನ ಮತ್ತು ಪರಕೀಯ ಸಂಸ್ಕೃತಿಯ ಪ್ರಭಾವದಿಂದ ಅವರ ವೈವಾಹಿಕ ಸಂಬಂಧಗಳಲ್ಲಿ ಅನೇಕ ತೊಡಕುಗಳು ಉಂಟಾಗಿವೆ. ಅವುಗಳನ್ನು ಹೋಗಲಾಡಿಸುವಲ್ಲಿ ಪ್ರಸಕ್ತ ಕಾನೂನು ಮತ್ತು ಕಾನೂನು ಜಾರಿಗೊಳಿಸುವ ವ್ಯವಸ್ಥೆ ಎರಡೂ ವಿಫಲಗೊಂಡಿವೆ. ಮಾತ್ರವಲ್ಲ ಅವುಗಳ ಲೋಪದೋಷಗಳಿಂದಾಗಿ ಆ ತೊಡುಕುಗಳಿಗೆ ಇನ್ನಷ್ಟು ಗೊಂದಲಗಳು ಸೇರಿಕೊಂಡಿವೆ. ಅಜ್ಞಾನ ಕಾರಣದಿಂದ ಮುಸಲ್ಮಾನರ ಒಂದು ವಿಭಾಗ ಈ ತೊಡಕು-ಗೊಂದಲಗಳಿಗೆಲ್ಲಾ ಇಸ್ಲಾಮೀ ಕಾನೂನೇ ಕಾರಣವೆಂದು ಭಾವಿಸಿದೆ. ಆದ್ದರಿಂದಲೇ ಒಂದು ಹೊಸ ಕಾನೂನಿನ ಆವಿಷ್ಕಾರ ಆಗಬೇಕೆಂದು ಒತ್ತಾಯಿಸಲಾಗುತ್ತದೆ. ವಸ್ತುತಃ ಇಸ್ಲಾಮಿನಲ್ಲಿ ಸಮಗ್ರವಾದ ಒಂದು ವೈವಾಹಿಕ ಕಾನೂನು ಇದೆ. ಇದರಲ್ಲಿ ಪೂರ್ಣ ನ್ಯಾಯದೊಂದಿಗೆ ದಂಪತಿಗಳ ಹಕ್ಕು ಬಾಧ್ಯತೆಗಳನ್ನು ನಿರ್ಣಯಿಸಲಾಗಿದೆ. ಆ ಹಕ್ಕುಗಳನ್ನು ರಕ್ಷಿಸುವ ಮತ್ತು ಉಲ್ಲಂಘನೆಯ ಸಂದರ್ಭದಲ್ಲಿ (ಆ ಉಲ್ಲಂಘನೆಯು ಸ್ತ್ರೀಯ ಕಡೆಯಿಂದಾಗಿರಲಿ, ಪುರುಷನ ಕಡೆಯಿಂದಾಗಿರಲಿ) ವಿಚಾರಣೆ ನಡೆಸಿ ಇತ್ಯರ್ಥ ಮಾಡುವ ಪೂರ್ಣ ವ್ಯವಸ್ಥೆಯನ್ನು ಮಾಡಲಾಗಿದೆ. ಯಾವ ತೊಡಕನ್ನೂ ನ್ಯಾಯಪೂರ್ಣವಾಗಿ ಪರಿಹರಿಸದೆ ಬಿಟ್ಟಿಲ್ಲ. ಆದ್ದರಿಂದ ಮುಸಲ್ಮಾನರಿಗೆ ಒಂದು ಹೊಸ ಕಾನೂನಿನ ಅಗತ್ಯವೇ ಇಲ್ಲ. ಈಗಿನ ಅಗತ್ಯ ಇಸ್ಲಾಮಿನ ದಾಂಪತ್ಯ ಕಾನೂನನ್ನು ಸರಿಯಾದ ರೂಪದಲ್ಲಿ ಪ್ರಸ್ತುತ ಪಡಿಸುವುದು ಮತ್ತು ಸರಿಯಾದ ರೀತಿಯಲ್ಲಿ ಅದನ್ನು ಜಾರಿಗೊಳಿಸುವುದು ಮಾತ್ರವಾಗಿದೆ. ಇದು ಅಷ್ಟೊಂದು ಸುಲಭದ ಕೆಲಸವಲ್ಲ. ಮುಸಲ್ಮಾನರಲ್ಲಿ ಪ್ರಚಲಿತವಿರುವ ದಾಂಪತ್ಯ ವಿಷಯಗಳಿಗೆ ಸಂಬಂಧಿಸಿದ ಗೊಂದಲಗಳನ್ನು ನಿವಾರಿಸುವಂತೆ ಇಸ್ಲಾಮಿನ ದಾಂಪತ್ಯ ಕಾನೂನನ್ನು ಕಾಲದ ಬೇಡಿಕೆಗಳು ಮತ್ತು ಪರಿಸ್ಥಿತಿಗನುಸಾರ ರೂಪಿಸಬೇಕಾದುದು ಮತ್ತು ಈ ಬಗ್ಗೆ ಗೊಡ್ಡು ಸಂಪ್ರದಾಯವಾದಕ್ಕೆ ಜೋತು ಬೀಳದಿರುವುದು ಧರ್ಮ ಪಂಡಿತರ ಕರ್ತವ್ಯವಾಗಿದೆ. ಆ ಬಳಿಕ ಮುಸ್ಲಿಮ್ ಸಾರ್ವಜನಿಕರಿಗೆ ಅದರ ಶಿಕ್ಷಣ ನೀಡುವ ಮೂಲಕ ಅವರು ತಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಇಸ್ಲಾಮೇತರ ಸಂಸ್ಕೃತಿಗಳಿಂದ ಬಂದು ಸೇರಿರುವ ಅಜ್ಞಾನಜನ್ಯ ಸಂಪ್ರದಾಯ ಮತ್ತು ಮೂಢ ವಿಚಾರಗಳಿಂದ ತಮ್ಮನ್ನು ಮುಕ್ತಗೊಳಿಸಲು ಶಕ್ತರಾಗುವಂತೆ ಮಾಡಬೇಕಾಗಿದೆ. ಅವರು ಇಸ್ಲಾಮೀ ಕಾನೂನಿನ ತತ್ವ ಮತ್ತು ಸ್ಫೂರ್ತಿಯನ್ನರಿತು ಅದರಂತೆ ತಮ್ಮ ವ್ಯವಹಾರಗಳನ್ನು ನಡೆಸುವಂತೆ ಮಾಡಬೇಕಾಗಿದೆ. ಅದಕ್ಕೆ ಈ ಕಾನೂನಿನ ಮೇಲೆ ವಿಶ್ವಾಸವಿಡುವ ಮತ್ತು ಈ ಕಾನೂನಿನ ಜಾರಿಗೆ ಅಗತ್ಯವಿರುವ ಬೌದ್ಧಿಕ ಹಾಗೂ ನೈತಿಕ ತರಬೇತಿ ಹೊಂದಿದ ನ್ಯಾಯಾಧೀಶರಿರುವ ವ್ಯವಸ್ಥೆಯ ಅಗತ್ಯವಿದೆ. ಅದರಿಂದ ಮಾತ್ರ ಇಸ್ಲಾಮೀ ಸ್ಫೂರ್ತಿಯೊಂದಿಗೆ ಆ ಕಾನೂನನ್ನು ಜಾರಿಗೊಳಿಸಬಹುದು.

ಪ್ರಸ್ತುತ ಅಗತ್ಯವನ್ನು ಮುಂದಿಟ್ಟೇ ಈ ಗ್ರಂಥವನ್ನು ಬರೆಯಲಾಗಿದೆ. ಮುಂದಿನ ಪುಟಗಳಲ್ಲಿ ಇಸ್ಲಾಮಿನ ವೈವಾಹಿಕ ಕಾನೂನಿನ ಒಂದು ಪೂರ್ಣ ಚಿತ್ರವನ್ನು ನಾವು ನಿಮ್ಮ ಮುಂದಿಡ ಬಯಸುತ್ತೇವೆ. ಅದರಲ್ಲಿ ಈ ಕಾನೂನಿನ ಉದ್ದೇಶಗಳು, ತತ್ವಗಳು ಮತ್ತು ವಿಧಿಗಳು ಆಯಾ ಜಾಗದಲ್ಲಿ ವಿವರಿಸಲ್ಪಡುವುವು. ಅದರಿಂದ ಆಂಶಿಕ ಸಮಸ್ಯೆಗಳ ಇತ್ಯರ್ಥಕ್ಕೆ ನೆರವಾಗುವಂತೆ ಅಗತ್ಯಾನುಸಾರ ವಿವರಣೆಗಾಗಿ ಪ್ರವಾದಿ(ಸ) ಹಾಗೂ ಸಹಾಬಿಗಳ(ರ)

ತೀರ್ಮಾನಗಳು ಮತ್ತು ಹಿಂಗಾಮಿಗಳಾದ ಇಮಾಮರ ಸಂಶೋಧನಾತ್ಮಕ ಅಭಿಪ್ರಾಯಗಳನ್ನು ನೀಡುವೆವು. ಇಸ್ಲಾಮೀ ಶರೀಅತ್‌ಗೆ ಅನುಗುಣವಾಗಿ ಮುಸಲ್ಮಾನರ ವೈವಾಹಿಕ ವ್ಯವಹಾರಗಳಲ್ಲಿರುವ ಗೊಂದಲಗಳ ನಿವಾರಣೆಗಾಗಿ ಕೆಲವು ಸಲಹೆಗಳನ್ನೂ ನಾವು ಕೊನೆಯಲ್ಲಿ ನೀಡುವೆವು. ವಾಸ್ತವದಲ್ಲಿ ಈ ಗೊಂದಲಗಳ ನಿವಾರಣೆ ಇಸ್ಲಾಮೀ ಸರಕಾರ ಮತ್ತು ಶರೀಅತ್ ನ್ಯಾಯಾಲಯದ ಸ್ಥಾಪನೆಯಿಂದ ಮಾತ್ರ ಸಾಧ್ಯ. ಆದರೆ ಪ್ರಸಕ್ತ ಅವನತಿಯನ್ನು ಪರಿಗಣಿಸಿ ಸದ್ಯದ ಸ್ಥಿತಿಯಲ್ಲಿ ಮುಸಲ್ಮಾನರ ವೈವಾಹಿಕ ಜೀವನದಲ್ಲಿ ತಲೆದೋರಿರುವ ಕುಂದು ಕೊರತೆಗಳನ್ನು ತಕ್ಕ ಮಟ್ಟಿಗೆ ಶರೀಅತ್‌ಗೆ ಅನುಗುಣವಾಗಿ ಪರಿಹರಿಸುವ ಒಂದು ಕನಿಷ್ಠ ರೂಪವನ್ನು ಮುಂದಿರಿಸಲಾಗುವುದು. ಇದರಿಂದ ಈ ಸಮಸ್ಯೆಗಳ ಪರಿಹಾರಕ್ಕೆ ಪ್ರಯತ್ನಿಸುವವರಿಗೆ ಶರೀಅತ್‌ಗೆ ಬದ್ಧವಾದ ಒಂದು ದಿಕ್ಕು ಲಭಿಸಬಹುದು.

# ವೈವಾಹಿಕ ಕಾನೂನಿನ ಉದ್ದೇಶ

ಕಾನೂನಿನಲ್ಲಿ ಅತ್ಯಧಿಕ ಮಹತ್ವವಿರುವುದು ಅದರ ಉದ್ದೇಶಕ್ಕೆ. ಆದುದರಿಂದ ಕಾನೂನಿನ ವಿವರಗಳನ್ನು ತಿಳಿಯುವ ಮೊದಲು ಅದರ ಉದ್ದೇಶವನ್ನು ತಿಳಿಯುವುದು ಅಗತ್ಯ. ಉದ್ದೇಶದ ಈಡೇರಿಕೆಗಾಗಿಯೇ ತತ್ವಗಳನ್ನು ಆವಿಷ್ಕರಿಸಲಾಗುತ್ತದೆ. ಆ ತತ್ವಗಳ ಆಧಾರದಲ್ಲೇ ಕಾನೂನುಗಳು ಜಾರಿಗೆ ಬರುತ್ತವೆ. ಒಬ್ಬನು ಉದ್ದೇಶವನ್ನು ತಿಳಿಯದೆ ನಿಯಮಗಳನ್ನು ಜಾರಿಗೊಳಿಸಲು ಹೊರಟರೆ ಕೆಲವೊಮ್ಮೆ ಯಾವುದಾದರೂ ವಿಷಯದಲ್ಲಿ ಜಾರಿಗೊಳಿಸುವ ನಿಯಮವು ಕಾನೂನಿನ ಉದ್ದೇಶಕ್ಕೇ ವಿರುದ್ಧವಾಗಿರಬಹುದು. ಇದೇ ರೀತಿ ಕಾನೂನಿನ ಉದ್ದೇಶವನ್ನು ಅರಿಯದವನು ಕಾನೂನಿನ ನೈಜ ಸ್ಫೂರ್ತಿಯೊಂದಿಗೆ ಅದನ್ನು ಜಾರಿಗೊಳಿಸಲಾರ. ಆದ್ದರಿಂದ ಇಸ್ಲಾಮ್ ಧರ್ಮದಲ್ಲಿ ವೈವಾಹಿಕ ಕಾನೂನನ್ನು ಯಾವ ಉದ್ದೇಶಗಳಿಗಾಗಿ ರಚಿಸಲಾಗಿದೆಯೋ ಅವುಗಳನ್ನು ನಾನು ಮೊದಲು ವಿವರಿಸುವೆನು.

## ಚಾರಿತ್ರ್ಯ ಮತ್ತು ಮಾನದ ಸಂರಕ್ಷಣೆ:

ಇಸ್ಲಾಮೀ ವೈವಾಹಿಕ ಕಾನೂನಿನ ಪ್ರಥಮ ಉದ್ದೇಶ ಚಾರಿತ್ರ್ಯದ ಸಂರಕ್ಷಣೆಯಾಗಿದೆ. ಅದು ವ್ಯಭಿಚಾರವನ್ನು ನಿಷೇದಿಸುತ್ತದೆ. ಗಂಡು - ಹೆಣ್ಣುಗಳೆಂಬ ಮಾನವ ಕುಲದ ಎರಡು ವರ್ಗಗಳೂ ತಮ್ಮ ನೈಸರ್ಗಿಕ ಸಂಬಂಧಗಳನ್ನು ಒಂದು ವ್ಯವಸ್ಥೆಗೆ ಒಳಪಡಿಸುವಂತೆ ಅದು ನಿರ್ಬಂಧಿಸುತ್ತದೆ. ಆ ವ್ಯವಸ್ಥೆಯು ಚಾರಿತ್ರ್ಯವನ್ನು ಅಸಭ್ಯ ಮತ್ತು ಅಶ್ಲೀಲತೆಯಿಂದ ಹಾಗೂ ನಾಗರಿಕತೆಯನ್ನು ಗೊಂದಲದಿಂದ ರಕ್ಷಿಸುವಂತಿರಬೇಕು. ಆದ್ದರಿಂದಲೇ ಪವಿತ್ರ ಕುರ್‌ಆನಿನಲ್ಲಿ ವಿವಾಹಕ್ಕೆ 'ಇಹ್‌ಸಾನ್' ಎಂಬ ಪದ ಪ್ರಯೋಗ ಮಾಡಲಾಗಿದೆ. 'ಹಸ್ನ್' ಎಂದರೆ ಕೋಟೆ 'ಇಹ್‌ಸಾನ್' ಎಂದರೆ ಕೋಟೆ ನಿರ್ಮಿಸುವುದು. ವಿವಾಹ ಮಾಡಿಕೊಳ್ಳುವ ಪುರುಷನು 'ಮುಹ್ಸಿನ್' ಆಗುತ್ತಾನೆ. ಅವನೊಂದು ಕೋಟೆ ಕಟ್ಟಿಕೊಳ್ಳುತ್ತಾನೆ. ವಿವಾಹವಾಗುವ ಸ್ತ್ರೀಯು 'ಮುಹ್ಸಿನಃ' ಅರ್ಥಾತ್ ಆ ಕೋಟೆಯ ರಕ್ಷಣೆಯಲ್ಲಿ ಬಂದವಳಾಗುತ್ತಾಳೆ. ವಿವಾಹದ ರೂಪದಲ್ಲಿ ತನ್ನ ಶರೀರ ಮತ್ತು ಚಾರಿತ್ರ್ಯದ ರಕ್ಷಣೆಗೆ ಒಂದು ಕೋಟೆ ಕಟ್ಟಿಕೊಂಡಂತೆ ಎಂದೇ ಇದರ ಅರ್ಥ. ಇಸ್ಲಾಮಿನಲ್ಲಿ ವಿವಾಹದ ಪ್ರಥಮ ಉದ್ದೇಶ ಚಾರಿತ್ರ್ಯ ಮತ್ತು ಮಾನವ ಸಂರಕ್ಷಣೆಯೆಂಬುದು ಈ ಪದದ ಪ್ರಯೋಗದಿಂದಲೇ ವ್ಯಕ್ತವಾಗುತ್ತದೆ. ವೈವಾಹಿಕ ಕಾನೂನಿನ ಪ್ರಥಮ ಕೆಲಸ ವಿವಾಹದ ರೂಪದಲ್ಲಿ ಆ ಅತ್ಯಮೂಲ್ಯ ವಸ್ತುವಿನ ಸಂರಕ್ಷಣೆಗೆ ಕಟ್ಟಲಾದ ಕೋಟೆಯನ್ನು ಸುಭದ್ರಗೊಳಿಸುವುದಾಗಿದೆ. ಪವಿತ್ರ ಕುರ್‌ಆನ್ ಈ ರೀತಿ ಹೇಳುತ್ತದೆ.

"ಇತರರ ವಿವಾಹ ಬಂಧನದಲ್ಲಿರುವ ಸ್ತ್ರೀಯರೂ (ಮುಹ್ಸನಾತ್) ನಿಮಗೆ ನಿಷಿದ್ಧರಾಗಿದ್ದಾರೆ. ಆದರೆ (ಯುದ್ಧದಲ್ಲಿ) ನಿಮ್ಮ ವಶಕ್ಕೆ ಬಂದ ಸ್ತ್ರೀಯರು ಇದಕ್ಕೆ ಹೊರತಾಗಿರುತ್ತಾರೆ. ಇದು ನಿಮ್ಮ ಮೇಲೆ ಅಲ್ಲಾಹನು ನಿರ್ಬಂಧಗೊಳಿಸಿರುವ ಕಾನೂನು. ಇವರ ಹೊರತಾಗಿರುವ ಸ್ತ್ರೀಯರನ್ನು ನೀವು ನಿಮ್ಮ ಸಂಪತ್ತಿನ ಮೂಲಕ ಗಳಿಸುವುದನ್ನು ಧರ್ಮಬದ್ಧಗೊಳಿಸಲಾಗಿದೆ. ಆದರೆ ಅವರನ್ನು ವಿವಾಹ ಬಂಧನದಲ್ಲಿಡಬೇಕು. ಸ್ವಚ್ಛಂದ ಲೈಂಗಿಕತೆ ಸಲ್ಲದು..." (ಅನ್ನಿಸಾ : 24)

ಅದು ಮಹಿಳೆಯರ ಕುರಿತು ಈ ರೀತಿ ಹೇಳುತ್ತದೆ:

"...ಆದುದರಿಂದ ನೀವು ಅವರ ಪೋಷಕರ ಅನುಮತಿಯಿಂದ ಅವರೊಂದಿಗೆ ವಿವಾಹ ಮಾಡಿಕೊಳ್ಳಿರಿ ಮತ್ತು ಅವರು ವಿವಾಹ ಬಂಧನದಲ್ಲಿ ಸುರಕ್ಷಿತೆ (ಮುಹ್ಸನಾತ್)ಯರಾಗಿರುವಂತೆಯೂ ಮುಕ್ತ ಲೈಂಗಿಕ ಸಂಬಂಧ ಹೊಂದಿರದಂತೆಯೂ ರಹಸ್ಯ ಕಾಮುಕರನ್ನು ಅರಸದಂತೆಯೂ ಉತ್ತಮ ರೀತಿಯಲ್ಲಿ ಅವರ ವಿವಾಹ ಧನವನ್ನು ಅವರಿಗೆ ಸಲ್ಲಿಸಿರಿ...." (ಅನ್ನಿಸಾ : 25)

ಇನ್ನೊಂದೆಡೆ ಹೀಗಿದೆ:

"ಇಂದು ನಿಮಗೆ ಸಕಲ ಶುದ್ಧ ವಸ್ತುಗಳೂ 'ಧರ್ಮಸಮ್ಮತ' ಮಾಡಲ್ಪಟ್ಟಿವೆ. ಗ್ರಂಥದವರ ಆಹಾರ ನಿಮಗೂ ನಿಮ್ಮ ಆಹಾರ ಅವರಿಗೂ 'ಧರ್ಮಸಮ್ಮತ' ಆಗಿರುತ್ತದೆ. ಸುಶೀಲ ಸ್ತ್ರೀಯರು - ಅವರು ಸತ್ಯವಿಶ್ವಾಸಿ ವರ್ಗದವರಿರಲಿ ಅಥವಾ ನಿಮಗಿಂತ ಮುಂಚೆ ಗ್ರಂಥ ನೀಡಲ್ಪಟ್ಟ ವರ್ಗದವರಿರಲಿ- ನೀವು ಅವರಿಗೆ 'ವಿವಾಹಧನ' ಕೊಟ್ಟು ವಿವಾಹದಲ್ಲಿ ಅವರ ರಕ್ಷಕರಾದರೆ ನಿಮಗೆ ಅವರು ಧರ್ಮಸಮ್ಮತ ಆಗಿರುತ್ತಾರೆ. ಅನಿಯಂತ್ರಿತ ಲೈಂಗಿಕ ಸಂಬಂಧವಿರಿಸಿಕೊಳ್ಳುವುದು ಅಥವಾ ರಹಸ್ಯ ಕಾಮುಕರಾಗಿರುವುದು ಸಲ್ಲದು..." (ಅಲ್ ಮಾಇದಃ : 5) ಈ ಆಯತ್‌ಗಳ ಪದಗಳನ್ನೂ ಅರ್ಥವನ್ನು ಕುರಿತು ಚಿಂತಿಸಿದಾಗ ಸ್ತ್ರೀ-ಪುರುಷರ ವೈವಾಹಿಕ ಸಂಬಂಧದಲ್ಲಿ ಇಸ್ಲಾಮಿನ ದೃಷ್ಟಿಯಲ್ಲಿ ಅತ್ಯಧಿಕ ಮಹತ್ವವಿರುವುದು'ಇಹ್ಸಾನ್' ಅರ್ಥಾತ್ ಚಾರಿತ್ರ್ಯ ಮತ್ತು ಮಾನ ಮರ್ಯಾದೆಗಳ ಪೂರ್ಣ ಸಂರಕ್ಷಣೆಗೆ ಎಂದು ತಿಳಿದು ಬರುತ್ತದೆ. ಈ ಉದ್ದೇಶಕ್ಕಾಗಿ ಯಾವ ಇತರ ಬೇಡಿಕೆಯನ್ನೂ ಬಲಿಕೊಡಬಹುದು. ಆದರೆ ಯಾವುದೇ ಇತರ ಬೇಡಿಕೆಗಾಗಿ ಈ ಉದ್ದೇಶವನ್ನು ಬಲಿಕೊಡುವಂತಿಲ್ಲ. ಪತಿ-ಪತ್ನಿಯರನ್ನು ವೈವಾಹಿಕ ಬಂಧನದಲ್ಲಿಡುವುದು, ಅವರು ಅಲ್ಲಾಹನು ನಿಶ್ಚಯಿಸಿದ ಮೇರೆಗಳೊಳಗೆ ಇದ್ದುಕೊಂಡು ತಮ್ಮ ನೈಸರ್ಗಿಕ ಬಯಕೆಗಳನ್ನು ಪೂರೈಸಿಕೊಳ್ಳಬೇಕು ಎಂಬುದಕ್ಕಾಗಿದೆ. ಆದರೆ ಯಾವುದಾದರೂ ವೈವಾಹಿಕ ಸಂಬಂಧದಿಂದಾಗಿ ಅಲ್ಲಾಹನ ಮೇರೆಗಳನ್ನು ಮೀರುವ ಪರಿಸ್ಥಿತಿ ಒದಗಿದರೆ ಆಗ ವಿವಾಹ ಬಾಹ್ಯ ಬಂಧನಗಳನ್ನು ಉಳಿಸಲಿಕ್ಕಾಗಿ ಅಲ್ಲಾಹನ ಮೇರೆಗಳನ್ನು ಮೀರುವುದಕ್ಕಿಂತ ಆ ಮೇರೆಗಳ ರಕ್ಷಣೆಗಾಗಿ ವಿವಾಹ ಬಂಧನಗಳನ್ನು ಬಲಿ ನೀಡುವುದು ಹೆಚ್ಚು ಉತ್ತಮವಾಗಿದೆ. ಆದ್ದರಿಂದಲೇ ಪ್ರಮಾಣ ಮಾಡಿ ಬೇರ್ಪಟ್ಟು ಉಳಿಯುವ ದಂಪತಿಗಳು ನಾಲ್ಕು ತಿಂಗಳುಗಳಿಗಿಂತ ಅಧಿಕ ಸಮಯ ತಮ್ಮ

ಪ್ರಮಾಣದಲ್ಲಿ ಸ್ಥಿರವಾಗಿರಬಾರದು ಎಂದು ಆಜ್ಞಾಪಿಸಲಾಗಿದೆ. ನಾಲ್ಕು ತಿಂಗಳ ಬಳಿಕವೂ ಅವರು ತಮ್ಮ ಪ್ರಮಾಣದಿಂದ ಹಿಂಜರಿಯದಿದ್ದರೆ ತಮಗಿಷ್ಟವಿಲ್ಲದ ಸ್ತ್ರೀಯನ್ನು ವಿವಾಹ ಬಂಧನದಲ್ಲಿರಿಸುವ ಯಾವ ಹಕ್ಕೂ ಅವರಿಗಿರುವುದಿಲ್ಲ. ಯಾಕೆಂದರೆ ಇದರಿಂದಾಗಿ ಸ್ತ್ರೀಯು ತನ್ನ ನೈಸರ್ಗಿಕ ಬೇಡಿಕೆಗಳನ್ನು ಈಡೇರಿಸುವ ಸಲುವಾಗಿ ಅಲ್ಲಾಹನ ಮೇರೆಗಳನ್ನು ಮೀರಲು ನಿರ್ಬಂಧಿತಳಾಗುವಳು. ಇದನ್ನು ಇಸ್ಲಾಮೀ ಕಾನೂನು ಯಾವ ಪರಿಸ್ಥಿತಿಯಲ್ಲೂ ಸಹಿಸುವುದಿಲ್ಲ. ಅಂತೆಯೇ ಒಂದಕ್ಕಿಂತ ಅಧಿಕ ಪತ್ನಿಯಿರುವವರಿಗೆ

**"...ಆದುದರಿಂದ ಒಬ್ಬ ಪತ್ನಿಯು ಅತ್ತ ಜೋತಾಡಿ ಕೊಂಡಿರುವಂತೆ ಬಿಟ್ಟು ಇನ್ನೊಬ್ಬಳ ಕಡೆಗೇ ವಾಲಿಬಿಡಬೇಡಿರಿ..." (ಅನ್ನಿಸಾ: 129)** ಎಂದು ಈಡೇರಿಸಲು ಪವಿತ್ರ ಕುರ್‌ಆನ್ ಆದೇಶಿಸಿದೆ.

ಈ ಆದೇಶದ ಉದ್ದೇಶವು ಸ್ತ್ರೀಯನ್ನು ಅಲ್ಲಾಹನ ಮೇರೆ ಮೀರಲು ನಿರ್ಬಂಧಿತಳಾಗುವ ಪರಿಸ್ಥಿತಿಯಲ್ಲಿ ಸಿಲುಕಿಸಬಾರದೆಂಬುದೇ ಆಗಿದೆ. ಇಂಥ ಪರಿಸ್ಥಿತಿಯಲ್ಲಿ ವಿವಾಹದ ಬಾಹ್ಯ ಬಂಧನಗಳನ್ನು ಉಳಿಸುವುದಕ್ಕಿಂತ ಅದನ್ನು ಮುರಿಯುವುದೇ ಉತ್ತಮವಾಗಿದೆ. ಇದರಿಂದ ಸ್ತ್ರೀಯು ಯಾರಾದರೂ ಇತರ ಪುರುಷರೊಡನೆ ವಿವಾಹವಾಗಲು ಸ್ವತಂತ್ರಳಾಗುವಳು. ಸ್ತ್ರೀಯರಿಗೆ 'ಖುಲಾ'ದ ಹಕ್ಕನ್ನೂ ಇದೇ ಉದ್ದೇಶಕ್ಕಾಗಿ ನೀಡಲಾಗಿದೆ. ಓರ್ವ ಸ್ತ್ರೀಯನ್ನು ಆಕೆಗೆ ಇಷ್ಟವಿಲ್ಲದ ಅಥವಾ ಆಕೆ ಲೈಂಗಿಕ ಸಂತೃಪ್ತಿ ಹೊಂದದ ಪತಿಯ ಬಳಿ ಇರಿಸುವುದು ಆಕೆಯನ್ನು ಅಲ್ಲಾಹನ ಆಜ್ಞೆಯ ಉಲ್ಲಂಘನೆಗೆ ನಿರ್ಬಂಧಿಸಿದಂತೆ. ಆದ್ದರಿಂದ ಅಂಥ ಸ್ತ್ರೀಯು ಪುರುಷನಿಂದ ಮಹರ್‌ನ ರೂಪದಲ್ಲಿ ಪಡೆದ ಸೊತ್ತನ್ನು ಅಥವಾ ಅದಕ್ಕಿಂತ ಸ್ವಲ್ಪ ಹೆಚ್ಚು ಕಡಿಮೆ ಆತನಿಗೆ ಮರಳಿಸಿ ವಿವಾಹ ಬಂಧನದಿಂದ ಮುಕ್ತಳಾಗಬಹುದು. ಇಸ್ಲಾಮೀ ಕಾನೂನಿನ ಈ ವಿಧಿಗಳನ್ನು ಮುಂದೆ ವಿವರವಾಗಿ ಪರಾಮರ್ಶಿಸಲಾಗುವುದು. ಇಲ್ಲಿ ಈ ಉದಾಹರಣೆಗಳನ್ನು ಕೊಡುವುದರ ಉದ್ದೇಶ ಇಸ್ಲಾಮೀ ಕಾನೂನಿನಲ್ಲಿ ಚಾರಿತ್ರ್ಯ ಮತ್ತು ಮಾನ-ಮರ್ಯಾದೆಗಳ ರಕ್ಷಣೆಗೆ ಅತ್ಯಧಿಕ ಮಹತ್ವ ಕೊಡಲಾಗಿದೆ ಎಂದು ಸಾದರ ಪಡಿಸುವುದಾಗಿದೆ. ಅದು ವಿವಾಹ ಬಂಧನವನ್ನು ಸಾಧ್ಯವಿದ್ದಷ್ಟು ಭದ್ರಗೊಳಿಸಲು ಮತ್ತು ಉಳಿಸಲು ಪ್ರಯತ್ನಿಸುತ್ತದಾದರೂ ಚಾರಿತ್ರ್ಯ ಮತ್ತು ಮಾನಕ್ಕೆ ಧಕ್ಕೆ ಒದಗುವ ಸಂದರ್ಭ ಬಂದಾಗ ಆ ಅಮೂಲ್ಯ ಸಂಪತ್ತಿನ ಸಂರಕ್ಷಣೆಗಾಗಿ ವಿವಾಹ ಬಂಧವನ್ನು ಮುರಿಯುವುದು ಅನಿವಾರ್ಯವೆಂದು ಭಾವಿಸುತ್ತದೆ. ಮುಂದೆ ವಿವರಿಸಲಾಗುವ ಇಸ್ಲಾಮೀ ಕಾನೂನಿನ ವಿಧಿಗಳನ್ನು ತಿಳಿಯುವುದಕ್ಕಾಗಿ ಮತ್ತು ಅವುಗಳನ್ನು ಕಾನೂನಿನ ನೈಜ ಸ್ಫೂರ್ತಿಯೊಂದಿಗೆ ಜಾರಿಗೊಳಿಸುವುದಕ್ಕಾಗಿ ಈ ಅಂಶವನ್ನು ಚೆನ್ನಾಗಿ ಗ್ರಹಿಸುವುದು ಅತ್ಯಗತ್ಯವಾಗಿದೆ.

## ಪ್ರೀತಿ ಮತ್ತು ಉದ್ದೇಶ

ಎರಡನೇ ಮುಖ್ಯ ಉದ್ದೇಶ ಸ್ತ್ರೀ ಪುರುಷರ ಮಧ್ಯೆ ವೈವಾಹಿಕ ಸಂಬಂಧವು ಪ್ರೀತಿ ಮತ್ತು ಕರುಣೆಯ ಆಧಾರದಲ್ಲಿರಬೇಕೆಂಬುದಾಗಿದೆ. ಇದರಿಂದ ಪತಿ-ಪತ್ನಿಯರು ತಮ್ಮ ವೈವಾಹಿಕ ಜೀವನದ ಸಾಂಸ್ಕೃತಿಕ ಮತ್ತು ನಾಗರಿಕ ಉದ್ದೇಶಗಳನ್ನು ಸರಿಯಾಗಿ ಈಡೇರಿಸಲು ಶಕ್ತರಾಗುವರು.

ಅವರ ವೈಯಕ್ತಿಕ ಜೀವನದಲ್ಲಿ ಅದರಿಂದ ಸುಖ-ಸಂತೋಷ ಹಾಗೂ ಶಾಂತಿ-ಸಮಾಧಾನ ಲಭ್ಯವಾಗುತ್ತದೆ. ಮಾನವ ಸಂಸ್ಕೃತಿಯ ಉನ್ನತ ಉದ್ದೇಶಗಳ ಈಡೇರಿಕೆಗೆ ಬೇಕಾದ ಶಕ್ತಿಯನ್ನು ಅದು ಅವರಿಗೆ ನೀಡುತ್ತದೆ. ಕುರ್‌ಆನ್‌ನಲ್ಲಿ ಈ ಕುರಿತು ಬಂದಿರುವ ಪ್ರಸ್ತಾಪಗಳನ್ನು ಗಮನಿಸಿದರೆ ಇಸ್ಲಾಮಿನ ದೃಷ್ಟಿಯಲ್ಲಿ ಪ್ರೀತಿ ಮತ್ತು ಕರುಣೆಯ ಹೊರತು ದಾಂಪತ್ಯ ಕಲ್ಪನೆಯೇ ಸಾಧ್ಯವಿಲ್ಲವೆಂದು ತಿಳಿದು ಬರುತ್ತದೆ. ಅವರನ್ನು ಪತಿ-ಪತ್ನಿಯರಾಗಿ ಮಾಡಿರುವುದು ಪರಸ್ಪರ ಬಳಿ ನೆಮ್ಮದಿ ಪಡೆಯಲಿಕ್ಕಾಗಿ ಎಂದೂ ತಿಳಿದು ಬರುತ್ತದೆ. ಪವಿತ್ರ ಕುರ್‌ಆನ್ ಈ ರೀತಿ ಹೇಳುತ್ತದೆ:

"ಅವನು ನಿಮಗಾಗಿ ನಿಮ್ಮ ವರ್ಗದಿಂದಲೇ ಜೋಡಿಗಳನ್ನು ಸೃಷ್ಟಿಸಿ, ನೀವು ಅವರ ಬಳಿ ಪ್ರಶಾಂತಿಯನ್ನು ಪಡೆಯುವಂತೆ ಮಾಡಿದುದು ಮತ್ತು ನಿಮ್ಮ ನಡುವೆ ಪ್ರೇಮ ಮತ್ತು ಅನುಕಂಪವನ್ನುಂಟು ಮಾಡಿದುದೂ ಅವನ ನಿದರ್ಶನಗಳಲ್ಲೊಂದಾ ಗಿದೆ. ನಿಶ್ಚಯವಾಗಿಯೂ ವಿವೇಚಿಸುವವರಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ."

(ಅರ್ರೂಮ್ : 21)

ಇನ್ನೊಂದೆಡೆ ಈ ರೀತಿ ಇದೆ:

"ನಿಮ್ಮನ್ನು ಒಂದು ವ್ಯಕ್ತಿಯಿಂದ ಸೃಷ್ಟಿಸಿದವನು ಅಲ್ಲಾಹನೇ ಆಗಿರುತ್ತಾನೆ ಮತ್ತು ಅವನು ಅದೇ ವ್ಯಕ್ತಿಯಿಂದ ಅದರ ಜೋಡಿಯನ್ನು ಉಂಟು ಮಾಡಿದನು. (ಇದು) ಅವಳಿಂದ ಮನಶ್ಶಾಂತಿ ಪಡೆಯಲಿಕ್ಕಾಗಿ..." (ಅಲ್ ಅಲ್‌ರಾಫ್: 189)

ಇನ್ನೊಂದು ಶೈಲಿಯಲ್ಲಿ ಅದು ವೈವಾಹಿಕ ಸಂಬಂಧದ ಕಲ್ಪನೆಯನ್ನು ಈ ರೀತಿ ಮುಂದಿಟ್ಟಿದೆ:

"...ಅವರು ನಿಮಗೆ ಉಡುಪಾಗಿರುವರು ಮತ್ತು ನೀವು ಅವರಿಗೆ ಉಡು ಪಾಗಿರುವಿರಿ..."

(ಅಲ್ ಬಕರಃ : 187)

ಇಲ್ಲಿ ಪತಿ-ಪತ್ನಿಯರನ್ನು ಪರಸ್ಪರರ ಉಡುಪೆಂದು ವರ್ಣಿಸಲಾಗಿದೆ. ಉಡುಪು ಮನುಷ್ಯ ಶರೀರಕ್ಕೆ ತಾಗಿ ಇರುವ ವಸ್ತು. ಅದು ಅವನ ಮಾನವನ್ನು ಮರೆಸುತ್ತದೆ. ಬಾಹ್ಯ ವಾತಾವರಣದ ದುಷ್ಪರಿಣಾಮದಿಂದ ಅವನನ್ನು ರಕ್ಷಿಸುತ್ತದೆ. ಈ ಉಡುಪಿನ ಉಪಮೆಯನ್ನು ದಂಪತಿಗಳಿಗೆ ಬಳಸುವ ಉದ್ದೇಶ ಅವರ ಮಧ್ಯೆ ಇರುವ ಸಂಬಂಧವು ನಿಜವಾಗಿ ಬಟ್ಟೆ ಮತ್ತು ಶರೀರದ ಸಂಬಂಧದಂತೆಯೇ ಆಗಿದೆ ಎಂದು ತಿಳಿಸುವುದಾಗಿದೆ. ಅವರ ಶರೀರ ಮತ್ತು ಆತ್ಮಗಳು ಪರಸ್ಪರ ಬೆರೆಯಬೇಕು. ಅವರು ಪರಸ್ಪರರ ಮಾನ ರಕ್ಷಿಸಬೇಕು, ಅವರ ಮಾನ ಮತ್ತು ಚಾರಿತ್ರ್ಯದ ಮೇಲೆ ಬರಬಹುದಾದ ಅಪವಾದದಿಂದ ಪರಸ್ಪರರನ್ನು ರಕ್ಷಿಸುವವರಾಗಬೇಕು. ಇದುವೇ ಪ್ರೇಮ ಮತ್ತು ಕರುಣೆಯ ಉದ್ದೇಶವಾಗಿದೆ. ಇಸ್ಲಾಮೀ ದೃಷ್ಟಿಕೋನದಲ್ಲಿ ಇದು ದಾಂಪತ್ಯ ಸಂಬಂಧದ ನೈಜ ಜೀವಾಳವಾಗಿದೆ. ವೈವಾಹಿಕ ಜೀವನದಲ್ಲಿ ಈ ಜೀವಾಳ ಇಲ್ಲದೆ ಹೋದರೆ ಅದೊಂದು ಮೃತ ಶರೀರ ಇದ್ದಂತೆಯೇ ಸರಿ.

ಇಸ್ಲಾಮಿನಲ್ಲಿ ವೈವಾಹಿಕ ಸಂಬಂಧದ ಕುರಿತಿರುವ ಎಲ್ಲ ಕಾನೂನುಗಳಲ್ಲೂ ಈ ಉದ್ದೇಶವನ್ನು ಪರಿಗಣಿಸಲಾಗಿದೆ. ದಂಪತಿಗಳು ಪರಸ್ಪರ ಶಾಂತಿ-ಸೌಹಾರ್ದ, ಪ್ರೇಮ-ವಾತ್ಸಲ್ಯಗಳೊಂದಿಗೆ ಜೀವಿಸಬೇಕು. ಪರಸ್ಪರ ಹಕ್ಕುಗಳನ್ನು ಪೂರೈಸಬೇಕು. ಪರಸ್ಪರ ಸಂಬಂಧದಲ್ಲಿ ಔದಾರ್ಯವನ್ನು ಪಾಲಿಸಬೇಕು. ಅವರು ಒಂದು ವೇಳೆ ಹಾಗೆ ಮಾಡಲು ಶಕ್ತರಲ್ಲದಿದ್ದರೆ ಅವರು ಜೊತೆಯಾಗಿ ಜೀವಿಸುವುದಕ್ಕಿಂತ ಬೇರ್ಪಡುವುದು ಉತ್ತಮ. ಏಕೆಂದರೆ ಪ್ರೀತಿ ಮತ್ತು ಕರುಣೆಯ ಚೈತನ್ಯವೇ ಹೊರಟು ಹೋದ ಬಳಿಕ ದಾಂಪತ್ಯ ಸಂಬಂಧವು ಒಂದು ಮೃತ ಶರೀರದಂತೆ. ಅದನ್ನು ಶವ ಸಂಸ್ಕಾರ ಮಾಡದೆ ಹೋದರೆ ಅದು ಮಲಿನವಾಗಿ ಕೌಟುಂಬಿಕ ಜೀವನವನ್ನೇ ವಿಷಾವೃತಗೊಳಿಸಿ ಬಿಡುವುದು . ಆದ್ದರಿಂದಲೇ ಪವಿತ್ರ ಕುರ್‌ಆನ್ ಈ ರೀತಿ ಹೇಳಿದೆ;

"...ನೀವು ನಿಮ್ಮ ವರ್ತನೆಯನ್ನು ಸರಿಯಾಗಿಟ್ಟುಕೊಂಡರೆ ಮತ್ತು ಅಲ್ಲಾಹನಿಗೆ ಭಯಪಟ್ಟುಕೊಂಡಿದ್ದರೆ ಅಲ್ಲಾಹನು ಕ್ಷಮಿಸುವವನೂ ಕರುಣಾನಿಧಿಯೂ ಆಗಿರು ತ್ತಾನೆ. ಆದರೆ ದಂಪತಿಗಳು ಪರಸ್ಪರ ಬೇರ್ಪಟ್ಟೇ ಬಿಟ್ಟರೆ ಅಲ್ಲಾಹ್ ತನ್ನ ಅಪಾರ ಮಹಿಮೆಯಿಂದ ಒಬ್ಬರನ್ನು ಇನ್ನೊಬ್ಬರಿಂದ ನಿರಪೇಕ್ಷರನ್ನಾಗಿ ಮಾಡಿಬಿಡುವನು..."

(ಅನ್ನಿಸಾ : 129-130)

ಅನೇಕ ಕಡೆಗಳಲ್ಲಿ ಈ ಕುರಿತು ನಿಯಮಗಳನ್ನು ತಿಳಿಸುವುದರ ಜೊತೆಗೆ ಪವಿತ್ರ ಕುರ್‌ಆನ್‌ನಲ್ಲಿ ಈ ರೀತಿ ತಾಕೀತು ಮಾಡಲಾಗಿದೆ:

"...ಅನಂತರ ನ್ಯಾಯೋಚಿತವಾಗಿ ಸ್ತ್ರೀಯನ್ನು ತಡೆದಿರಿಸಿಕೊಳ್ಳಬೇಕು ಅಥವಾ ಯೋಗ್ಯ ರೀತಿಯಿಂದ ಅವಳನ್ನು ಬಿಡುಗಡೆಗೊಳಿಸಬೇಕು..." (ಅಲ್ ಬಕರಃ : 229)

"...ಅವರನ್ನು ಉತ್ತಮ ರೀತಿಯಿಂದ (ನಿಮ್ಮ ವಿವಾಹದಲ್ಲಿ) ತಡೆದಿರಿಸಿಕೊಳ್ಳಿರಿ. ಇಲ್ಲವೆ ಉತ್ತಮ ರೀತಿಯಿಂದ ಅವರಿಂದ ಬೇರ್ಪಡಿರಿ..." (ಅತ್ತಲಾಕ್ : 2)

"...ನೀವು ಅವರೊಂದಿಗೆ ಉತ್ತಮ ರೀತಿಯಿಂದ ಜೀವನ ನಡೆಸಿರಿ..."

(ಅನ್ನಿಸಾ : 19)

"...ನ್ಯಾಯೋಚಿತ ರೀತಿಯಲ್ಲಿ ಇರಿಸಿಕೊಳ್ಳಿರಿ ಇಲ್ಲವೆ ನ್ಯಾಯೋಚಿತ ರೀತಿಯಿಂದ ಬಿಡುಗಡೆಗೊಳಿಸಿರಿ. ಕೇವಲ ಸತಾಯಿಸಲಿಕ್ಕಾಗಿ ಅವರನ್ನು ತಡೆ ದಿರಿಸಿಕೊಂಡರೆ ಅದು ಅತಿಕ್ರಮವಾಗುವುದು..." (ಅಲ್ ಬಕರಃ : 231)

"...ಪರಸ್ಪರ ವ್ಯವಹಾರದಲ್ಲಿ ಔದಾರ್ಯವನ್ನು ಮರೆಯಬೇಡಿರಿ...."

(ಅಲ್ ಬಕರಃ : 237)

'ತಲಾಕ್ ರಜಈ'ಯ ವಿಧಿಗಳನ್ನು ವಿವರಿಸಿರುವಲ್ಲಿ ಹೆಂಡತಿಯನ್ನು ಹಿಂದಕ್ಕೆ ಪಡೆಯುವಾಗ ಅದರಲ್ಲಿ ಆತ ಪ್ರಾಮಾಣಿಕನಾಗಿರಬೇಕೆಂಬ ಶರ್ತವನ್ನು ಇರಿಸಲಾಗಿದೆ. ಅರ್ಥಾತ್ ಎರಡು ತಲಾಕ್‌ಗಳನ್ನು ನೀಡಿದ ಬಳಿಕ ಮೂರನೇ ತಲಾಕ್ ನೀಡುವುದಕ್ಕಿಂತ ಮುಂಚಿತವಾಗಿ

ಹೆಂಡತಿಯನ್ನು ಪುನಃ ಸ್ವೀಕರಿಸಿಕೊಳ್ಳುವ ಹಕ್ಕು ಅವನಿಗೆ ಇದೆ. ಆದರೆ ಮುಂದೆ ಸೌಹಾರ್ದದೊಂದಿಗೆ ಬಾಳುವ ಪ್ರಾಮಾಣಿಕ ಉದ್ದೇಶ ಇದರ ಹಿಂದಿರಬೇಕು. ಸತಾಯಿಸುವ ಮತ್ತು ತ್ರಿಶಂಕು ಸ್ಥಿತಿಯಲ್ಲಿಡುವ ದುರುದ್ದೇಶವಿರಬಾರದು ಎಂಬ ಶರ್ತವಿದೆ.

**"...ಅವರ ಪತಿಯಂದಿರು ಸಂಬಂಧವನ್ನು ಸುಗಮ ಗೊಳಿಸಿಕೊಳ್ಳಲು ದ್ಯುಕ್ತರಾಗಿದ್ದರೆ, ಈ 'ಇದ್ದತ್'ನ ಕಾಲಾವಧಿಯಲ್ಲಿ ಅವರನ್ನು ಪುನಃ ತಮ್ಮ ಪತ್ನಿತ್ವಕ್ಕೆ ಮರಳಿಸಿಕೊಳ್ಳಲು ಹಕ್ಕುಳ್ಳವರಾಗಿರುತ್ತಾರೆ..." (ಅಲ್ ಬಕರಃ :228)**

## ಮುಸ್ಲಿಮೇತರರೊಂದಿಗೆ ದಾಂಪತ್ಯ ಸಂಬಂಧ:

ಇದೇ ಕಾರಣದಿಂದಾಗಿ, ಗ್ರಂಥದವರಲ್ಲದ ಮುಸ್ಲಿಮೇತರರೊಂದಿಗೆ ದಾಂಪತ್ಯ ಸಂಬಂಧವನ್ನು ಎಲ್ಲ ಮುಸ್ಲಿಮ್ ಸ್ತ್ರೀ ಪುರುಷರಿಗೆ ನಿಷಿದ್ಧಗೊಳಿಸಲಾಗಿದೆ. ಏಕೆಂದರೆ ಅವರು ತಮ್ಮ ಧರ್ಮ, ವಿಚಾರ-ಆಚಾರ ಮತ್ತು ಸಂಸ್ಕೃತಿ-ಸಂಪ್ರದಾಯಗಳಲ್ಲಿ ಮುಸ್ಲಿಮರಿಗಿಂತ ಎಷ್ಟು ಭಿನ್ನರೆಂದರೆ ಓರ್ವ ನೈಜ ಮುಸಲ್ಮಾನ ಅವರೊಂದಿಗೆ ಮನಃಪೂರ್ವಕವಾಗಿ ಮತ್ತು ಆತ್ಮೀಯವಾಗಿ ವೈವಾಹಿಕ ಬಂಧನದಲ್ಲಿ ಬೆಸೆಯುವುದು ಸಾಧ್ಯವಲ್ಲ. ಒಂದು ವೇಳೆ ಈ ಎಲ್ಲ ಭಿನ್ನತೆಗಳ ಹೊರತಾಗಿಯೂ ಅವರನ್ನು ದಾಂಪತ್ಯ ಸಂಬಂಧದಲ್ಲಿ ಬೆಸೆದರೆ ಅದೊಂದು ಕೇವಲ ವಿಷಯಾಸಕ್ತ ಸಂಬಂಧವಾದೀತೇ ಹೊರತು ನೈಜ ಸಾಂಸ್ಕೃತಿಕ ಸಂಬಂಧವಾಗುವುದು ಸಾಧ್ಯವಿಲ್ಲ. ಅದರಲ್ಲಿ ಕರುಣೆ ವಾತ್ಸಲ್ಯಗಳು ಇರಲಾರವು. ಒಂದು ವೇಳೆ ಇದ್ದರೂ ಅದರಿಂದ ಇಸ್ಲಾಮೀ ಸಂಸ್ಕೃತಿಗೆ ಹಾಗೂ ಸ್ವತಃ ಆ ಮುಸಲ್ಮಾನನಿಗೆ ಒಳಿತಾಗುವ ಬದಲು ಕೇಡಾಗುವ ಸಂಭವವೇ ಹೆಚ್ಚು.

**"ಬಹುದೇವವಿಶ್ವಾಸಿನಿಯರು ಸತ್ಯವಿಶ್ವಾಸವನ್ನು ಸ್ವೀಕರಿಸು ವವರೆಗೂ ನೀವು ಅವರನ್ನು ವಿವಾಹವಾಗಬಾರದು. ಓರ್ವ ಸತ್ಯವಿಶ್ವಾಸಿನಿಯಾದ ದಾಸಿಯು ಓರ್ವ ಬಹು ದೇವ ವಿಶ್ವಾಸಿನಿಯಾದ ಕುಲೀನ ಸ್ತ್ರೀಗಿಂತ ಉತ್ತಮಳು. ಅವಳು ನಿಮಗೆ ಎಷ್ಟುಮೆಚ್ಚಿಕೆ ಯವಳೇ ಆಗಿರಲಿ ಮತ್ತು ಬಹುದೇವ ವಿಶ್ವಾಸಿ ಪುರುಷರು ಸತ್ಯವಿಶ್ವಾಸವನ್ನು ಸ್ವೀಕರಿಸು ವವರೆಗೂ ನಿಮ್ಮ ಸ್ತ್ರೀಯರನ್ನು ಅವರಿಗೆ ವಿವಾಹ ಮಾಡಿಕೊಡಬಾರದು. ಓರ್ವ ಸತ್ಯವಿಶ್ವಾಸಿ ಗುಲಾಮನು ಬಹುದೇವ ವಿಶ್ವಾಸಿ ಕುಲೀನ ಪುರುಷನಿಗಿಂತ ಉತ್ತಮ. ಅವನು ನಿಮಗೆ ಅದೆಷ್ಟು ಮೆಚ್ಚಿಕೆಯವನೇ ಆಗಿರಲಿ." (ಅಲ್ ಬಕರಃ 2:221)**

ಗ್ರಂಥದವರ ಸ್ತ್ರೀಯರೊಂದಿಗೆ ವಿವಾಹವಾಗುವುದನ್ನು ಇಸ್ಲಾಮೀ ಕಾನೂನು ಅನುಮತಿಸಿದೆ.* ಏಕೆಂದರೆ ಸಾಂಸ್ಕೃತಿಕ ನೆಲೆಯಲ್ಲಿ ಕೆಲವು ಮೂಲಭೂತ ವಿಷಯಗಳಲ್ಲಿ ನಮ್ಮ

* ಆದರೆ ಗ್ರಂಥದವರಾದ ಪುರುಷರೊಂದಿಗೆ ಮುಸ್ಲಿಮ್ ಸ್ತ್ರೀಯರ ವಿವಾಹವು ನಿಷಿದ್ಧ. ಏಕೆಂದರೆ ಮಹಿಳೆಯರ ಪ್ರಕೃತಿಯಲ್ಲಿ ಪ್ರಭಾವಿತಳಾಗುವ ಮತ್ತು ಅಂಗೀಕರಿಸುವ ಪ್ರವೃತ್ತಿಯು ಪುರುಷರಿಗಿಂತ ಹೆಚ್ಚಾಗಿದೆ. ಆದ್ದರಿಂದ ಆಕೆ ಒಂದು ಮುಸ್ಲಿಮೇತರ ಕುಟುಂಬ ಮತ್ತು ಸಮಾಜದಲ್ಲಿ ಓರ್ವ ಮುಸ್ಲಿಮೇತರ ಪತಿಯೊಂದಿಗೆ ಜೀವಿಸುವುದರಿಂದ ಅವರ ಸಂಸ್ಕೃತಿ-ಸಭ್ಯತೆಗಳ ವರ್ಣದಲ್ಲಿ ಲೀನವಾಗುವ ಅಪಾಯ ಹೆಚ್ಚು ಮತ್ತು ಅವರನ್ನು ತನ್ನ ಸಂಸ್ಕೃತಿಯ ವರ್ಣದಲ್ಲಿ ಲೀನಗೊಳಿಸುವ ಸಾಧ್ಯತೆ ಕಡಿಮೆ ಇರುತ್ತದೆ. ಇನ್ನು

ಮತ್ತು ಅವರ ಮಧ್ಯೆ ಹೊಂದಾಣಿಕೆ ಇದೆ. ಆದರೆ ಇಸ್ಲಾಮಿನಲ್ಲಿ ಇಂತಹ ವಿವಾಹಗಳನ್ನು ಮೆಚ್ಚುಗೆಯ ದೃಷ್ಟಿಯಿಂದ ನೋಡಲಾಗುವುದಲ್ಲ. ಒಮ್ಮೆ ಹ. ಕಅಬ್ ಬಿನ್ ಮಾಲಿಕ್(ರ) ಓರ್ವ ಗ್ರಂಥದವಳೊಂದಿಗೆ ವಿವಾಹ ಮಾಡ ಬಯಸಿದರು. ಆದರೆ ಪ್ರವಾದಿ(ಸ) ಅವರನ್ನು ಅದರಿಂದ ತಡೆದರು. ಪ್ರವಾದಿ(ಸ) 'ಆಕೆ ನಿಮ್ಮನ್ನು 'ಮುಹ್ಸಿನ್' ಆಗಿ ಮಾಡಲಾರಳು' ಅದಕ್ಕೆ ಕಾರಣ ಕೂಡಾ ಹೇಳಿದರು. ಅರ್ಥಾತ್ ಈರ್ವರ ಮಧ್ಯೆ ಸಹಜ ಕರುಣೆ ವಾತ್ಸಲ್ಯಗಳು ಇರಲಾರವು. ಒಮ್ಮೆ ಹ. ಹುದೈಫಾ(ರ) ರವರು ಓರ್ವ ಯಹೂದಿ ಮಹಿಳೆಯೊಂದಿಗೆ ವಿವಾಹವಾಗ ಬಯಸಿದಾಗ ಹ. ಉಮರ್ (ರ) ಅವರಿಗೆ ಹಾಗೆ ಮಾಡದಿರುವಂತೆ ಪತ್ರ ಬರೆದರು. ಹ. ಅಲಿ ಮತ್ತು ಹ. ಇಬ್ನು ಉಮರ್(ರ)ರವರು ಗ್ರಂಥದವರೊಂದಿಗಿನ ವಿವಾಹವನ್ನು ಸ್ಪಷ್ಟವಾಗಿ 'ಮಕ್ರೂಹ್' (ಅನಪೇಕ್ಷಿತ) ಎಂದಿರುವರು. ಅದನ್ನು 'ಮಕ್ರೂಹ್' ಎನ್ನಲು ಹ. ಅಲಿ(ರ) ರವರು ಪವಿತ್ರ ಕುರ್‌ಆನ್‌ನ ಈ ಕೆಳಗಿನ ವಾಕ್ಯವನ್ನು ಆಧಾರವಾಗಿ ಪ್ರಸ್ತಾಪಿಸಿದ್ದಾರೆ;

"ಅಲ್ಲಾಹ್ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸುವವರು ಅಲ್ಲಾಹ್ ಮತ್ತು ಅವನ ಸಂದೇಶವಾಹಕರನ್ನು ವಿರೋಧಿಸಿದವರನ್ನು ಪ್ರೀತಿಸುವುದನ್ನು ನೀವೆಂದೂ ಕಾಣಲಾರಿರಿ..." (ಅಲ್ ಮುಜಾದಲಃ 22)

ಪತಿ-ಪತ್ನಿಯರಲ್ಲಿ ಪ್ರೇಮ ವಾತ್ಸಲ್ಯಗಳೇ ಇಲ್ಲದಿರುವಾಗ ಅಂತಹ ವಿವಾಹದಿಂದ ಏನು ಫಲ?

## ಕಫಾಅತ್ (ಸಮಾನತೆ)

ಸ್ವತಃ ಮುಸಲ್ಮಾನರ ನಡುವೆ ವಿವಾಹವಾಗುವಾಗಲೂ ಪರಸ್ಪರ ಹೊಂದಾಣಿಕೆಯ ಮತ್ತು ಪ್ರೇಮ ವಾತ್ಸಲ್ಯ ಕುದುರುವ ಅತ್ಯಧಿಕ ಸಾಧ್ಯತೆಯಿರುವವರ ಮಧ್ಯೆಯೇ ವಿವಾಹವಾಗಬೇಕೆಂದು ಇಸ್ಲಾಮೀ ಶರೀಅತ್ ಬಯಸುತ್ತದೆ. ಇಂತಹ ಸಾಧ್ಯತೆ ಇಲ್ಲದವರ ಮಧ್ಯೆ ವಿವಾಹ ಸಂಬಂಧವನ್ನು 'ಮಕ್ರೂಹ್' ಎಂದು ಸಾರಲಾಗಿದೆ. ಅದ್ದರಿಂದಲೇ ಪ್ರವಾದಿ(ಸ) ಮದುವೆಯಾಗುವುದಕ್ಕಿಂತ ಮುಂಚೆ ಸ್ತ್ರೀ-ಪುರುಷರು ಪರಸ್ಪರ ನೋಡಿಕೊಳ್ಳಬೇಕೆಂದು ಆಜ್ಞಾಪಿಸಿದ್ದಾರೆ (ಅಥವಾ ಕನಿಷ್ಟ ಪಕ್ಷ ಹಾಗೆ ಸಲಹೆ ನೀಡಿದ್ದಾರೆ.)

"ನಿಮ್ಮ ಪೈಕಿ ಓರ್ವನು ಓರ್ವ ಮಹಿಳೆಗೆ ವಿವಾಹ ಸಂದೇಶ ನೀಡುವುದಾದರೆ ಆಕೆಯನ್ನು ವಿವಾಹವಾಗಲು ಅವನನ್ನು ಪ್ರೇರೇಪಿಸಬಲ್ಲ ಯಾವುದಾದರೂ ಅಂಶ ಆಕೆಯಲ್ಲಿದೆಯೇ ಎಂಬುದನ್ನು ಕಂಡುಕೊಳ್ಳಲಿಕ್ಕಾಗಿ ಆತನು ಸಾಧ್ಯವಿದ್ದರೆ ಆಕೆಯನ್ನು ನೋಡಬೇಕು" (ಹದೀಸ್)

ಈ ಕಾರಣದಿಂದಾಗಿಯೇ ವಿವಾಹದ ವಿಷಯದಲ್ಲಿ ಕಫಾಅತ್(ಸಮಾನತೆ)ಯನ್ನು ಪರಿಗಣಿಸಬೇಕೆಂದು ಶರೀಅತ್ ಬಯಸುತ್ತದೆ. ಸಮಾನತೆ ಇಲ್ಲದವರ ಮಧ್ಯೆ ವೈವಾಹಿಕ

---

ಒಂದು ವೇಳೆ ಆಕೆ ಅವರ ಸಂಸ್ಕೃತಿಯಿಂದ ಪ್ರಭಾವಿತಳಾಗದಿದ್ದರೆ ಆಗ ಅವರ ಸಂಬಂಧವು ಕೇವಲ ಒಂದು ವಿಷಯಾಸಕ್ತ ಸಂಬಂಧವಾಗಿ ಮಾರ್ಪಡುವುದು ಖಂಡಿತ. ಮುಸ್ಲಿಮೇತರ ಪತಿಯೊಂದಿಗೆ ಕರುಣೆ ವಾತ್ಸಲ್ಯಗಳೊಂದಿಗೆ ಬೆಸೆಯುವುದು ಆಕೆಗೆ ಸಾಧ್ಯವಲ್ಲ. ಮುಸ್ಲಿಮೇತರ ಕುಟುಂಬ ಮತ್ತು ಸಮಾಜದೊಂದಿಗೆ ಆಕೆಯ ಉತ್ತಮ ಸಾಂಸ್ಕೃತಿಕ ಸಂಬಂಧವೂ ಬೆಳೆಯದು.

ಸಂಬಂಧವನ್ನು ಅದು ಸೂಕ್ತವೆಂದು ಪರಿಗಣಿಸುವುದಿಲ್ಲ. ಕುಟುಂಬದ ಆಚಾರ ಸಂಪ್ರದಾಯಗಳು ಹಾಗೂ ಸ್ಥಿತಿಗತಿಗಳಲ್ಲಿ ಏಕರೂಪತೆ ಇದ್ದರೆ ಅವರ ಮಧ್ಯೆ ಪ್ರೇಮ ವಾತ್ಸಲ್ಯಗಳ ಸಂಬಂಧವನ್ನು ಹೆಚ್ಚು ನಿರೀಕ್ಷಿಸಬಹುದು. ಇದರಿಂದ ಆ ಎರಡು ಕುಟುಂಬಗಳೂ ಪರಸ್ಪರ ಐಕ್ಯ ಹೊಂದುವ ಸಾಧ್ಯತೆಗಳಿವೆ. ಇದಕ್ಕೆ ವ್ಯತಿರಿಕ್ತವಾಗಿ ಈ ರೀತಿಯ ಸಮಾತನೆ ಇಲ್ಲದವರ ನಡುವೆ ವೈವಾಹಿಕ ಸಂಬಂಧ ಏರ್ಪಟ್ಟರೆ ಪತಿ-ಪತ್ನಿಯರಲ್ಲಿ ಹೃದಯಂಗಮಯವಾದ ಮತ್ತು ಆತ್ಮೀಯವಾದ ಸಂಬಂಧಗಳು ಬೆಳೆಯಲಾರವು. ಪತಿ-ಪತ್ನಿಯರು ವೈಯಕ್ತಿಕವಾಗಿ ಹೊಂದಿಕೊಂಡರೂ ಆ ಎರಡು ಕುಟುಂಬಗಳು ಪರಸ್ಪರ ಐಕ್ಯ ಹೊಂದುವ ಸಂಭವ ತೀರಾ ವಿರಳ. ಇಸ್ಲಾಮೀ ಶರೀಅತ್‌ನಲ್ಲಿ 'ಕಫಾಅತ್' ಅಥವಾ ಹೊಂದಾಣಿಕೆಯ ನಿಯಮದ ಆಧಾರ ಇದುವೇ ಆಗಿದೆ.

ಮೇಲೆ ಕೊಟ್ಟಿರುವ ಉದಾಹರಣೆಗಳಿಂದ ಇಸ್ಲಾಮಿನ ದಾಂಪತ್ಯ ಕಾನೂನಿನಲ್ಲಿ ಚಾರಿತ್ರ್ಯ ಮತ್ತು ಮಾನದ ಬಳಿಕ ಅತ್ಯಧಿಕ ಮಹತ್ವವು ಪತಿ-ಪತ್ನಿಯರ ಮಧ್ಯೆ ಕರುಣೆ ಮತ್ತು ವಾತ್ಸಲ್ಯಗಳಿಗೆ ಇದೆ ಎಂಬುದು ವ್ಯಕ್ತವಾಗುತ್ತದೆ. ಪತಿ-ಪತ್ನಿಯರ ಸಂಬಂಧದಲ್ಲಿ ಈ ಅಂಶವು ಉಳಿದಿರುವ ಭರವಸೆ ಇರುವ ತನಕ ಇಸ್ಲಾಮೀ ಕಾನೂನು ಅವರ ದಾಂಪತ್ಯ ಸಂಬಂಧವನ್ನು ರಕ್ಷಿಸಲು ತನ್ನ ಸರ್ವ ಶಕ್ತಿಗಳನ್ನೂ ಬಳಸುತ್ತದೆ. ಆದರೆ ಪರಸ್ಪರ ಪ್ರೀತಿ, ವಾತ್ಸಲ್ಯ ಹಾಗೂ ಕರುಣೆಗಳು ಮಾಯವಾಗಿ ನಿರಾಸಕ್ತಿ, ಅಸಡ್ಡೆ, ದ್ವೇಷ ಮತ್ತು ವೈರತ್ವ ಬೆಳೆದು ಬಂದಾಗ ವಿವಾಹದ ಬಂಧನವನ್ನು ಮುರಿಯುವುದೇ ಕ್ಷೇಮವೆಂದು ಆ ಕಾನೂನು ಪರಿಗಣಿಸುತ್ತದೆ. ಇದು ಕೂಡಾ ಅತ್ಯಂತ ಗಮನಾರ್ಹವಾದ ಅಂಶವಾಗಿದೆ. ಏಕೆಂದರೆ ಈ ಅಂಶವನ್ನು ಕಡೆಗಣಿಸಿ ಇಸ್ಲಾಮೀ ಕಾನೂನಿನ ತತ್ವಗಳನ್ನು ವ್ಯಾವಹಾರಿಕ ಜೀವನದಲ್ಲಿ ಅಳವಡಿಸುವವರು ಹೆಜ್ಜೆ ಹೆಜ್ಜೆಗೂ ಇಸ್ಲಾಮೀ ಕಾನೂನಿನ ಉದ್ದೇಶವನ್ನೇ ಸೋಲಿಸಿ ಬಿಡುವಂತಹ ಪ್ರಮಾದಗಳನ್ನು ಮಾಡುವ ಸಾಧ್ಯತೆಯಿರುತ್ತದೆ.

# ಕಾನೂನಿನ ತತ್ವಗಳು

ಕಾನೂನಿನ ಧ್ಯೇಯೋದ್ದೇಶಗಳನ್ನು ತಿಳಿದುಕೊಂಡ ಬಳಿಕ ಇಸ್ಲಾಮೀ ದಾಂಪತ್ಯ ಕಾನೂನುಗಳು ಯಾವ ಮೂಲತತ್ವಗಳ ಆಧಾರದಲ್ಲಿ ರಚಿಸಲ್ಪಟ್ಟಿವೆ ಎಂಬುದನ್ನು ನೋಡಬೇಕಾಗಿದೆ. ಏಕೆಂದರೆ ಅವುಗಳ ತತ್ವಗಳನ್ನು ಸರಿಯಾಗಿ ತಿಳಿಯದೆ ದಾಂಪತ್ಯ ಸಮಸ್ಯೆಗಳಲ್ಲಿ ಅವುಗಳನ್ನು ಸರಿಯಾದ ರೀತಿಯಲ್ಲಿ ಜಾರಿಗೊಳಿಸುವುದು ಕಷ್ಟ ಸಾಧ್ಯ.

## ಪ್ರಥಮ ಮೂಲ ತತ್ವ:

ಕಾನೂನಿನ ಮೂಲ ತತ್ವಗಳ ಪೈಕಿ ಪ್ರಥಮ ತತ್ವವು ದಾಂಪತ್ಯ ಜೀವನದಲ್ಲಿ ಪುರುಷನಿಗೆ ಸ್ತ್ರೀಗಿಂತ ಒಂದು ಪದವಿಯನ್ನು ಹೆಚ್ಚಾಗಿ ನೀಡಲಾಗಿದೆ ಎಂಬುದಾಗಿದೆ. ಇದರಿಂದಲೇ ಇತರ ಅನೇಕ ನಿಯಮಗಳು ಹುಟ್ಟಿಕೊಂಡಿವೆ. ಆ ಪದವಿಯ ವಿವರಣೆಯು ನಮಗೆ ಈ ಕೆಳಗಿನ ಸೂಕ್ತದಲ್ಲಿ ದೊರೆಯುತ್ತದೆ:

**''ಪುರುಷರು ಸ್ತ್ರೀಯರ ಮೇಲೆ 'ಮೇಲ್ವಿಚಾರಕ' ಆಗಿರುತ್ತಾರೆ. ಇದು ಅಲ್ಲಾಹನು ಕೆಲವರಿಗೆ ಕೆಲವರ ಮೇಲೆ ಶ್ರೇಷ್ಠತೆ ಪ್ರದಾನ ಮಾಡಿದುದರಿಂದ ಮತ್ತು ಪುರುಷರು ತಮ್ಮ ಸಂಪತ್ತನ್ನು ಖರ್ಚು ಮಾಡುವುದರಿಂದ. ಸುಶೀಲೆಯರಾದ ಸ್ತ್ರೀಯರು ಅನುಸರಣಶೀಲರಾಗಿರುತ್ತಾರೆ ಮತ್ತು ಅವರು ಪುರುಷರ ಅನುಪಸ್ಥಿತಿಯಲ್ಲಿ ಅಲ್ಲಾಹನ ರಕ್ಷಣೆಯಲ್ಲಿ ಅವರ ಹಕ್ಕು ಬಾಧ್ಯತೆಗಳ ರಕ್ಷಣೆ ಮಾಡುತ್ತಾರೆ.'' (ಅನ್ನಿಸಾ :34)**

ಪುರುಷನಿಗೆ ಸ್ತ್ರೀಗಿಂತ ಮೇಲಿನ ಸ್ಥಾನವನ್ನು ಏಕೆ ನೀಡಲಾಗಿದೆ ಹಾಗೂ ಅವನನ್ನು ಯಾಕೆ 'ಕವ್ವಾಮ್'* (ಮೇಲ್ವಿಚಾರಕ) ಮಾಡಲಾಗಿದೆ ಎಂಬ ವಾದಕ್ಕೆ ಇಲ್ಲಿ ಅವಕಾಶವಿಲ್ಲ.

ಏಕೆಂದರೆ ಅದು ಕಾನೂನಿನ ಬದಲು ಸಮಾಜಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯವಾಗಿದೆ. ನಮ್ಮ ವಿಷಯದ ಸೀಮೆಯೊಳಗಿದ್ದುಕೊಂಡೇ ನಾವು ಇಲ್ಲಿ ಕೆಲವು ವಿಷಯಗಳನ್ನು ವಿವರಿಸುತ್ತೇವೆ. ಕುಟುಂಬ ಜೀವನದಲ್ಲಿ ಶಿಸ್ತು ಮತ್ತು ವ್ಯವಸ್ಥೆಯನ್ನು ಉಳಿಸಲಿಕ್ಕಾಗಿ ದಂಪತಿಗಳಲ್ಲಿ ಒಬ್ಬರು ಮೇಲ್ವಿಚಾರಕ ಮತ್ತು ಆಜ್ಞಾಧಿಕಾರಿಯಾಗುವುದು ಅಗತ್ಯ. ಇಬ್ಬರೂ ಒಂದೇ ರೀತಿಯ ಹಕ್ಕುಗಳುಳ್ಳವರೂ ಸಮಾನ ಸ್ಥಾನಮಾನ ಉಳ್ಳವರೂ ಆದರೆ ಅಶಿಸ್ತು ಮತ್ತು ಅವ್ಯವಸ್ಥೆ ಆಗುವುದು ಸಹಜ. ದಂಪತಿಗಳ ಮಧ್ಯೆ ಪೂರ್ಣ ಸಮಾನತೆಯನ್ನು ಪ್ರತಿಪಾದಿಸುವ ಜನಾಂಗಗಳಲ್ಲಿ ದಾಂಪತ್ಯ ಜೀವನದ ಈ ಗೊಂದಲ ನಿಜವಾಗಿಯೂ ಉದ್ಭವಿಸಿರುವುದು ನಮಗೆ ಕಾಣಸಿಗುತ್ತದೆ. ಇಸ್ಲಾಮ್

---

* 'ಕವ್ವಾಮ್' ಎಂದರೆ ಆಜ್ಞಾಧಿಕಾರಿ, ಸಂರಕ್ಷಕ, ನಾಯಕ ಹಾಗೂ ವ್ಯವಹಾರಗಳ ಮೇಲ್ವಿಚಾರಕ.

ಒಂದು ಪ್ರಕೃತಿ ಧರ್ಮ. ಆದ್ದರಿಂದ ಮನುಷ್ಯ ಪ್ರಕೃತಿ ಯನ್ನು ಪರಿಗಣಿಸಿ ದಂಪತಿಗಳಲ್ಲಿ ಒಬ್ಬರನ್ನು ಆಜ್ಞಾಧಿಕಾರಿ ಮತ್ತು ಮೇಲ್ವಿಚಾರಕ ಹಾಗೂ ಇನ್ನೊಬ್ಬರನ್ನು ವಿಧೇಯ ಮತ್ತು ಅನುಸರಣಶೀಲರಾಗಿ ಮಾಡುವುದು ಅಗತ್ಯವೆಂದು ಅದು ಪರಿಗಣಿಸಿದೆ ಮತ್ತು ಅದು ಈ ಮೇಲ್ವಿಚಾರಣೆ ಮತ್ತು ಆಜ್ಞಾಧಿಕಾರದ ಸ್ಥಾನಕ್ಕೆ, ಸಹಜವಾಗಿ ಅಂತಹ ಗುಣವುಳ್ಳ ಪುರುಷನನ್ನೇ ಆಯ್ಕೆ ಮಾಡಿದೆ.*

## ಪುರುಷನ ಕರ್ತವ್ಯಗಳು:

ಇಸ್ಲಾಮೀ ಕಾನೂನಿನಲ್ಲಿ ದಾಂಪತ್ಯ ಜೀವನಕ್ಕೆ ನಿಗದಿಪಡಿಸಲಾದ ನಿಯಮಗಳಲ್ಲಿ ಪುರುಷನ ಸ್ಥಾನ ಮೇಲ್ವಿಚಾರಕನದ್ದಾಗಿದೆ. ಈ ಪದವಿಯ ಆಧಾರದಲ್ಲಿ ಅವನ ಮೇಲೆ ಈ ಕೆಳಗಿನ ಕರ್ತವ್ಯಗಳಿವೆ;

1. ಅವನು ಸ್ತ್ರೀಯ 'ಮಹರ್' (ವಿವಾಹ ಧನ) ಪಾವತಿ ಮಾಡಬೇಕು. ಅವನಿಗೆ ಸ್ತ್ರೀಯೊಂದಿಗೆ ದಾಂಪತ್ಯ ಹಕ್ಕುಗಳು ಲಭಿಸುವುದು ಆ ವಿವಾಹ ಧನದ ಪ್ರತಿಫಲದ ರೂಪದಲ್ಲೇ ಆಗಿದೆ. ಮೇಲೆ ಉದ್ಧರಿಸಿದ ಸೂಕ್ತದಿಂದ ವ್ಯಕ್ತವಾಗುವುದೇನೆಂದರೆ ಪ್ರಕೃತಿದತ್ತವಾಗಿ ಪುರುಷನು ಮೇಲ್ವಿಚಾರಣೆಯ ಈ ಹೊಣೆಗೆ ಹೆಚ್ಚು ಅರ್ಹನಾದರೂ ಕಾರ್ಯತಃ ಅದು ಅವನಿಗೆ ಲಭಿಸುವುದು ಅವನು ವಿವಾಹ ಧನದ ರೂಪದಲ್ಲಿ ನೀಡುವ ಮೊತ್ತದ ಪ್ರತಿಫಲದ ರೂಪವಾಗಿ. ಅದನ್ನು ಈ ಕೆಳಗಿನ ಸೂಕ್ತಗಳಲ್ಲಿಯೂ ವಿವರಿಸಲಾಗಿದೆ;

"ಸ್ತ್ರೀಯರಿಗೆ 'ವಿವಾಹಧನ'ವನ್ನು ಆತ್ಮ ಸಂತೋಷದಿಂದ (ಕಡ್ಡಾಯವೆಂದರಿತು) ಪಾವತಿ ಮಾಡಿರಿ..." (ಅನ್ನಿಸಾ: 4)

"...ಇವರ ಹೊರತಾಗಿರುವ ಸ್ತ್ರೀಯರನ್ನು ನೀವು ನಿಮ್ಮ ಸಂಪತ್ತಿನ ಮೂಲಕ ಗಳಿಸುವುದನ್ನು ಧರ್ಮಬದ್ಧಗೊಳಿಸಲಾಗಿದೆ. ಆದರೆ ಅವರನ್ನು ವಿವಾಹ ಬಂಧನದಲ್ಲಿಡಬೇಕು. ಸ್ವಚ್ಛಂದ ಲೈಂಗಿಕತೆ ಸಲ್ಲದು. ಇನ್ನು ನೀವು ಅವರೊಂದಿಗೆ ದಾಂಪತ್ಯ ಜೀವನದ ಸವಿಯನ್ನುಣ್ಣುವುದರ ಪ್ರತಿಫಲವಾಗಿ ಅವರ ವಿವಾಹ ಧನವನ್ನು ಕಡ್ಡಾಯವಾಗಿ ಅವರಿಗೆ ಕೊಡಿರಿ..." (ಅನ್ನಿಸಾ :24)

"...ಆದುದರಿಂದ ನೀವು ಅವರ ಪೋಷಕರ ಅನುಮತಿಯಿಂದ ಅವರೊಂದಿಗೆ ವಿವಾಹ ಮಾಡಿಕೊಳ್ಳಿರಿ ಮತ್ತು ಅವರು ವಿವಾಹ ಬಂಧನದಲ್ಲಿ ಸುರಕ್ಷಿತೆ (ಮುಹ್ಸನಾತ್) ಯರಾಗಿರುವಂತೆಯೂ ಮುಕ್ತ ಲೈಂಗಿಕ ಸಂಬಂಧ ಹೊಂದಿರ ದಂತೆಯೂ ರಹಸ್ಯ ಕಾಮುಕರನ್ನು ಅರಸದಂತೆಯೂ ಉತ್ತಮ ರೀತಿಯಲ್ಲಿ ಅವರ ವಿವಾಹ ಧನವನ್ನು ಅವರಿಗೆ ಸಲ್ಲಿಸಿರಿ..." (ಅನ್ನಿಸಾ:25)

"...ನೀವು ಅವರಿಗೆ 'ವಿವಾಹ ಧನ' ಕೊಟ್ಟು ವಿವಾಹದಲ್ಲಿ ಅವರ ರಕ್ಷಕರಾದರೆ ನಿಮಗೆ ಅವರು ಧರ್ಮಸಮ್ಮತ ಆಗಿರುತ್ತಾರೆ..." (ಅಲ್‌ಮಾಇದ: :5)

* ಈ ವಿಷಯವು 'ಪರ್ದಾ'ಎಂಬ ಗ್ರಂಥದಲ್ಲಿ ವಿವರವಾಗಿ ಪ್ರತಿಪಾದಿಸಲ್ಪಟ್ಟಿದೆ.

ವಿವಾಹದ ಸಮಯದಲ್ಲಿ ಸ್ತ್ರೀ-ಪುರುಷರ ಮಧ್ಯೆ ನಿಶ್ಚಯಿಸಲ್ಪಟ್ಟ ಮಹರ್‌ಅನ್ನು (ವಿವಾಹ ಧನವನ್ನು) ಪೂರ್ಣವಾಗಿ ಪಾವತಿ ಮಾಡುವುದು ಪುರುಷನ ಮೇಲೆ ಕಡ್ಡಾಯ. ಒಂದು ವೇಳೆ ಪುರುಷನು ಈ ಕರಾರನ್ನು ಪೂರ್ತಿಗೊಳಿಸಲು ನಿರಾಕರಿಸಿದರೆ ಸ್ತ್ರೀಯು ತನ್ನನ್ನು ಆತನಿಂದ ದೂರವಿಟ್ಟುಕೊಳ್ಳಬಹುದು. ಇದೊಂದು ಕಡ್ಡಾಯ ಕರ್ತವ್ಯವಾಗಿದ್ದು ಆತನು ಇದರಿಂದ ಮುಕ್ತವಾಗುವ ಸ್ವರೂಪವು- ಅದರ ಪಾವತಿಗೆ ಸ್ತ್ರೀಯಿಂದ ಅವಧಿ* ಪಡೆಯುವುದು ಅಥವಾ ಅವನ ಆರ್ಥಿಕ ದುಃಸ್ಥಿತಿಯನ್ನು ಪರಿಗಣಿಸಿ ಅದನ್ನು ಆಕೆ ಕ್ಷಮಿಸಿ ಬಿಡುವುದು ಅಥವಾ ಆಕೆಯು ಸ್ವಂತ ಇಚ್ಛೆಯಿಂದ ಅದನ್ನು ಕ್ಷಮಿಸಿ ಬಿಟ್ಟು ಆತನ ಮೇಲೆ ಉಪಕಾರ ಮಾಡುವುದಾಗಿದೆ.

**"...ಅವರು ತಮ್ಮಿಷ್ಟದಿಂದ ವಿವಾಹಧನದ ಒಂದಂಶವನ್ನು ನಿಮಗೆ ಬಿಟ್ಟು ಕೊಟ್ಟರೆ, ನೀವು ಅದನ್ನು ಸಂತೋಷದಿಂದ ಅನುಭೋಗಿಸಿಕೊಳ್ಳಬಹುದು."**

**(ಅನ್ನಿಸಾ :4)**

**"...ಆದರೆ, ವಿವಾಹಧನ ನಿಶ್ಚಯಿಸಿಕೊಂಡ ಅನಂತರ ಪರಸ್ಪರ ಒಮ್ಮತದ ಒಪ್ಪಂದವೇನಾದರೂ ಆಗಿದ್ದರೆ, ಅದರಲ್ಲೇನೂ ದೋಷವಿಲ್ಲ..." (ಅನ್ನಿಸಾ 24)**

## ಜೀವನಾಂಶ

2. ಪತಿಯ ಮೇಲಿರುವ ದ್ವಿತೀಯ ಕರ್ತವ್ಯ ಜೀವನಾಂಶವಾಗಿದೆ. ಇಸ್ಲಾಮೀ ಕಾನೂನು ದಂಪತಿಗಳ ಕಾರ್ಯಕ್ಷೇತ್ರವನ್ನು ಸ್ಪಷ್ಟವಾಗಿ ವಿಂಗಡಿಸಿದೆ. ಮನೆಯೊಳಗಿದ್ದು ಕುಟುಂಬದ ಹೊಣೆಗಳನ್ನು ನಿರ್ವಹಿಸುವುದು ಪತ್ನಿಯ ಕೆಲಸವಾಗಿದೆ. ಸಂಪಾದಿಸುವುದು ಮತ್ತು ಜೀವನಾವಶ್ಯಕತೆಗಳನ್ನು ಒದಗಿಸುವುದು ಪತಿಯ ಕರ್ತವ್ಯವಾಗಿದೆ. ಪತಿಗೆ ಪತ್ನಿಯ ಮೇಲೆ ಪ್ರಾಶಸ್ತ್ಯ ನೀಡಲು ದ್ವಿತೀಯ ಕಾರಣ ಇದುವೇ ಆಗಿದೆ. ಈ ವಿಷಯವು 'ಕವ್ವಾಮಿಯತ್' ಅಥವಾ ಮೇಲ್ವಿಚಾರಣೆಯ ಅರ್ಥ ವ್ಯಾಪ್ತಿಯೊಳಗೇ ಬರುತ್ತದೆ. 'ಕವ್ವಾಮ್' ಎನ್ನುವುದೇ ಯಾವುದಾದರೊಂದು ವಸ್ತುವಿನ ಸಂರಕ್ಷಕ ಹಾಗೂ ಮೇಲ್ವಿಚಾರಕನಾಗಿದ್ದು ಆ ನೆಲೆಯಲ್ಲಿ

---

* ಇದನ್ನು 'ಮಹರ್ ಮುವಜ್ಜಲ್' ಎನ್ನುತ್ತಾರೆ. ಆದರೆ ಇಂದು ನಿಕಾಹ್‌ನ ವೇಳೆ ಪಾವತಿ ಮಾಡುವ ಉದ್ದೇಶವಿಲ್ಲದೆಯೇ ಸಹಸ್ರಾರು, ಲಕ್ಷಗಟ್ಟಲೆ ರೂಪಾಯಿ 'ಮಹ್‌ರ್' ನಿಶ್ಚಯಿಸಲಾಗುವುದನ್ನು 'ಮಹ್‌ರ್ ಮುವಜ್ಜಲ್' ಎನ್ನುತ್ತಾರೆ. ಪಾವತಿ ಮಾಡಬೇಕೆಂಬ ಸಂಕಲ್ಪ ಪ್ರಾರಂಭದಲ್ಲೇ ಇರುವುದಿಲ್ಲ. ವಾಸ್ತವದಲ್ಲಿ ಈ ರೀತಿಯ ಸಂಕಲ್ಪದ ಒದಿಗೆ ಮಾಡಿದ ನಿಕಾಹ್ ಅಲ್ಲಾಹನ ಬಳಿ ಅಸಿಂಧುವಾಗಿದೆ. ನೈಜ 'ಮಹರ್ ಮುವಜ್ಜಲ್'ನಲ್ಲಿ ಪುರುಷನು ಎಷ್ಟು ಅವಧಿಯ ಬಳಿಕ ಅದನ್ನು ಪಾವತಿ ಮಾಡುವನು ಎಂಬುದನ್ನು ನಿರ್ಣಯಿಸಿರಬೇಕು. ಯಾವ ಮಹ್‌ರ್‌ನ ಒಪ್ಪಂದದಲ್ಲಿ ಪಾವತಿಗೆ ಅವಧಿಯನ್ನು ನಿಶ್ಚಯಿಸಲಾಗಿಲ್ಲವೋ ಅದನ್ನು 'ಕೇಳಿದಾಗ ಕ ಡಬೇಕಾದ ಸಾಲ' (On Demand) ಎಂದು ಪರಿಗಣಿಸಲಾಗುವುದು. ಇಂತಹ ಮಹರ್ ಪತಿಯ ನಿಧನದ ಬಳಿಕ ಪಾವತಿಯಾಗಬೇಕಾದುದೆಂದು ಹೇಳುವ ಕರ್ಮಶಾಸ್ತ್ರಜ್ಞರ ಒದಿಗೆ ನನಗೆ ತೀವ್ರ ಭಿನ್ನಾಭಿಪ್ರಾಯವಿದೆ. ಇದರಿಂದಾಗಿ ನಿಕಾಹ್ ಮಾಡಿದ ಪತಿಯ ಬದಲು ಅವನ ವಾರೀಸುದಾರರನ್ನು ಮಹರ್ ಪಾವತಿ ಮಾಡಲು ಬಾಧ್ಯಸ್ಥರಾಗಿ ಮಾಡಿದಂತಾಗುತ್ತದೆ. ಇದು ಪೂರ್ವೋಕ್ತ ಕುರ್‌ಆನಿನ ವಚನಗಳ ಸ್ಫೂರ್ತಿಗೆ ತೀರಾ ವಿರುದ್ಧವಾಗಿದ್ದು, ಈ ರೀತಿಯ ವಿಧಿಗೆ ಪವಿತ್ರ ಕುರ್‌ಆನ್ ಮತ್ತು ಸುನ್ನತ್‌ನಲ್ಲಿ ಯಾವ ಆಧಾರವೂ ಇಲ್ಲ.

ಪೋಷಿಸುವುದಕ್ಕೆ. ಆ ವಸ್ತುವಿನ ಮೇಲೆ ಅಧಿಕಾರ ಹೊಂದಿರುವಾತನಿಗೆ. 'ಪುರುಷರು ಸ್ತ್ರೀಯರ ಮೇಲ್ನಿಚಾರಕರಾಗಿದ್ದಾರೆ' ಎಂಬ ಪವಿತ್ರ ಕುರ್‌ಆನಿನ ಸೂಕ್ತದಲ್ಲಿ 'ನೀವು ಅವರ ಮೇಲೆ ಧನ ವ್ಯಯ ಮಾಡಿರುವುದರಿಂದ' ಎಂಬ ಮಾತು ಮಹರ್ ಕಡ್ಡಾಯವೆಂದು ಸ್ಪಷ್ಟಪಡಿಸುವ ಜೊತೆಗೆ ಜೀವನಾಂಶವೂ ಕಡ್ಡಾಯವೆಂಬುದನ್ನು ಸ್ಪಷ್ಟಪಡಿಸುತ್ತದೆ. ಪತಿಯು ತನ್ನ ಈ ಕರ್ತವ್ಯವನ್ನು ನೆರವೇರಿಸದಿದ್ದರೆ ಪತ್ನಿಗೆ ಸರಿಯಾಗಿ ಜೀವನಾಂಶ ನೀಡುವಂತೆ ಕಾನೂನು ಅವನನ್ನು ನಿರ್ಬಂಧಿಸುವುದು. ಒಂದು ವೇಳೆ ಅವನು ನಿರಾಕರಿಸಿದರೆ ಅಥವಾ ಪತ್ನಿಗೆ ಜೀವನಾಂಶ ಕೊಡುವ ಸಾಮರ್ಥ್ಯ ಅವನಲ್ಲಿಲ್ಲವಾದರೆ ವಿವಾಹ ಸಂಬಂಧವನ್ನು ಅನೂರ್ಜಿತ ಗೊಳಿಸುವುದು. ಆದರೆ ಜೀವನಾಂಶದ ಮೊತ್ತವು ಪತಿಯ ಅರ್ಹತೆಯನ್ನು ಹೊಂದಿಕೊಂಡಿದೆಯೇ ವಿನಾ ಪತ್ನಿಯ ಬಯಕೆ ಬೇಡಿಕೆಗಳನ್ನಲ್ಲ. ಪವಿತ್ರ ಕುರ್‌ಆನ್ ಈ ಬಗ್ಗೆ ಒಂದು ಸಾಮಾನ್ಯ ನಿಯಮವನ್ನು ಘೋಷಿಸಿದೆ: 'ಧನಿಕನ ಮೇಲೆ ಅವನ ಸಾಮರ್ಥ್ಯದ ಪ್ರಕಾರ ಜೀವನಾಂಶ ಕಡ್ಡಾಯವಿದೆ ಮತ್ತು ಬಡವನ ಮೇಲೆ ಅವನ ಸಾಮರ್ಥ್ಯದ ಪ್ರಕಾರ' ಎಂಬುದೇ ಆ ನಿಯಮ. ಬಡವನಿಂದ ಆತನ ಶಕ್ತಿಗೆ ಮೀರಿದ ಜೀವನಾಂಶವನ್ನು ವಸೂಲಿ ಮಾಡುವಂತಿಲ್ಲ ಹಾಗೆ ಧನಿಕನು ತನ್ನ ಅಂತಸ್ತಿಗಿಂತ ಕಡಿಮೆಯಾದ ಜೀವನಾಂಶವನ್ನು ಕೊಡುವಂತಿಲ್ಲ.

3. ಅಧಿಕಾರ ಸದುಪಯೋಗ: ಪತಿಯು ತನಗೆ ಪತ್ನಿಯ ಮೇಲೆ ಪ್ರಾಪ್ತವಿರುವ ಪ್ರಾಶಸ್ತ್ಯವನ್ನು ಮತ್ತು ಹಕ್ಕು, ಅಧಿಕಾರಗಳನ್ನು ಅನ್ಯಾಯವಾಗಿ ಬಳಸಬಾರದೆಂಬುದು ಪತಿಯ ಮೇಲಿನ ಮೂರನೆಯ ಕರ್ತವ್ಯವಾಗಿದೆ. ಇಂತಹ ಅನ್ಯಾಯದ ಅನೇಕ ವಿಧಗಳಿವೆ.

## ಈಲಾ

ಯಾವುದೇ ಸರಿಯಾದ ಕಾರಣವಿಲ್ಲದೆ* ಕೇವಲ ಆಕೆಯನ್ನು ಶಿಕ್ಷಿಸುವ ಮತ್ತು ಹಿಂಸಿಸುವ ಉದ್ದೇಶದಿಂದ ಪತ್ನಿಯ ಲೈಂಗಿಕ ಬಯಕೆಯನ್ನು ಈಡೇರಿಸದಿರುವುದು. ಇದನ್ನು ಇಸ್ಲಾಮೀ ಪಾರಿಭಾಷಿಕದಲ್ಲಿ 'ಈಲಾ' ಎನ್ನುತ್ತಾರೆ. ಇದಕ್ಕೆ ಇಸ್ಲಾಮೀ ಕಾನೂನು ಹೆಚ್ಚೆಂದರೆ 4 ತಿಂಗಳ ಅವಧಿ ಗೊತ್ತುಪಡಿಸಿದೆ. ಈ ಅವಧಿಯೊಳಗೆ ಪತ್ನಿಯೊಂದಿಗೆ ರಾಜಿ ಮಾಡಿಕೊಂಡು ದಾಂಪತ್ಯ ಸಂಬಂಧವನ್ನು ಪುನಃ ಸ್ಥಾಪಿಸುವುದು ಪತಿಯ ಮೇಲೆ ಕಡ್ಡಾಯ. ಅನ್ಯಥಾ ಆ ಅವಧಿ ಕಳೆದು ಹೋದ ಬಳಿಕ ಆಕೆಯನ್ನು ವಿಚ್ಛೇದನಗೊಳಿಸುವಂತೆ ಅವನನ್ನು ನಿರ್ಬಂಧಿಸಲಾಗುವುದು:

'ತಮ್ಮ ಪತ್ನಿಯರನ್ನು ಸಮೀಪಿಸಲಾರೆವೆಂದು ಶಪಥ ಹಾಕುವವರಿಗೆ ನಾಲ್ಕು ತಿಂಗಳುಗಳ ಅವಧಿಯುಂಟು. ಅದರೊಳಗೆ ಅವರು ಮರಳಿದರೆ ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ' ಅಥವಾ ಅವರು ವಿವಾಹ ವಿಚ್ಛೇದನವನ್ನೇ ತೀರ್ಮಾನಿಸಿದರೆ ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

(ಅಲ್‌ಬಕರಃ :226-227)

---

* ಸರಿಯಾದ ಕಾರಣವೇನೆಂದರೆ ಪತಿ ಅಥವಾ ಪತ್ನಿಯು ಅನಾರೋಗ್ಯ, ಪತಿಯು ಪ್ರವಾಸದಲ್ಲಿ ರುವುದು ಅಥವಾ ಪತಿಗೆ ಪತ್ನಿಯ ಮೇಲೆ ಪ್ರೇಮ ಇದ್ದಾಗಲೂ ಆಕೆಯನ್ನು ಸಮೀಪಿಸಲು ಸಾಧ್ಯವಿಲ್ಲದಂತಹ ಯಾವುದಾದರೂ ಪರಿಸ್ಥಿತಿ ಒದಗುವುದು.

ಈ ವಿಷಯದಲ್ಲಿ ಕೆಲವು ಕರ್ಮಶಾಸ್ತ್ರ ಪಂಡಿತರು (ಈಲಾದ ನಿಯಮ ಅನ್ವಯವಾಗಲು) ಪತ್ನಿಯನ್ನು ಸಮೀಪಿಸುವುದಿಲ್ಲವೆಂದು ಶಪಥ ಹಾಕುವುದು ಕಡ್ಡಾಯವೆಂಬ ಶರ್ತ ಹಾಕುತ್ತಾರೆ. ಅನ್ಯಥಾ ಅದು 'ಈಲಾ' ಎನಿಸುವುದಿಲ್ಲ ಎಂಬುದು ಅವರ ವಾದ. ಅವರ ಪ್ರಕಾರ ಒಬ್ಬನು ಪತ್ನಿಯ ಮೇಲಿನ ಕೋಪದಿಂದ ಹತ್ತು ವರ್ಷಗಳ ತನಕವೂ ಆಕೆಯನ್ನು ಸಮೀಪಿಸದಿದ್ದರೂ, ಆತನು ಪತ್ನಿಯನ್ನು ಸಮೀಪಿಸುವುದಿಲ್ಲವೆಂಬ ಆಣೆ ಹಾಕಿರದಿದ್ದರೆ ಅದು'ಈಲಾ' ಆಗುವುದಿಲ್ಲ. ಆದರೆ ನನಗೆ ಈ ಬಗ್ಗೆ ಸಹಮತವಿಲ್ಲ. ಈ ಬಗ್ಗೆ ನನ್ನ ಬಳಿ ಇರುವ ಆಧಾರಗಳು ಈ ಕೆಳಗಿನಂತಿವೆ;

1. ಯಾವುದಾದರೂ ವಿಶೇಷ ಪರಿಸ್ಥಿತಿಯ ಬಗ್ಗೆ ಪವಿತ್ರ ಕುರ್‌ಆನ್ ಒಂದು ಆಜ್ಞೆ ನೀಡಿದ್ದರೆ ಹಾಗೂ ಆ ಆಜ್ಞೆಯಲ್ಲಿ ಬಳಸಲ್ಪಟ್ಟ ಪದಗಳು ಆ ಪರಿಸ್ಥಿತಿಗೆ ಮಾತ್ರ ಅನ್ವಯವಾಗುವುದಾಗಿದ್ದರೆ ಆ ಆಜ್ಞೆಯು ಕಡ್ಡಾಯವಾಗಿಯೂ ಆ ಪರಿಸ್ಥಿತಿಗೆ ಮಾತ್ರ ಸೀಮಿತವಾಗಬೇಕೆಂದಿಲ್ಲ. ಉದಾಹರಣೆಗೆ ಮಲಮಗಳನ್ನು ಮದುವೆಯಾಗುವುದು ಅವಳ ತಂದೆಗೆ ನಿಷಿದ್ಧ. ಅದಕ್ಕೆ ಪವಿತ್ರ ಕುರ್‌ಆನ್ ಬಳಸಿರುವ ಪದಗಳು ಈ ರೀತಿ ಇವೆ; 'ನಿಮ್ಮ ಮಡಿಲಲ್ಲಿ ಬೆಳೆದ ನಿಮ್ಮ ಮಲಹೆಣ್ಮಕ್ಕಳು' ಇದರಿಂದ ಕೇವಲ ಎಳೆ ವಯಸ್ಸಿನಲ್ಲಿ ತಮ್ಮ ತಾಯಿಯ ಜೊತೆ ಮಲ ತಂದೆಯ ಮನೆಗೆ ಬಂದ ಹೆಣ್ಮಕ್ಕಳು ಮಾತ್ರ ವಿವಾಹಕ್ಕೆ ನಿಷಿದ್ಧರು ಎಂಬ ವಿಧಿ ಹೊರಡುತ್ತದೆ. ಆದರೆ ಈ ಆಜ್ಞೆಯು ಕೇವಲ ಅವರಿಗೆ ಮಾತ್ರ ಸೀಮಿತವಾಗಿದೆಯೆಂದು ಯಾರೂ ಒಪ್ಪುವುದಿಲ್ಲ. ತನ್ನ ಮಲತಂದೆಯ ಮನೆಯಲ್ಲಿ ಒಂದು ದಿನವೂ ಇಲ್ಲದಿದ್ದ ಹಾಗೂ ತಾಯಿಯ ವಿವಾಹದ ವೇಳೆಯೇ ಯುವತಿಯಾಗಿದ್ದ ಮಲ ಮಗಳು ಕೂಡಾ ಮಲ ತಂದೆಗೆ ನಿಷಿದ್ಧಳು ಎಂಬುದರ ಬಗ್ಗೆ ಎಲ್ಲರ ಒಮ್ಮತವಿದೆ. ಅದೇ ರೀತಿ, ಪತ್ನಿಯರೊಂದಿಗೆ ಸಂಸರ್ಗ ಮಾಡದಿರುವ ಆಣೆ ಹಾಕುವವರು' ಎಂಬ ಪದಗಳನ್ನು ಕುರ್‌ಆನ್ ಬಳಸಿದ್ದರೂ ಅದು ಕೇವಲ 'ಆಣೆ' ಹಾಕಿದವರಿಗೆ ಮಾತ್ರ ಸೀಮಿತವಾದ ವಿಧಿಯಾಗುವುದಿಲ್ಲ.

2. ಕರ್ಮಶಾಸ್ತ್ರ ವಿಧಿಗಳ ನಿರ್ಣಯದಲ್ಲಿ ಒಂದು ವಿಷಯದ ಬಗ್ಗೆ ಮುಸ್ಲಿಮ್ ಸಮುದಾಯದಲ್ಲಿ ಬಹುತೇಕ ಒಮ್ಮತವಿದೆ. ಅದೇನೆಂದರೆ ಒಂದು ವಿಶಿಷ್ಟ ಪರಿಸ್ಥಿತಿಯ ಬಗ್ಗೆ ಯಾವುದೇ ವಿಧಿ ದೊರೆಯದಿದ್ದರೆ ಅಂತಹುದೇ ಬೇರೆ ಪರಿಸ್ಥಿತಿಯಲ್ಲಿ ಇರುವ ವಿಧಿಯನ್ನು ಆಧಾರವಾಗಿಸಬಹುದು. ಆದರೆ ಈ ಎರಡೂ ವಿಧಿಗಳ ಕಾರಣ ಒಂದೇ ಆಗಿರಬೇಕೆಂಬ ಶರ್ತವಿದೆ. 'ಈಲಾ' ಮಾಡುವವರಿಗೆ ನಾಲ್ಕು ತಿಂಗಳ ಅವಧಿ ಅಲ್ಲಾಹನು ಏಕೆ ನಿಶ್ಚಯಿಸಿದ್ದಾನೆ? ಈ ಅವಧಿಯಲ್ಲಿ ಸಂಸರ್ಗ ಮಾಡದಿದ್ದರೆ ತಲಾಕ್ ನೀಡಬೇಕು ಎಂದು ಯಾಕೆ ಹೇಳಿದ್ದಾನೆ? ಎಂಬುದು ಈಗಿರುವ ಪ್ರಶ್ನೆ. ನಾಲ್ಕು ತಿಂಗಳುಗಳಿಗಿಂತಲೂ ಹೆಚ್ಚು ಕಾಲ ಪತ್ನಿಯೊಂದಿಗೆ ಯಾವುದೇ ಸಂಪರ್ಕವಿಲ್ಲದೆ ಬೇರ್ಪಟ್ಟಿರುವುದು ಮಹಿಳೆಯ ಮಟ್ಟಿಗೆ ಹಾನಿಕರವಾಗಿದ್ದು ಈ ಸಂಕಷ್ಟದಿಂದ ಮಹಿಳೆಯನ್ನು ಪಾರುಗೊಳಿಸುವುದು ಮಾತ್ರವೇ ಹೊರತು ಬೇರಾವ ಉದ್ದೇಶ ತಾನೇ ಈ ಆಜ್ಞೆಯ ಹಿಂದಿರಲು ಸಾಧ್ಯ? ಈ ಸೂಕ್ತದ ನಂತರದ ಕಾಂಡದಲ್ಲಿ ಅಲ್ಲಾಹನು

"ಕೇವಲ ಸತಾಯಿಸುವುದಕ್ಕಾಗಿ ಅವರನ್ನು ತಡೆದಿರಿಸಿಕೊಳ್ಳಬೇಡಿ" ಎಂದು ಹೇಳಿರುವನು. ಮುಂದೆ ಸೂರಃ ಅನ್ನಿಸಾದಲ್ಲಿ ಹೀಗೆ ಹೇಳಿರುವನು: 'ಒಬ್ಬಳನ್ನು ತ್ರಿಶಂಕು ಸ್ಥಿತಿಯಲ್ಲಿರಿಸುವ ರೀತಿಯಲ್ಲಿ ಮತ್ತೊಬ್ಬ ಪತ್ನಿಯ ಕಡೆ ವಾಲಿ ಬಿಡಬೇಡಿರಿ.' ಈ ರೀತಿ ಓರ್ವ ಮಹಿಳೆಯನ್ನು ವಿವಾಹ ಬಂಧನದಲ್ಲಿರಿಸಿ ತ್ರಿಶಂಕು ಸ್ಥಿತಿಯಲ್ಲಿರಿಸುವುದು ಅಥವಾ ಕೇವಲ ಸತಾಯಿಸುವ ಸಲುವಾಗಿ ಆಕೆಯನ್ನು ತಡೆದಿರಿಸುವುದು ಅಲ್ಲಾಹನಿಗೆ ಇಷ್ಟವಲ್ಲವೆಂಬುದು ಈ ಸೂಕ್ತಗಳಿಂದ ವ್ಯಕ್ತವಾಗುತ್ತದೆ. ನಾಲ್ಕು ತಿಂಗಳ ಅವಧಿ ನಿಶ್ಚಯಿಸುವುದಕ್ಕೆ ಇದಲ್ಲದೆ ಬೇರಾವುದೇ ಕಾರಣವನ್ನು ನೀಡಲು ಸಾಧ್ಯವಿಲ್ಲ. ಆಣೆ ಹಾಕದೆ ಉದ್ದೇಶಪೂರ್ವಕ ಸಂಸರ್ಗ ಮಾಡದಿರುವ ಪತಿಯ ಪ್ರಕರಣದಲ್ಲೂ ಇದೇ ಕಾರಣ ಇರುವಾಗ ಅದಕ್ಕೂ ಈ ವಿಧಿಯನ್ನೇ ಯಾಕೆ ಅನ್ವಯಿಸಬಾರದು? ಆಣೆ ಹಾಕುವುದರಲ್ಲಿ ಅಥವಾ ಹಾಕದಿರುವುದರಲ್ಲಿ ಪತ್ನಿಯ ಸಂಕಷ್ಟದಲ್ಲಿ ಯಾವ ಬದಲಾವಣೆಯಾಗುತ್ತದೆ? ಆಣೆ ಹಾಕಿ ನಾಲ್ಕು ತಿಂಗಳು ಬೇರ್ಪಟ್ಟಿದ್ದರೆ ಪತ್ನಿಗೆ ಕಷ್ಟವಾದೀತು. ಆದರೆ ಆಣೆ ಹಾಕದೆ ಜೀವನ ಪರ್ಯಂತ ಬೇರ್ಪಟ್ಟಿದ್ದರೂ ಪತ್ನಿಗೆ ಕಷ್ಟವಾಗದು ಎಂದು ಯಾವನಾದರೂ ವಿವೇಕವುಳ್ಳವನು ಭಾವಿಸಿಯಾನೇ?

3.ಇಸ್ಲಾಮಿನ ದೃಷ್ಟಿಕೋನದಲ್ಲಿ ವೈವಾಹಿಕ ಕಾನೂನಿನ ಅತ್ಯಂತ ಪ್ರಾಮುಖ್ಯ ಉದ್ದೇಶ, ಚಾರಿತ್ರ್ಯ ಮತ್ತು ಮಾನದ ರಕ್ಷಣೆಯಾಗಿದೆ. ಒಬ್ಬ ಪುರುಷ ತನ್ನ ಪತ್ನಿಯ ಬಗ್ಗೆ ಕುಪಿತನಾಗಿ ಬೇರೆಯವಳನ್ನು ವಿವಾಹವಾಗಬಲ್ಲನು. ತನ್ಮೂಲಕ ಅವನು ಕೆಟ್ಟ ದೃಷ್ಟಿ ಮತ್ತು ವ್ಯಭಿಚಾರದಿಂದ ತನ್ನನ್ನು ರಕ್ಷಿಸಿಕೊಳ್ಳಬಲ್ಲನು. ಆದರೆ ಪತಿ ಸಂಸರ್ಗದಿಂದ ಪೂರ್ಣ ವಂಚಿತಳಾದ ಆ ಪತ್ನಿಯು ತನ್ನ ವಿಷಯಾಸಕ್ತಿಯ ಈಡೇರಿಕೆಗೆ ಏನು ಮಾಡಬೇಕು? ಆಕೆ ತನ್ನ ಶೀಲ ಮತ್ತು ಮಾನವನ್ನು ಹೇಗೆ ರಕ್ಷಿಸಿಯಾಳು? ಪತಿಯು ಆಕೆಯೊಂದಿಗೆ ಪುನಃ ಸಂಪರ್ಕ ಸ್ಥಾಪಿಸಲು ಮನಸ್ಸು ಮಾಡದೆ ಇದಕ್ಕೆ ಬೇರೆ ದಾರಿ ಇದೆಯೇ? ಇಂತಹ ಸ್ತ್ರೀಯ ಬಗ್ಗೆ ಆಕೆಯ ಪತಿ ಸಂಸರ್ಗ ಮಾಡದಿರುವ ಆಣೆ ಹಾಕಿದ್ದರೆ ಮಾತ್ರ ಅಲ್ಲಾಹನು ಆಕೆಗೆ ವಿಮೋಚನೆಯ ಮಾರ್ಗ ತೋರಿಸುತ್ತಾನೆ, ಅನ್ಯಥಾ ಅನಿರ್ದಿಷ್ಟಾವಧಿಯ ತನಕ ಆಕೆಯನ್ನು ಚಾರಿತ್ರ್ಯಹೀನತೆಯ ಅಪಾಯದಲ್ಲಿ ಸಿಲುಕಿಸಿಟ್ಟಿರುತ್ತಾನೆ ಎಂದು ಆ ವಿವೇಕಪೂರ್ಣ ಆಜ್ಞಾಧಿಕಾರಿಯ ಬಗ್ಗೆ ಊಹಿಸಬಹುದೇ?

ಈ ಕಾರಣಗಳಿಂದ ನನ್ನ ದೃಷ್ಟಿಯಲ್ಲಿ ಮಾಲಿಕೀ ಕರ್ಮಶಾಸ್ತ್ರ ಪ್ರಕಾರವೇ ಈ ವಿಷಯ ನಿರ್ಣಯಿಸಲ್ಪಡಬೇಕು. ಇಮಾಮ್ ಮಾಲಿಕ್(ರ) ಈ ರೀತಿ ಹೇಳುತ್ತಾರೆ: ಪತಿಯು ಪತ್ನಿಗೆ ಕಿರುಕುಳ ಕೊಡುವ ಉದ್ದೇಶದಿಂದ ಸಂಸರ್ಗವನ್ನು ತೊರೆದರೆ ಅದಕ್ಕೆ 'ಈಲಾ'ದ ವಿಧಿಯನ್ನೇ ಅನ್ವಯಿಸಬೇಕು, ಅವನು ಅದರ ಆಣೆ ಹಾಕದಿದ್ದರೂ ಸರಿಯೇ. ಏಕೆಂದರೆ 'ಈಲಾ'ವನ್ನು ನಿಷೇಧಿಸುವಲ್ಲಿ ಅಲ್ಲಾಹನ ಉದ್ದೇಶ ಮಹಿಳೆಯನ್ನು ಸಂಕಷ್ಟ ದಿಂದ ರಕ್ಷಿಸುವುದಾಗಿದೆ. ಈ ಕಾರಣವು (ಅರ್ಥಾತ್ ಮಹಿಳೆಯ ಸಂಕಷ್ಟ) ಆಣೆ ಹಾಕದೆ ಸತಾಯಿಸುವ ಉದ್ದೇಶದಿಂದ ಮಾಡಿದ ಸಂಸರ್ಗ ತ್ಯಾಗದಲ್ಲೂ ಇದೆ. (ಅಹ್ಕಾಮುಲ್ ಕುರ್‌ಆನ್ ಇಬ್ನು ಅರಬಿ ಸಂಪುಟ 1. ಪುಟ 75; ಬಿದಾಯತುಲ್ ಮುಜ್ತಹಿದ್- ಇಬ್ನು ರುಶ್ದ್ ಸಂಪುಟ 2. ಪುಟ 88)

'ನೀವು ತಲಾಕ್ ನೀಡಲು ನಿರ್ಧರಿಸಿದರೆ' ಎಂಬ ಮಾತಿನ ವ್ಯಾಖ್ಯಾನದಲ್ಲೂ ಕರ್ಮಶಾಸ್ತ್ರ ಪಂಡಿತರ ಮಧ್ಯೆ ಭಿನ್ನಾಭಿಪ್ರಾಯವಿದೆ. ಹ. ಉಸ್ಮಾನ್ ಬಿನ್ ಅಫ್ಫಾನ್, ಝೈದ್ ಬಿನ್

ಸಾಬಿತ್, ಇಬ್ನು ಮಸ್‌ಊದ್ ಹಾಗೂ ಇಬ್ನು ಅಬ್ಬಾಸ್(ರ)ರವರ ಅಭಿಪ್ರಾಯದಂತೆ ನಾಲ್ಕು ತಿಂಗಳು ಕಳೆಯುವುದೇ ಪತಿಯು ತಲಾಕ್ ನೀಡಲು ನಿರ್ಧರಿಸಿರುವುದರ ಸಂಕೇತವಾಗಿದೆ. ಆದ್ದರಿಂದ ಈ ಅವಧಿ ಕಳೆದ ಬಳಿಕ ಅವನಿಗೆ ಪುನಃ ಸಂಪರ್ಕ ಸ್ಥಾಪಿಸುವ ಹಕ್ಕು ಉಳಿಯುವುದಿಲ್ಲ. ಒಂದು ವರದಿಯಂತೆ ಹ. ಅಲೀ ಮತ್ತು ಇಬ್ನು ಉಮರ್(ರ) ಅವರಿಂದಲೂ ಇದೇ ಅರ್ಥದ ಮಾತುಗಳು ಉಲ್ಲೇಖಿಸಲ್ಪಟ್ಟಿವೆ. ಆದರೆ ಇನ್ನೊಂದು ವರದಿಯಂತೆ ಇವರಿಬ್ಬರ ಮತ್ತು ಹ. ಆಯಿಶಾ(ರ)ರವರ ಅಭಿಪ್ರಾಯವು ಅವಧಿ ಮುಗಿದ ಬಳಿಕ ಪತಿಗೆ ಒಂದೋ ಆತನು ತನ್ನ ಪತ್ನಿಯೊಂದಿಗೆ ಸಂಬಂಧ ಪುನಃ ಸ್ಥಾಪಿಸಬೇಕು ಅಥವಾ ತಲಾಕ್ ನೀಡುವಂತೆ ನೋಟೀಸ್ ನೀಡಬೇಕು ಎಂದಾಗಿದೆ. ಆದರೆ ಸೂಕ್ತದ ಪದಗಳ ಬಗ್ಗೆ ಗಹನವಾಗಿ ಚಿಂತಿಸಿದಾಗ ಮೊದಲನೆಯ ಅಭಿಪ್ರಾಯವೇ ಸರಿಯೆಂದು ತಿಳಿಯುತ್ತದೆ. ಪ್ರಸ್ತುತ ಸೂಕ್ತದಲ್ಲಿ ಅಲ್ಲಾಹನು 'ಈಲಾ' ಮಾಡುವವನಿಗೆ ಸ್ಪಷ್ಟ ಶಬ್ದಗಳಲ್ಲಿ ನಾಲ್ಕು ತಿಂಗಳ ಅವಧಿ ನೀಡಿರುವನು. ಅವನಿಗೆ ಸಂಬಂಧ ಪುನಃ ಸ್ಥಾಪಿಸುವ ಹಕ್ಕು ಇರುವುದು ಈ ಅವಧಿಯೊಳಗೆ ಮಾತ್ರ. ಈ ಅವಧಿ ಕಳೆದ ಬಳಿಕ ತಲಾಕ್ ಮತ್ತು ವಿಚ್ಛೇದನದ ಹೊರತು ಬೇರಾವ ಮಾರ್ಗವೂ ಉಳಿಯುವುದಿಲ್ಲ. (ಆದರೆ ಇದು 'ತಲಾಕ್ ಬಾಇನ್' ಆಗುತ್ತದೋ ಅಥವಾ 'ತಲಾಕ್ ರಜಈ' ಆಗುತ್ತದೋ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ.) ಇನ್ನು ಯಾರಾದರೂ ನಾಲ್ಕು ತಿಂಗಳು ಕಳೆದ ಬಳಿಕವೂ ಅವರಿಗೆ ಸಂಬಂಧ ಪುನಃ ಸ್ಥಾಪನೆಗೆ ಅವಕಾಶ ನೀಡುವುದಾದರೆ ಅವರು ಈ ಅವಧಿಯನ್ನು ಹೆಚ್ಚಿಸಿದಂತಾಗುತ್ತದೆ ಮತ್ತು ಅದು, ದೇವ ನಿರ್ಧರಿತ ಅವಧಿಗಿಂತ ಹೆಚ್ಚಿನ ಅವಧಿ ಎನಿಸಿಕೊಳ್ಳುತ್ತದೆ.

## ಪತ್ನಿಯನ್ನು ಸತಾಯಿಸುವುದು

ಪತ್ನಿಯೊಂದಿಗೆ ಪ್ರೀತಿಯಿಲ್ಲ. ಆಕೆಯನ್ನು ಇರಿಸಿಕೊಳ್ಳ ಬಯಸುವುದಿಲ್ಲ. ಆದರೂ ಕೇವಲ ಸತಾಯಿಸುವ ಮತ್ತು ಅತಿರೇಕ ಎಸಗುವ ಸಲುವಾಗಿ ಇಟ್ಟು ಕೊಳ್ಳುವುದು, ಆಗಾಗ ತಲಾಕ್ ಹೇಳುತ್ತಿರುವುದು ಎರಡು ತಲಾಕ್‌ನ ಬಳಿಕ ಮೂರನೆಯ ತಲಾಕ್ ಹೇಳದೆ ಈ ಉದ್ದೇಶದಿಂದಲೇ ಪುನಃ ಸಂಬಂಧ ಸ್ಥಾಪಿಸುವುದು ಇವೆಲ್ಲಾ ಬಹಳ ಹೇಯ ಕೃತ್ಯಗಳು. ಇದನ್ನು ಪವಿತ್ರ ಕುರ್‌ಆನ್ ಅನ್ಯಾಯವೆಂದು ಉಗ್ರವಾಗಿ ಖಂಡಿಸುತ್ತಾ ಅದರಿಂದ ತಡೆದಿದೆ.

**"...ಕೇವಲ ಸತಾಯಿಸಲಿಕ್ಕಾಗಿ ಅವರನ್ನು ತಡೆದಿರಿಸಿಕೊಂಡರೆ ಅದು ಅತಿಕ್ರಮವಾಗುವುದು. ಹೀಗೆ ಮಾಡಿದಾತನು ವಾಸ್ತವದಲ್ಲಿ ತನ್ನ ಮೇಲೆ ತಾನೇ ಅಕ್ರಮವೆಸಗುವನು. ಅಲ್ಲಾಹನ ಆಯತ್‌ಗಳನ್ನು ಅಪಹಾಸ್ಯ ಮಾಡಬೇಡಿರಿ..."* (ಅಲ್‌ಬಕರಃ : 231)**

* ಕಾನೂನಿನ ಪದಗಳನ್ನು ದುರುಪಯೋಗಪಡಿಸಿ ಅದರಿಂದ ಅದರ ಸ್ಫೂರ್ತಿ ಮತ್ತು ಉದ್ದೇಶಕ್ಕೆ ವ್ಯತಿರಿಕ್ತವಾದ ಪ್ರಯೋಜನ ಪಡೆದರೆ ವಾಸ್ತವದಲ್ಲಿ ಕಾನೂನಿನೊಂದಿಗೆ ಆಟವಾಡಿದಂತೆ ಮತ್ತು ಅದನ್ನು ಗೇಲಿ ಮಾಡಿದಂತೆ ಆಗುತ್ತದೆ. ಪವಿತ್ರ ಕುರ್‌ಆನಿನಲ್ಲಿ ಪುರುಷನಿಗೆ ಒಂದನೇ ತಲಾಕ್ ಮತ್ತು ಎರಡನೇ ತಲಾಕ್‌ನ ಬಳಿಕ ಪತ್ನಿಯೊಂದಿಗೆ ಸಂಬಂಧ ಪುನಃ ಸ್ಥಾಪಿಸುವ ಹಕ್ಕು ನೀಡಲಾಗಿದೆ. ಆದರೆ ಈ ಹಕ್ಕು ನೀಡಲ್ಪಟ್ಟಿರುವುದಕ್ಕೆ ಒಂದು ಉದ್ದೇಶವಿದೆ. ಈ ಮಧ್ಯೆ ಅವರೊಳಗೆ ಸಂಧಾನವೇರ್ಪಟ್ಟು, ಅವರು ಪರಸ್ಪರ

'ಸತಾಯಿಸು' ಮತ್ತು 'ಅತಿರೇಕವೆಸಗು' ಎಂಬ ಪದಗಳು ಬಹಳ ವಿಶಾಲಾರ್ಥ ಗಳನ್ನು ಹೊಂದಿವೆ. ಒಬ್ಬನು ತನ್ನ ಪತ್ನಿಯನ್ನು ಕೇವಲ ಸತಾಯಿಸುವ ಮತ್ತು ಅತಿರೇಕ ಎಸಗುವ ಉದ್ದೇಶದಿಂದ ತಡೆದಿರಿಸಿದರೆ ಅವನು ಆಕೆಗೆ ಎಲ್ಲ ರೀತಿಯ ಕೀಟಲೆ ಕೊಡುವನು ಎಂಬುದು ವ್ಯಕ್ತ. ಅವನು ಆಕೆಗೆ ಮಾನಸಿಕವಾಗಿಯೂ ಶಾರೀರಿಕವಾಗಿಯೂ ತೊಂದರೆ ಕೊಡುವನು. ಕೆಳಸ್ತರದವನಾಗಿದ್ದರೆ ಬೈಗುಳ ಮತ್ತು ಹೊಡೆದಾಟಕ್ಕೂ ಹೇಸನು. ಕುಲೀನನಾಗಿದ್ದರೆ ನಿಂದಿಸುವ ಮತ್ತು ನೋಯಿಸುವ ಇತರ ಮಾರ್ಗಗಳನ್ನು ಅವಲಂಬಿಸುವನು. ಸತಾಯಿಸುವ ಮತ್ತು ಅತಿರೇಕ ವೆಸಗುವ ಎಂಬ ಪದಗಳು ಈ ಎಲ್ಲವನ್ನು ಒಳಗೊಂಡಿದೆ. ಪವಿತ್ರ ಕುರ್‌ಆನಿನ ಪ್ರಕಾರ ಈ ಎಲ್ಲ ಕೃತ್ಯಗಳೂ ನಿಷಿದ್ಧ. ಯಾವ ಪುರುಷನು ತನ್ನ ಪತ್ನಿಯೊಂದಿಗೆ ಈ ರೀತಿ ವರ್ತಿಸುತ್ತಾನೋ ಅವನು ತನ್ನ ಧರ್ಮಸಮ್ಮತ ಮೇರೆಯನ್ನು ಮೀರಿ ನಡೆಯುತ್ತಾನೆ. ಇಂತಹ ಪರಿಸ್ಥಿತಿಯಲ್ಲಿ ಕಾನೂನಿನ ನೆರವು ಪಡೆದು ಆ ಪತಿಯಿಂದ ಮುಕ್ತಿ ಗಳಿಸುವುದು ಮಹಿಳೆಯ ಹಕ್ಕಾಗಿದೆ.

## ಪತ್ನಿಯರ ಮಧ್ಯೆ ನ್ಯಾಯ ಪಾಲಿಸದಿರುವುದು:

ಒಬ್ಬಳಿಗಿಂತ ಹೆಚ್ಚು ಪತ್ನಿಯರಿದ್ದರೆ ಅವರ ಮಧ್ಯೆ ಪೂರ್ಣ ನ್ಯಾಯ ಪಾಲಿಸಬೇಕು. ಒಬ್ಬಾಕೆಯ ಕಡೆಗೆ ಹೆಚ್ಚು ವಾಲಿಕೊಂಡು ಇತರ ಪತ್ನಿ ಅಥವಾ ಪತ್ನಿಯರನ್ನು ತ್ರಿಶಂಕು ಸ್ಥಿತಿಯಲ್ಲಿಡುವುದು ಅನ್ಯಾಯವೆನಿಸುತ್ತದೆ. ಪವಿತ್ರ ಕುರ್‌ಆನ್ ಸ್ಪಷ್ಟ ಶಬ್ದಗಳಲ್ಲಿ ಅದನ್ನು ಧರ್ಮಬಾಹಿರವೆಂದು ಸಾರಿದೆ:

**"...ಒಬ್ಬ ಪತ್ನಿಯು ಅತ್ತ ಜೋತಾಡಿ ಕೊಂಡಿರುವಂತೆ ಬಿಟ್ಟು ಇನ್ನೊಬ್ಬಳ ಕಡೆಗೇ ವಾಲಿಬಿಡಬೇಡಿರಿ..." (ಅನ್ನಿಸಾ: 129)**

ಕುರ್‌ಆನಿನಲ್ಲಿ ಬಹುಪತ್ನಿತ್ವದ ಅನುಮತಿಯನ್ನು ಪೂರ್ಣ ನ್ಯಾಯ ಪಾಲನೆಯ ಶರ್ತದೊಂದಿಗೆ ನೀಡಲಾಗಿದೆ. ಒಬ್ಬನು ಪೂರ್ಣ ನ್ಯಾಯ ಪಾಲಿಸಲು ಅಶಕ್ತನಾಗಿದ್ದರೆ ಈ ಶರ್ತಬದ್ಧ ಅನುಮತಿಯಿಂದ ಪ್ರಯೋಜನ ಪಡೆಯುವ ಹಕ್ಕು ಆತನಿಗಿಲ್ಲ. ಬಹುಪತ್ನಿತ್ವದ ಅನುಮತಿ ನೀಡಲಾಗಿರುವ ಸೂಕ್ತದಲ್ಲೇ ಪವಿತ್ರ ಕುರ್‌ಆನ್ ಇದನ್ನು ಸ್ಪಷ್ಟಪಡಿಸಿದೆ. ನೀವು ಪೂರ್ಣ ನ್ಯಾಯ ಪಾಲಿಸಲಾರಿರೆಂದಾದರೆ ಒಂದೇ ಪತ್ನಿಯಲ್ಲಿ ತೃಪ್ತಿ ಪಟ್ಟುಕೊಳ್ಳಿರಿ ಎಂದು ಅದು ಆದೇಶಿಸುತ್ತದೆ.

---

ಒಂದುಗೂಡಿ ಬಾಳುವ ದಾರಿ ಕಂಡುಬಂದರೆ ಶರೀಅತ್‌ನ ಪರವಾಗಿ ಅದರಲ್ಲಿ ಯಾವುದೇ ತಡೆ ಬೇಡ ಎಂಬುದೇ ಆ ಉದ್ದೇಶ. ಆದರೆ ಒಬ್ಬನು ಈ ಅವಕಾಶವನ್ನು ದುರುಪಯೋಗಪಡಿಸಿ ತಲಾಕ್ ನೀಡುವುದು ಮತ್ತು ಇದ್ದತ್ ಅವಧಿಯೊಳಗೆ ಪುನಃ ಸಂಬಂಧ ಸ್ಥಾಪಿಸುವುದು, ಪುನಃ ತಲಾಕ್ ನೀಡುವುದು, ಪುನಃ ಇದ್ದತ್ ಅವಧಿಯೊಳಗೆ ಸಂಬಂಧ ಸ್ಥಾಪಿಸುವುದು- ಈ ರೀತಿ ಸ್ತ್ರೀಯನ್ನು ಸತಾಯಿಸುವ ಮತ್ತು ತ್ರಿಶಂಕು ಸ್ಥಿತಿಯಲ್ಲಿಡುವ ಸಲುವಾಗಿ ತನ್ನ ಮನೆಯಲ್ಲೂ ಇರಗೊಡುವುದಿಲ್ಲ ಮತ್ತು ಸ್ವತಂತ್ರಗೊಳಿಸಿ ಆಕೆಗೆ ಖುಷಿ ಬಂದಲ್ಲಿ ಮದುವೆ ಮಾಡುವ ಅವಕಾಶವನ್ನೂ ಕೊಡುವುದಿಲ್ಲವೆಂದಾದರೆ ಅದು ದೇವ ಶಾಸನದೊಂದಿಗೆ ಆಡುವ ಚೆಲ್ಲಾಟವೆನಿಸುತ್ತದೆ. ಖಂಡಿತ, ಒಬ್ಬ ಸತ್ಯವಿಶ್ವಾಸಿಯಂತೂ ದೇವವಾಣಿಯೊಂದಿಗೆ ಈ ರೀತಿಯ ಅಪಹಾಸ್ಯ ಮಾಡುವ ಧೈರ್ಯ ತೋರಲಾರ.

"...ಆದರೆ ಅವರೊಂದಿಗೆ ನ್ಯಾಯ ಪಾಲಿಸಲಾರಿರೆಂಬ ಆಶಂಕೆ ನಿಮಗಿದ್ದರೆ ಒಬ್ಬ ಸ್ತ್ರೀಯನ್ನು ಮಾತ್ರ (ವಿವಾಹವಾಗಿರಿ) ಅಥವಾ ನಿಮ್ಮ ವಶಕ್ಕೆ ಬಂದ ಸ್ತ್ರೀಯರನ್ನು ಸ್ವೀಕರಿಸಿಕೊಳ್ಳಿರಿ. ಅನ್ಯಾಯದಿಂದ ತಪ್ಪಿಸಿಕೊಳ್ಳಲು ಇದು ಹೆಚ್ಚು ಉತ್ತಮ..."

(ಅನ್ನಿಸಾ :3)

ಇಮಾಮ್ ಶಾಫಿಈ(ರ)ರವರು 'ಅಲ್ಲಾ ತಊಲೂ' ಎಂಬ ಮಾತಿಗೆ ನಿಮ್ಮ ಕುಟುಂಬ ದೊಡ್ಡದಾಗದಿರಲಿ, ಅವರೆಲ್ಲರ ಪೋಷಣೆಯ ಭಾರ ನಿಮ್ಮ ಮೇಲೆ ಬಾರದಿರಲಿ ಎಂಬ ಅರ್ಥ ನೀಡಿರುವರು. ಆದರೆ ಇದು ನಿಘಂಟಿನ ಅರ್ಥಕ್ಕೆ ವ್ಯತಿರಿಕ್ತವಾಗಿದೆ. ಅನ್ಯಾಯವೆಂಬುದೇ ಅದರ ಸರಿಯಾದ ಅರ್ಥ. ಆದ್ದರಿಂದಲೇ ಹ. ಇಬ್ನು ಅಬ್ಬಾಸ್, ಹಸನ್, ಮುಜಾಹಿದ್, ಶಅಬೀ, ಇಕ್ರಿಮಃ, ಕತಾದಃ(ರ) ಮತ್ತಿತರರು 'ಅಲ್ಲಾ ತಊಲೂ' ಎಂಬುದನ್ನು 'ಲಾ ತಮೀಲೂ ಅನಿಲ್ ಹಕ್' ಎಂದು ಅರ್ಥೈಸಿರುವರು. ಆದ್ದರಿಂದ ಪವಿತ್ರ ಕುರ್‌ಆನಿನ ಮೇಲ್ಕಾಣಿಸಿದ ಸೂಕ್ತದಿಂದ ತಿಳಿದು ಬರುವುದೇನೆಂದರೆ ಒಬ್ಬನು ಪತ್ನಿಯರ ಮಧ್ಯೆ ನ್ಯಾಯ ಪಾಲಿಸದಿದ್ದರೆ ಮತ್ತು ಒಬ್ಬಳ ಕಡೆಗೆ ವಾಲಿಕೊಂಡು ಇನ್ನುಳಿದವರ ಹಕ್ಕುಗಳನ್ನು ಕಬಳಿಸಿದರೆ ಅವನು ಅಕ್ರಮಿ ಎನಿಸುತ್ತಾನೆ. ಬಹುಪತ್ನಿತ್ವದ ಅನುಮತಿಯಿಂದ ಪ್ರಯೋಜನ ಪಡೆಯುವ ಅಧಿಕಾರ ಅವನಿಗಿಲ್ಲ. ಇಂತಹ ಸಂದರ್ಭಗಳಲ್ಲಿ ಕಾನೂನು ಒಂದೇ ಪತ್ನಿಯನ್ನಿರಿಸುವಂತೆ ಅವನನ್ನು ನಿರ್ಬಂಧಿಸಬೇಕು. ಇತರ ಪತ್ನಿ ಅಥವಾ ಪತ್ನಿಯರಿಗೆ ಆತನ ವಿರುದ್ಧ ದಾವೆ ಹೂಡಿ ತಮ್ಮ ಇತರ ಹಕ್ಕುಗಳನ್ನು ಪಡೆಯುವ ಅಧಿಕಾರವಿರಬೇಕು.

ನ್ಯಾಯದ ಬಗ್ಗೆ ಒಂದು ವಿಷಯ ಕುರ್‌ಆನ್ ಸ್ಪಷ್ಟಪಡಿಸಿದೆ. ಪ್ರೀತಿಯ ವಿಷಯದಲ್ಲಿ ಸಮಾನತೆ ಪಾಲಿಸುವುದು ಮನುಷ್ಯ ಶಕ್ತಿಗೆ ಮೀರಿದ ಸಂಗತಿ. ಆದ್ದರಿಂದಲೇ ಅದಕ್ಕೆ ಅವನು ಬದ್ಧನೂ ಅಲ್ಲ. ಆದರೆ ಜೀವನಾಂಶ ನೀಡುವ ವಿಷಯದಲ್ಲಿ, ವರ್ತನೆಯ ವಿಷಯದಲ್ಲಿ ಹಾಗೂ ಪತಿ-ಪತ್ನಿಯ ದೈಹಿಕ ಸಂಬಂಧದ ವಿಷಯದಲ್ಲಿ ಪತ್ನಿಯರ ಮಧ್ಯೆ ಪೂರ್ಣ ಸಮಾನತೆ ಪಾಲಿಸುವುದನ್ನು ಅವನ ಮೇಲೆ ಕಡ್ಡಾಯಗೊಳಿಸಲಾಗಿದೆ.

ಈ ಮೂರು ವಿಷಯಗಳಲ್ಲಿ ಪತಿಯು ಮಾಡುವ ಅನ್ಯಾಯಗಳ ಬಗ್ಗೆ ನ್ಯಾಯಾಲಯವು ಹಸ್ತಕ್ಷೇಪಿಸಬಹುದಾಗಿದೆ. ಇದಲ್ಲದೆ ಪತಿ-ಪತ್ನಿಯರ ಪರಸ್ಪರ ವ್ಯವಹಾರದಲ್ಲಿ ವಾತ್ಸಲ್ಯ ಮತ್ತು ಕರುಣೆಯ ಮೇರೆಯನ್ನು ಮೀರಿದಂತಹ ಇತರ ಅನೇಕ ಪ್ರಕರಣಗಳಿರಬಹುದು, ಅವುಗಳಲ್ಲಿ ಹಸ್ತಕ್ಷೇಪ ನಡೆಸಲು ಕಾನೂನಿಗೆ ಅವಕಾಶವಿಲ್ಲ. ಇಂತಹ ವಿಷಯಗಳ ಬಗ್ಗೆ ಪವಿತ್ರ ಕುರ್‌ಆನ್, ಪತಿಯಂದಿರಿಗೆ ಸಾಮಾನ್ಯ ನೈತಿಕ ಆದೇಶಗಳನ್ನು ನೀಡಿದೆ. ಅವುಗಳ ಸಾರವಿಷ್ಟೇ, ಪತ್ನಿಯೊಂದಿಗೆ ಬಹಳ ಪ್ರೀತಿ ಹಾಗೂ ಔದಾರ್ಯದಿಂದ ವರ್ತಿಸಬೇಕು. ರಾತ್ರಿ ಹಗಲೆನ್ನದೆ ಜಗಳವಾಡುತ್ತಾ ಕಳೆಯುವುದು ಮೂರ್ಖತನ. ಪತ್ನಿಯನ್ನು ಇರಿಸಿಕೊಳ್ಳುವುದಾದರೆ ಉತ್ತಮ ರೀತಿಯಲ್ಲಿ ಇರಿಸಿಕೊಳ್ಳಬೇಕು. ಪರಸ್ಪರ ಹೊಂದಾಣಿಕೆ ಸಾಧ್ಯವಿಲ್ಲದೆ ಹೋದರೆ ಬಿಟ್ಟು ಬಿಡಬೇಕು. ಪವಿತ್ರ ಕುರ್‌ಆನಿನ ಈ ಆದೇಶಗಳನ್ನೆಲ್ಲಾ ಕಾನೂನಿನ ಬಲದಿಂದ ಜಾರಿಗೊಳಿಸಲು ಸಾಧ್ಯವಿಲ್ಲ. ಪತಿ-ಪತ್ನಿಯರ ಜಗಳಗಳಲ್ಲಿ ಹಸ್ತಕ್ಷೇಪ ನಡೆಸಲು ಕಾನೂನಿಗೆ ಸಾಧ್ಯವೂ ಇಲ್ಲ. ಆದರೆ ನ್ಯಾಯ ನೀತಿ ಹಾಗೂ ಕರುಣೆ ವಾತ್ಸಲ್ಯಗಳಿಂದ ವರ್ತಿಸಬೇಕೆಂಬ ಹೊಣೆಯನ್ನು ಕಾನೂನು ಪತಿಯ

ಮೇಲೆಯೇ ಅಧಿಕವಾಗಿ ಹೇರುವುದೇ ಈ ಕಾನೂನಿನ ಇಂಗಿತ ಎಂಬುದಂತು ಇದರಿಂದ ವ್ಯಕ್ತವಾಗುತ್ತದೆ.

## ಪುರುಷನ ಹಕ್ಕುಗಳು

ಪುರುಷನಿಗೆ ಮೇಲ್ವಿಚಾರಕನ ಸ್ಥಾನವನ್ನು ಯಾವ ಹೊಣೆಗಾರಿಕೆಗಳೊಂದಿಗೆ ನೀಡಲಾಗಿದೆ ಎಂಬುದನ್ನು ಈ ಹಿಂದೆ ವಿವರಿಸಲಾಗಿದೆ. ಈಗ ಮೇಲ್ವಿಚಾರಕನೆಂಬ ನೆಲೆಯಲ್ಲಿ ಪುರುಷನ ಹಕ್ಕುಗಳೇನೆಂಬುದನ್ನು ನೋಡೋಣ.

## 1. ರಹಸ್ಯ ಪಾಲನೆ:

ಸ್ತ್ರೀಯ ಮೇಲೆ ಪುರುಷನಿಗಿರುವ ಪ್ರಥಮ ಹಕ್ಕನ್ನು ವಿವರಿಸಲು ಪವಿತ್ರ ಕುರ್‌ಆನ್ ಎಂತಹ ಪದಗಳನ್ನು ಬಳಸಿದೆಯೆಂದರೆ ಜಗತ್ತಿನ ಬೇರಾವ ಭಾಷೆಯ ಪದಗಳಲ್ಲೂ ಅದರ ಅರ್ಥವನ್ನು ಯಥಾವತ್ತಾಗಿ ನೀಡಲು ಸಾಧ್ಯವಿಲ್ಲ. ಅದು ಹೀಗೆ ಹೇಳುತ್ತದೆ:

**"...ಸುಶೀಲೆಯರಾದ ಸ್ತ್ರೀಯರು ಅನುಸರಣಶೀಲರಾಗಿರುತ್ತಾರೆ ಮತ್ತು ಅವರು ಪುರುಷರ ಅನುಪಸ್ಥಿತಿಯಲ್ಲಿ ಅಲ್ಲಾಹನ ರಕ್ಷಣೆಯಲ್ಲಿ ಅವರ ಹಕ್ಕು ಬಾಧ್ಯತೆಗಳ ರಕ್ಷಣೆ ಮಾಡುತ್ತಾರೆ..." (ಅನ್ನಿಸಾ : 34)**

ಈ ಸೂಕ್ತದಲ್ಲಿ 'ಹಿಫ್‌ಝುಲ್ಲಿಲ್‌ಗೈಬಿ' ಎಂದರೆ ಪತಿಗೆ ಸೇರಿದ ಮತ್ತು ಆತನ ಅನುಪಸ್ಥಿತಿಯಲ್ಲಿ ಅಮಾನತ್‌ನ (ವಿಶ್ವಸ್ಥ ನಿಧಿಯ) ರೂಪದಲ್ಲಿ ಸ್ತ್ರೀಯ ಬಳಿ ಇರುವ ಎಲ್ಲಾ ವಸ್ತುಗಳ ಸಂರಕ್ಷಣೆ ಮಾಡುವುದಾಗಿದೆ. ಇದರಲ್ಲಿ ಆತನ ವಂಶ ಪಾರಂಪರ್ಯದ ಸಂರಕ್ಷಣೆ, ಆತನ ಮಾನದ ಸಂರಕ್ಷಣೆ, ಆತನ ವೀರ್ಯದ ಸಂರಕ್ಷಣೆ, ಆತನ ಸೊತ್ತಿನ ಸಂರಕ್ಷಣೆ, ಆತನ ರಹಸ್ಯಗಳ ಸಂರಕ್ಷಣೆ ಒಟ್ಟಿನಲ್ಲಿ ಎಲ್ಲವೂ ಸೇರುತ್ತದೆ. ಒಂದು ವೇಳೆ ಪತ್ನಿಯು ಪತಿಯ ಈ ಹಕ್ಕುಗಳ ಪೈಕಿ ಯಾವುದನ್ನಾದರೂ ನೆರವೇರಿಸುವುದರಲ್ಲಿ ಕುಂದುಂಟು ಮಾಡಿದರೆ ಪುರುಷನಿಗೆ ಇನ್ನು ಮುಂದೆ ವಿವರಿಸಲಾಗುವ ಅಧಿಕಾರಗಳನ್ನು ಉಪಯೋಗಿಸುವ ಹಕ್ಕಿರುವುದು.

## 2. ಪತಿಯ ಅನುಸರಣೆ:

ಪತ್ನಿಯು ಪತಿಯನ್ನು ಅನುಸರಿಸಬೇಕಾದುದು ಆತನ ದ್ವಿತೀಯ ಹಕ್ಕು.

**"...ಸುಶೀಲೆಯರಾದ ಸ್ತ್ರೀಯರು ಅನುಸರಣಶೀಲರಾಗಿರುತ್ತಾರೆ..."(ಅನ್ನಿಸಾ : 34)**

ಇದೊಂದು ಸಾಮಾನ್ಯ ವಿಧಿ. ಇದರ ವಿವರಣೆಗಾಗಿ ಪ್ರವಾದಿ(ಸ)ರವರು ಅನೇಕ ವಿಷಯಗಳನ್ನು ಹೇಳಿರುವರು.

ಅವರು ನೀವು ಇಷ್ಟ ಪಡದವರನ್ನು ನಿಮ್ಮ ಮನೆಯೊಳಗೆ ಸೇರಿಸಬಾರದೆಂಬುದು ಅವರ ಮೇಲಿರುವ ನಿಮ್ಮ ಹಕ್ಕಾಗಿದೆ.

ಅವನ ಮನೆಯಿಂದ ಅವನ ಅನುಮತಿ ಇಲ್ಲದೆ ಯಾವ ವಸ್ತುವನ್ನೂ ದಾನ ಮಾಡಬಾರದು. ಹಾಗೆ ಮಾಡಿದರೆ ಅದರ ಪುಣ್ಯವಂತೂ ಪತಿಗೇ ಸೇರುತ್ತದೆ ಪಾಪ ಮಾತ್ರ ಪತ್ನಿಯ ಮೇಲಿರುತ್ತದೆ. ಆತನ ಅನುಮತಿ ಇಲ್ಲದೆ ಮನೆ ಬಿಟ್ಟು ಹೊರಡಲೂ ಬಾರದು.

ರಮಝಾನ್ ತಿಂಗಳ ಹೊರತು ಇತರ ದಿನಗಳ ಐಚ್ಛಿಕ ಉಪವಾಸಗಳನ್ನು ಒಂದು ದಿನವಾದರೂ ಆತನ ಅನುಮತಿಯಿಲ್ಲದೆ ಆಚರಿಸಬಾರದು.

ನೀನು ಆಕೆಯನ್ನು ನೋಡಿದಾಗ ನಿನ್ನ ಮನಸ್ಸು ಸಂತೋಷಗೊಳ್ಳುವ, ನೀನು ಆಜ್ಞಾಪಿಸಿದಾಗ ನಿನ್ನ ಅನುಸರಣೆ ಮಾಡುವ ಹಾಗೂ ನೀನು ಇಲ್ಲದಿರುವಾಗ ನಿನ್ನ ಸೊತ್ತು ಮತ್ತು ಅವಳ ಶರೀರದ ಮೇಲೆ ನಿನಗಿರುವ ಹಕ್ಕನ್ನು ಸಂರಕ್ಷಿಸುವವಳೇ ಅತ್ಯುತ್ತಮ ಪತ್ನಿಯಾಗಿರುವಳು. (ಹದೀಸ್)

ಅನುಸರಣೆಯ ಈ ಸಾಮಾನ್ಯ ನಿಯಮಕ್ಕೆ ಒಂದು ಅಪವಾದವಿದೆ. ಪತಿಯು ಪತ್ನಿಗೆ ದೇವಾಜ್ಞೆಯ ಉಲ್ಲಂಘನೆ ಮಾಡುವಂತೆ ಹೇಳಿದರೆ ಅದನ್ನು ಆಕೆ ಅನುಸರಿಸಬೇಕಾಗಿಲ್ಲ. ಮಾತ್ರವಲ್ಲ ಅನುಸರಿಸಬಾರದು. ಉದಾಹರಣೆಗೆ ಅವನು ಆಕೆಗೆ ಕಡ್ಡಾಯ ನಮಾಝ್ ಅಥವಾ ಉಪವಾಸ ವ್ರತ ತೊರೆಯುವ ಆಜ್ಞೆ ನೀಡಿದರೆ ಅಥವಾ ಮದ್ಯಪಾನ ಮಾಡುವ ಆಜ್ಞೆ ನೀಡಿದರೆ ಅಥವಾ ಅಶ್ಲೀಲ ಕಾರ್ಯಗಳಲ್ಲಿ ಆಕೆಯನ್ನು ತೊಡಗಿಸಬಯಸಿದರೆ ಆ ಆಜ್ಞೆಯನ್ನು ತಿರಸ್ಕರಿಸಲು ಆಕೆಗೆ ಹಕ್ಕು ಇರುವುದು. ಮಾತ್ರವಲ್ಲಅಂತಹ ಆಜ್ಞೆಗಳನ್ನು ತಿರಸ್ಕರಿಸುವುದು ಆಕೆಯ ಕರ್ತವ್ಯವಾಗಿದೆ. ಏಕೆಂದರೆ ಸೃಷ್ಟಿಕರ್ತನ ಆಜ್ಞೋಲಂಘನೆ ಮಾಡಿ ಯಾವುದೇ ಸೃಷ್ಟಿಯ ಆಜ್ಞೆಯನ್ನು ಪಾಲಿಸುವುದು ಧರ್ಮಸಮ್ಮತವಲ್ಲ. ಈ ವಿಶಿಷ್ಟ ಸಂದರ್ಭವನ್ನು ಬಿಟ್ಟು ಇತರ ಎಲ್ಲ ವಿಷಯಗಳಲ್ಲೂ ಪತಿಯನ್ನನುಸರಿಸುವುದು ಪತ್ನಿಯ ಕರ್ತವ್ಯವಾಗಿದೆ. ಒಂದು ವೇಳೆ ಆಕೆ ಅನುಸರಿಸದಿದ್ದರೆ ಅವಿಧೇಯಳೆನಿಸುವಳು. ಆಗ ಅವಳ ವಿರುದ್ಧ ಪತಿಯು ಮುಂದೆ ವಿವರಿಸಲಾಗುವ ತನ್ನ ಅಧಿಕಾರಗಳನ್ನು ಉಪಯೋಗಿಸಬಹುದಾಗಿದೆ.

## ಪತಿಯ ಅಧಿಕಾರಗಳು:

ಇಸ್ಲಾಮೀ ಕಾನೂನು ಪುರುಷನನ್ನು ಮೇಲ್ವಿಚಾರಕನಾಗಿ ಮಾಡಿದೆ. ಪತ್ನಿಯ ಮಹರ್ (ವಿವಾಹ ಧನ), ಜೀವನಾಂಶ, ಮೇಲ್ನೋಟ ಮತ್ತು ಸಂರಕ್ಷಣೆ ಆತನ ಹೊಣೆಯಾಗಿದೆ. ಆದುದರಿಂದ ಅದು ಪುರುಷನಿಗೆ ತನ್ನ ಪತ್ನಿಯ ಮೇಲೆ ಕೆಲವು ಅಧಿಕಾರಗಳನ್ನು ನೀಡಿದೆ. ಈ ಅಧಿಕಾರಗಳು ಕುಟುಂಬ ಜೀವನದ ಶಿಸ್ತು ಮತ್ತು ವ್ಯವಸ್ಥೆಯನ್ನು ಕಾಪಾಡಲು, ಮನೆಯ ನೈತಿಕತೆ ಮತ್ತು ಸದಾಚಾರವನ್ನು ಸಂರಕ್ಷಿಸಲು ಮತ್ತು ಸ್ತ್ರೀ ಪುರುಷರ ಹಕ್ಕುಗಳ ರಕ್ಷಣೆ ಮಾಡಲು ಆತನಿಗೆ ದೊರೆಯಬೇಕಾದುದು ಅತ್ಯಗತ್ಯ. ಇಸ್ಲಾಮೀ ಕಾನೂನಿನಲ್ಲಿ ಈ ಅಧಿಕಾರಗಳನ್ನು ಸ್ಪಷ್ಟವಾಗಿ ವಿವರಿಸಲಾಗಿದೆ. ಜೊತೆಗೆ ಈ ಅಧಿಕಾರಗಳನ್ನು ಚಲಾಯಿಸುವಾಗ ಯಾವ ಮಿತಿ ಮೇರೆಗಳನ್ನು ಪಾಲಿಸಬೇಕೆಂಬುದನ್ನೂ ನಿರ್ಣಯಿಸಲಾಗಿದೆ.

## ಉಪದೇಶ, ಶಿಸ್ತುಕ್ರಮ ಮತ್ತು ಶಿಕ್ಷೆ:

ಪತ್ನಿಯು ಪತಿಯ ಆಜ್ಞೋಲ್ಲಂಘನೆ ಮಾಡಿದರೆ ಅಥವಾ ಆತನ ಹಕ್ಕುಗಳ ಪೈಕಿ ಯಾವುದಕ್ಕಾದರೂ ಚ್ಯುತಿ ಮಾಡಿದರೆ ಪತಿಯು ಮೊದಲು ಆಕೆಗೆ ಸದುಪದೇಶ ಮಾಡಬೇಕು.

ಉಪದೇಶದಿಂದ ಆಕೆಯಲ್ಲಿ ಯಾವ ಮಾರ್ಪಾಟೂ ಆಗದೆ ಹೋದರೆ ಅಗತ್ಯಾನುಸಾರ ಆಕೆಯೊಂದಿಗೆ ಕಠಿಣವಾಗಿ ವ್ಯವಹರಿಸುವ ಅಧಿಕಾರ ಪತಿಗೆ ಇದೆ. ಇದರಿಂದಲೂ ಆಕೆಯಲ್ಲಿ ಸುಧಾರಣೆ ಆಗದಿದ್ದಲ್ಲಿ ಆಕೆಗೆ ಗಾಯವಾಗದ ರೀತಿಯಲ್ಲಿ ಹೊಡೆಯಬಹುದು.

**"ನಿಮ್ಮ ಸ್ತ್ರೀಯರಿಂದ ಆಜ್ಞೋಲ್ಲಂಘನೆಯ* ಆಶಂಕೆ ನಿಮಗಿದ್ದರೆ ಅವರಿಗೆ ನೀವು ಉಪದೇಶ ನೀಡಿರಿ. ಮಲಗುವಲ್ಲಿಂದ ಅವರಿಂದ ದೂರವಿರಿ ಮತ್ತು ಅವರಿಗೆ ಹೊಡೆಯಿರಿ. ಅನಂತರ ಅವರು ನಿಮಗೆ ವಿಧೇಯರಾಗಿ ನಡೆದರೆ, ಅವರ ಮೇಲೆ ಕೈಯೆತ್ತಲು ಬೇಕು ಬೇಕೆಂದೇ ನೆಪ ಹುಡುಕಬೇಡಿರಿ."(ಪವಿತ್ರ ಕುರ್‌ಆನ್ 4:34)**

ಈ ಸೂಕ್ತದಲ್ಲಿ 'ಮಲಗುವಲ್ಲಿ ಅವರನ್ನು ಬಿಟ್ಟು ದೂರವಿರಿ' ಎನ್ನುವ ಮೂಲಕ ಶಿಕ್ಷೆಯ ರೂಪದಲ್ಲಿ ಸಂಸರ್ಗವನ್ನು ಉಪೇಕ್ಷಿಸುವ ಅನುಮತಿ ನೀಡಲಾಗಿದೆ. ಆದರೆ 'ಈಲಾ'ದ ಕುರಿತು ಬಂದಿರುವ ಸೂಕ್ತವು ಇದಕ್ಕೊಂದು ಸಹಜ ಮಿತಿಯನ್ನು ನಿರ್ಣಯಿಸಿದೆ. ಸಂಸರ್ಗ ಉಪೇಕ್ಷೆಯೂ ನಾಲ್ಕು ತಿಂಗಳುಗಳಿಗಿಂತ ಅಧಿಕವಾಗಿರಬಾರದು. ಆದರೆ ಪತ್ನಿಯು ಅವಿಧೇಯಳೂ ಗರ್ವಿಷ್ಠಳೂ ಆಗಿದ್ದು ಪತಿಯು ನಾಲ್ಕು ತಿಂಗಳು ಶಯ್ಯಾಗಾರದಿಂದ ದೂರವಿದ್ದ ಬಳಿಕ ತನಗೆ ಶರೀಅತ್ ಪ್ರಕಾರ ತಲಾಕ್ ನೀಡುವನೆಂದು ತಿಳಿದಿದ್ದೂ ತನ್ನ ಆಜ್ಞೋಲ್ಲಂಘನೆಯನ್ನು ತೊರೆಯದಿದ್ದರೆ ಆಕೆಯನ್ನು ಬಿಟ್ಟು ಬಿಡುವುದೇ ಲೇಸು. ಆಕೆಗೆ ಸಭ್ಯತೆಯನ್ನು ಕಲಿಸಲು ನಾಲ್ಕು ತಿಂಗಳ ಕಾಲವೇ ಸಾಕು. ಅದಕ್ಕಿಂತ ಹೆಚ್ಚು ಕಾಲ ಈ ಶಿಕ್ಷೆ ಮುಂದುವರಿಸುವುದು ಅನಾವಶ್ಯಕ. ಯಾಕೆಂದರೆ ತನ್ನ ವರ್ತನೆಯ ಪರಿಣಾಮವಾಗಿ ತಲಾಕ್ ಆಗುವುದು ಎಂದು ತಿಳಿದಿದ್ದೂ ಇಷ್ಟು ದಿನ ಆಕೆ ತನ್ನ ಅವಿಧೇಯತೆಯಲ್ಲಿ ದೃಢವಾಗಿದ್ದುದು ಆಕೆಯಲ್ಲಿ ಸುಧಾರಣೆಯ ಯಾವ ಅವಕಾಶವೂ ಉಳಿದಿಲ್ಲವೆಂಬುದರ ನಿದರ್ಶನವಾಗಿದೆ. ಆಕೆ ಇನ್ನು ಸದಾಚಾರದೊಂದಿಗೆ ಈ ಪತಿಯ ಜೊತೆ ಕೂಡಿ ಬಾಳುವುದು ಸಾಧ್ಯವಿಲ್ಲ. ಸ್ತ್ರೀ ಪುರುಷರನ್ನು ಬಂಧಿಸಿಡುವ ವಿವಾಹ ಬಂಧನದ ಉದ್ದೇಶವೇ ಇಲ್ಲಿ ವಿಫಲಗೊಳ್ಳುವ ಸಾಧ್ಯತೆ ಇದೆ. ಪುರುಷನು ತನ್ನ ದೇಹೇಚ್ಛೆಗಳ ಪೂರೈಕೆಗೆ ಯಾವುದಾದರೂ ಅನೈತಿಕ ಮಾರ್ಗವನ್ನು ಅವಲಂಬಿಸುವ ಸಾಧ್ಯತೆಯೂ ಇದೆ. ಪತ್ನಿಯೂ ನೈತಿಕ ಅಧಃಪತನದ ಮಾರ್ಗ ಹಿಡಿಯುವ ಸಂಭವ ಉಂಟು. ಪತಿ ಅಥವಾ ಪತ್ನಿಯರ ಪೈಕಿ ಯಾರಾದರೊಬ್ಬರು ಇಷ್ಟು ಹಟಮಾರಿಯಾಗಿರುವಾಗ ಅವರ ಮಧ್ಯೆ ಕರುಣೆ ಮತ್ತು ವಾತ್ಸಲ್ಯದ ಸಂಬಂಧವೇ ಕಡಿದು ಬೀಳುವ ಸಾಧ್ಯತೆ ಇದೆ.

ಇಮಾಮ್ ಸುಫ್‌ಯಾನ್ ಸೂರಿಯವರು 'ವಹ್‌ಜುರೂಹುನ್ನ ಫಿಲ್ ಮಳಾಜಿಯಿ' ಎಂಬ ವಾಕ್ಯಕ್ಕೆ ಇನ್ನೊಂದು ಅರ್ಥವನ್ನು ಕೊಡುತ್ತಾರೆ. ಅವರು ಅರಬಿ ಸಾಹಿತ್ಯದಿಂದ ಉದಾಹರಣೆ ನೀಡಿ 'ಹಿಜ್ರ್' ಎಂದರೆ ಕಟ್ಟಿ ಹಾಕು ಎಂಬ ಅರ್ಥವಿದೆ ಎನ್ನುತ್ತಾರೆ. ಒಂಟೆಯ ಬೆನ್ನು ಮತ್ತು ಕಾಲುಗಳನ್ನು ಸೇರಿಸಿ ಕಟ್ಟಿ ಹಾಕುವ ಹಗ್ಗವನ್ನು 'ಹಿಜಾರ್'ಎನ್ನುತ್ತಾರೆ. ಆದ್ದರಿಂದ ಅವರು ಉಪದೇಶ ಸ್ವೀಕರಿಸದಿದ್ದರೆ ಅವರನ್ನು ಮನೆಯೊಳಗೆ ಕಟ್ಟಿಹಾಕಿ ಎಂಬುದೇ ದೇವ ವಿಧಿಯ ಇಂಗಿತವೆಂಬುದು ಹ. ಸುಫ್‌ಯಾನ್ ಸೂರಿಯವರ ಅಭಿಪ್ರಾಯ. ಆದರೆ ಈ ಅರ್ಥವು ಪವಿತ್ರ

* ಪಾರಿಭಾಷಿಕ ಅರ್ಥದಲ್ಲಿ ಇದರ ಉದ್ದೇಶ ತನ್ನ ಬಾಧ್ಯತೆಗಳನ್ನು ತೀರಿಸದಿರುವುದಾಗಿದೆ. ಅದು ಪುರುಷ ಮತ್ತು ಸ್ತ್ರೀಯ ಪೈಕಿ ಯಾರ ಕಡೆಯಿಂದಲೂ ಆಗಿರಬಹುದು.

ಕುರ್‌ಆನಿನ ಆಶಯಕ್ಕೆ ವಿರುದ್ಧವಾಗಿದೆ. 'ಫಿಲ್ ಮಳಾಜಿಯಿ' ಎಂಬ ಪದಗಳಲ್ಲಿ ಪವಿತ್ರ ಕುರ್‌ಆನ್ ತನ್ನ ಆಶಯವನ್ನು ವ್ಯಕ್ತಪಡಿಸಿದೆ. 'ಮಳಜಲಿತ್' ಎಂದರೆ ಶಯ್ಯಾಗಾರ. ಶಯ್ಯಾಗಾರದಲ್ಲಿ ಕಟ್ಟಿ ಹಾಕುವುದೆಂದರೆ ಒಂದು ಅರ್ಥಹೀನ ಮಾತು. ಅತ್ಯಂತ ಕಠಿಣ ಪರಿಸ್ಥಿತಿಯಲ್ಲಿ ನೀಡಬಹುದೆಂದು ಅನುಮತಿಸಲಾಗಿರುವ ಶಿಕ್ಷೆಯು ಹೊಡೆಯುವ ಶಿಕ್ಷೆಯಾಗಿದೆ. ಆದರೆ ಇಲ್ಲೂ ಹೊಡೆತ ತೀವ್ರವಾಗಿರಬಾರದೆಂದು ಪ್ರವಾದಿ(ಸ) ಇದಕ್ಕೆ ಶರ್ತ ವಿಧಿಸಿರುವರು:

'ನಿಮ್ಮ ಯಾವುದೇ ಧರ್ಮಸಮ್ಮತ ಆಜ್ಞೆಯನ್ನು ಅವರು ಉಲ್ಲಂಘಿಸಿದರೆ ಅವರಿಗೆ ಹೆಚ್ಚು ಸಂಕಟವಾಗದ ರೀತಿಯಲ್ಲಿ ಹೊಡೆಯಿರಿ. ಮುಖದ ಮೇಲೆ ಹೊಡೆಯಬೇಡಿರಿ, ಬೈಯಬೇಡಿರಿ' ಎಂದು ಪ್ರವಾದಿ(ಸ) ಹೇಳಿರುವರು.

ಈ ಎರಡು ಶಿಕ್ಷೆಗಳನ್ನು ನೀಡುವ ಅಧಿಕಾರವನ್ನು ಪತಿಗೆ ನೀಡಲಾಗಿದೆ. ಆದರೆ ಪ್ರವಾದಿವರ್ಯ(ಸ)ರು ಹೇಳಿರುವಂತೆ ಪತಿಯ ನ್ಯಾಯಸಮ್ಮತ ಹಕ್ಕಿನ ಉಲ್ಲಂಘನೆ ಆಗುವಂತಹ ಅವಿಧೇಯತೆಗೆ ಮಾತ್ರ ಈ ಶಿಕ್ಷೆಗಳನ್ನೂ ನೀಡಬಹುದಾಗಿದೆ. ಮನಬಂದಂತೆ ಆಜ್ಞೆ ನೀಡುವ ಮತ್ತು ಆ ಆಜ್ಞೆ ಉಲ್ಲಂಘಿಸಿದಾಗಲೆಲ್ಲಾ ಶಿಕ್ಷಿಸುವ ಅಧಿಕಾರವನ್ನು ಪತಿಗೆ ನೀಡಲಾಗಿಲ್ಲ. ಅಂತೆಯೇ ತಪ್ಪು ಮತ್ತು ಶಿಕ್ಷೆಗಳಲ್ಲಿ ಸಮತೋಲನವಿರಬೇಕು. ಇಸ್ಲಾಮೀ ಕಾನೂನಿನ ಒಂದು ಸಾಮಾನ್ಯ ನಿಯಮ ಈ ರೀತಿ ಇದೆ 'ಯಾರು ನಿಮ್ಮ ಮೇಲೆ ಅತಿರೇಕ ಎಸಗುತ್ತಾರೋ ಅವರಿಗೆ ನೀವೂ ಅಷ್ಟೇ ಪ್ರತೀಕಾರ ಎಸಗಬಹುದು.' ಒಂದು ಅತಿರೇಕಕ್ಕೆ ಪ್ರತಿಯಾಗಿ ಅದಕ್ಕಿಂತ ಹೆಚ್ಚಿನ ಅತಿರೇಕವೆಸಗುವುದು ಶಿಕ್ಷೆಯಲ್ಲ, ಅದು ಅನ್ಯಾಯವಾಗುತ್ತದೆ. ಯಾವ ತಪ್ಪಿಗೆ ಉಪದೇಶ ಸಾಕಾಗುವುದೋ ಅದಕ್ಕೆ ಮಾತುಕತೆ ನಿಲ್ಲಿಸುವ ಶಿಕ್ಷೆ ನೀಡುವುದು ಯಾವುದಕ್ಕೆ ಕೇವಲ ಮಾತುಕತೆ ನಿಲ್ಲಿಸುವುದು ಸಾಕಾಗುವುದೋ ಅದಕ್ಕೆ ಸಂಸರ್ಗ ಪರಿತ್ಯಾಗ ಅಥವಾ ಯಾವ ತಪ್ಪಿಗೆ ಸಂಸರ್ಗ ಪರಿತ್ಯಾಗ ಸಾಕಾಗುವುದೋ ಅದಕ್ಕೆ ಹೊಡೆತದ ಶಿಕ್ಷೆನೀಡುವುದು ಅನ್ಯಾಯವೆನಿಸುತ್ತದೆ. ಹೊಡೆತ ಎಂಬುದೂ ಒಂದು ಕಠಿಣ ನೆಯ ಶಿಕ್ಷೆ, ಅದನ್ನು ಅತ್ಯಂತ ಕಠಿಣ ಮತ್ತು ಸಹಿಸಲಸಾಧ್ಯವಾದ ತಪ್ಪಿಗಾಗಿ ಮಾತ್ರ ನೀಡಬಹುದಾಗಿದೆ. ಅದರಲ್ಲೂ ಪ್ರವಾದಿವರ್ಯ(ಸ)ರು ವಿಧಿಸಿರುವ ಮಿತಿಮೇರೆಗಳನ್ನು ಪಾಲಿಸಬೇಕಾಗಿದೆ. ಅದನ್ನು ಉಲ್ಲಂಘಿಸಿದರೆ ಅದು ಪತಿಯ ಕಡೆಯಿಂದ ಅನ್ಯಾಯವೆಂದು ಪರಿಗಣಿಸಲ್ಪಡುವುದು. ಆ ಸಂದರ್ಭದಲ್ಲಿ ಪತ್ನಿಗೆ ಆತನ ವಿರುದ್ಧ ಕಾನೂನಿನ ನೆರವು ಪಡೆಯುವ ಅಧಿಕಾರವಿರುವುದು.

## ತಲಾಕ್

ಪತಿಗೆ ನೀಡಲಾಗಿರುವ ಎರಡನೇ ಅಧಿಕಾರ ತಲಾಕ್ ಆಗಿದೆ. ಅರ್ಥಾತ್ ತಾನು ಯಾರ ಜತೆ ಸಹಬಾಳ್ವೆ ನಡೆಸುವುದು ಅಸಾಧ್ಯವೋ ಆಕೆಗೆ ತಲಾಕ್ ನೀಡುವುದು. ಪುರುಷನು ತನ್ನ ಹಣವನ್ನು ವೆಚ್ಚ ಮಾಡಿ ದಾಂಪತ್ಯದ ಹಕ್ಕುಗಳನ್ನು ಗಳಿಸುತ್ತಾನೆ. ಆದ್ದರಿಂದ ಆ ಹಕ್ಕುಗಳಿಂದ ಮುಕ್ತವಾಗುವ ಅಧಿಕಾರವನ್ನು ಆತನಿಗೆ ನೀಡಲಾಗಿದೆ.* ಪತ್ನಿಗೆ ಈ ಅಧಿಕಾರ ನೀಡುವುದು

* ಕೆಲವರು ಪಾಶ್ಚಾತ್ಯರ ಅಂಧಾನುಕರಣೆ ಮಾಡುತ್ತಾ ತಲಾಕ್ ನೀಡುವ ಹಕ್ಕನ್ನು ಪತಿಯಿಂದ ಕಸಿದು ನ್ಯಾಯಾಲಯಕ್ಕೆ ನೀಡಬಯಸುತ್ತಾರೆ. ಟರ್ಕಿಯಲ್ಲಿ ಈಗಾಗಲೇ ಹೀಗೆ ಮಾಡಲಾಗಿದೆ. ಆದರೆ ಇದು ಕುರ್‌ಆನ್ ಮತ್ತು ಹದೀಸ್‌ಗೆ ವಿರುದ್ಧವಾಗಿದೆ. ಪವಿತ್ರ ಕುರ್‌ಆನ್ ತಲಾಕ್‌ನ ನಿಯಮಗಳನ್ನು

ಅಸಾಧ್ಯ. ಏಕೆಂದರೆ ಪತ್ನಿಗೆ ತಲಾಕ್‌ನ ಹಕ್ಕು ನೀಡಲ್ಪಟ್ಟರೆ ಪುರುಷರ ಹಕ್ಕುಚ್ಯುತಿ ಮಾಡಲು ಆಕೆ ಸ್ವತಂತ್ರಳಾಗುತ್ತಾಳೆ. ಯಾವನು ತನ್ನ ಹಣವನ್ನು ವ್ಯಯಿಸಿ ಒಂದು ವಸ್ತುವನ್ನು ಪಡೆಯುವನೋ ಅದನ್ನವನು ಕೊನೆಯ ಹಂತದವರೆಗೆ ಸುರಕ್ಷಿತವಾಗಿಡಲು ಪ್ರಯತ್ನಿಸುವನು. ಅದನ್ನು ತ್ಯಜಿಸದೆ ಅನ್ಯ ಮಾರ್ಗವಿಲ್ಲವೆಂದು ಮನಗಂಡಾಗ ಮಾತ್ರ ಅದರ ತ್ಯಾಗಕ್ಕೆ ಸಿದ್ಧನಾಗುವನು. ಆದರೆ ಹಣ ವ್ಯಯಿಸುವವನು ಒಬ್ಬನಾಗಿದ್ದು ಅದನ್ನು ಕಳಕೊಳ್ಳುವ ಅಧಿಕಾರ ಇನ್ನೊಬ್ಬನಿಗೆ ಇದ್ದರೆ ಅವನು ಅಧಿಕಾರವನ್ನು ಉಪಯೋಗಿಸುವಾಗ ಹಣ ವ್ಯಯಿಸಿದವನ ಹಕ್ಕು ಸುರಕ್ಷಿತವಾಗಿರುವ ಸಾಧ್ಯತೆ ಕಡಿಮೆ. ಆದ್ದರಿಂದ ಪುರುಷನಿಗೆ ತಲಾಕಿನ ಅಧಿಕಾರ ನೀಡಿರುವುದು ಆತನ ಧರ್ಮಸಮ್ಮತ ಹಕ್ಕುಗಳ ಸುರಕ್ಷತೆಗಾಗಿ. ಮಾತ್ರವಲ್ಲ ತಲಾಕ್ ಹೆಚ್ಚಾಗದಿರಲಿ ಎಂಬ ಉದ್ದೇಶವೂ ಅದರಲ್ಲಿ ಅಡಕವಾಗಿದೆ.

---

ವಿವರಿಸಿದಲ್ಲೆಲ್ಲಾ ಅದನ್ನು ಪುರುಷರಿಗೇ ಸಂಬಂಧಿಸಿದೆ. 'ನೀವು ನಿಮ್ಮ ಸ್ತ್ರೀಯರಿಗೆ ತಲಾಕ್ ನೀಡಿದರೆ,' 'ಆಕೆಗೆ ನೀವು ತಲಾಕ್ ನೀಡಿದರೆ,' 'ನೀವು ತಲಾಕ್ ನೀಡುವ ನಿರ್ಧಾರ ಮಾಡಿದರೆ' ಮುಂತಾದ ಕುರ್‌ಆನ್ ಸೂಕ್ತಗಳು ತಲಾಕ್ ನೀಡುವ ಅಧಿಕಾರವನ್ನು ಪುರುಷನಿಗೇ ನೀಡಲಾಗಿದೆ ಎಂಬುದಕ್ಕೆ ಸ್ಪಷ್ಟ ಪುರಾವೆಗಳಾಗಿವೆ. 'ವಿವಾಹದ ಬಂಧನ ಅವನ ಕೈಯಲ್ಲಿದೆ' ಎಂದು ಕುರ್‌ಆನ್ ಸ್ಪಷ್ಟವಾಗಿ ಸಾರುತ್ತದೆ. ಆತನ ಕೈಯಲ್ಲಿರುವ ಈ ಬಂಧನವನ್ನು ಆತನಿಂದ ಕಸಿದು ನ್ಯಾಯಾಧೀಶರಿಗೆ ನೀಡುವ ಅಧಿಕಾರ ಯಾರಿಗಿದೆ? ಇಬ್ನು ಮಾಜಾದಲ್ಲಿ ಅಬ್ದುಲ್ಲಾ ಬಿನ್ ಅಬ್ಬಾಸ್(ರ)ರವರ ಒಂದು ವರದಿ ಉಲ್ಲೇಖಿಸಲ್ಪಟ್ಟಿದೆ. ಓರ್ವನು ಪ್ರವಾದಿ(ಸ)ರಲ್ಲಿ ಈ ರೀತಿ ದೂರುತ್ತಾನೆ. 'ನನ್ನ ಯಜಮಾನನು ನನ್ನೊಂದಿಗೆ ತನ್ನ ದಾಸಿಯ ವಿವಾಹ ಮಾಡಿಸಿದ್ದನು, ಈಗ ಅವನು ಆಕೆಯನ್ನು ನನ್ನಿಂದ ಬೇರ್ಪಡಿಸಬಯಸುತ್ತಾನೆ.' ಇದನ್ನು ಕೇಳಿ ಪ್ರವಾದಿ(ಸ) ಒಂದು ಭಾಷಣ ಮಾಡಿ ಅದರಲ್ಲಿ 'ನೀವು ನಿಮ್ಮ ಗುಲಾಮನಿಗೆ ನಿಮ್ಮ ದಾಸಿಯನ್ನು ಮದುವೆ ಮಾಡಿಕೊಟ್ಟು ಆ ಬಳಿಕ ಅವಳನ್ನು ಬೇರ್ಪಡಿಸ ಬಯಸುತ್ತೀರಾ? ತಲಾಕ್‌ನ ಅಧಿಕಾರವಿರುವುದು ಪತಿಗೆ ಮಾತ್ರ' ಎಂದು ಹೇಳಿದರು. ಈ ಹದೀಸ್ ಪರಂಪರೆಯ ದೃಷ್ಟಿಯಿಂದ ಅಷ್ಟೊಂದು ಪ್ರಬಲವಲ್ಲವಾದರೂ ಕುರ್‌ಆನ್ ವಾಕ್ಯದೊಂದಿಗೆ ಇರುವ ಸಾಮ್ಯತೆ ಇದಕ್ಕೆ ಬಲ ನೀಡುತ್ತದೆ. ಆದ್ದರಿಂದ ಕುರ್‌ಆನ್ ಮತ್ತು ಹದೀಸ್‌ಗಳ ಪ್ರಕಾರ ತಲಾಕ್ ನೀಡುವ ಅಧಿಕಾರವನ್ನು ಪತಿಯಿಂದ ಕಸಿದು ನ್ಯಾಯಾಲಯಗಳಿಗೆ ನೀಡುವುದು ಸರ್ವಥಾ ಧರ್ಮಸಮ್ಮತವಲ್ಲ. ಬುದ್ಧಿಯ ದೃಷ್ಟಿಯಿಂದಲೂ ಇದೊಂದು ತಪ್ಪು ಕೆಲಸ. ಇದರ ಪರಿಣಾಮವಾಗಿ ಪಾಶ್ಚಾತ್ಯ ದೇಶಗಳಂತೆ ನಮ್ಮಲ್ಲಿಯೂ ಕೌಟುಂಬಿಕ ಜೀವನದ ಲಜ್ಜಾಸ್ಪದ ಜಗಳಗಳು ಮತ್ತು ಅಶ್ಲೀಲ ಘಟನೆಗಳು ನ್ಯಾಯಾಲಯದಲ್ಲಿ ಬಹಿರಂಗವಾಗಿ ಚರ್ಚಿಸಲ್ಪಡುವುದರ ವಿನಾ ಬೇರೇನೂ ಪ್ರಯೋಜನವಾಗಲಾರದು.

# ದ್ವಿತೀಯ ತತ್ವ

ಇಸ್ಲಾಮೀ ದಾಂಪತ್ಯ ಕಾನೂನಿನ ದ್ವಿತೀಯ ಮೂಲ ತತ್ವವು ವಿವಾಹದ ಸಂಬಂಧವನ್ನು ಸಾಧ್ಯವಾದಷ್ಟು ಸುದೃಢಗೊಳಿಸಬೇಕು ಮತ್ತು ಒಮ್ಮೆ ಏರ್ಪಟ್ಟ ವಿವಾಹ ಬಂಧನವು ಜೀವನದಾದ್ಯಂತ ಮುಂದುವರಿಯುವಂತೆ ಪ್ರಯತ್ನಿಸಬೇಕು ಎಂಬುದಾಗಿದೆ. ಆದರೆ ಅವರಲ್ಲಿ ಪರಸ್ಪರ ಪ್ರೀತಿ ವಾತ್ಸಲ್ಯ ಮತ್ತು ಸಾಮರಸ್ಯ ಇಲ್ಲವಾದಾಗ ಮತ್ತು ಪುನಃ ಅದು ಉಂಟಾಗುವಂತಹ ಎಲ್ಲ ಸಾಧ್ಯತೆಗಳೂ ಮಾಯವಾದಾಗ ಹಾಗೂ ಅವರ ಆ ಬಂಧನವನ್ನು ಮುಂದುವರಿಸುವುದರಿಂದ ವಿವಾಹದ ಮೂಲ ಉದ್ದೇಶಕ್ಕೇ ಚ್ಯುತಿ ಬರುವ ಸಂಭವ ಬಂದಾಗ ಅವರನ್ನು ದ್ವೇಷ ಅಸಾಮರಸ್ಯ ಮತ್ತು ಪರಸ್ಪರ ಅನೈಕ್ಯತೆಯೊಂದಿಗೆ ದಾಂಪತ್ಯ ಜೀವನ ಮುಂದುವರಿಸುವಂತೆ ನಿರ್ಬಂಧಿಸಲು ಅದು ಬಯಸುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಅವರನ್ನು ಪರಸ್ಪರ ಬೇರ್ಪಡಿಸುವುದೇ ಅವರಿಬ್ಬರಿಗೂ ಶ್ರೇಯಸ್ಕರ. ಈ ವಿಷಯದಲ್ಲಿ ಇಸ್ಲಾಮೀ ಕಾನೂನು, ಮನುಷ್ಯ ಪ್ರಕೃತಿ ಮತ್ತು ನಾಗರಿಕತೆಯ ಬೇಡಿಕೆಗಳ ನಡುವಣ ಸರಿಯಾದ ಸಮತೋಲನವನ್ನು ಕಾಪಾಡುತ್ತದೆ. ಇಷ್ಟೊಂದು ಸಂತುಲಿತ ನಿಯಮ ಜಗತ್ತಿನ ಬೇರಾವ ಕಾನೂನಿನಲ್ಲೂ ಕಾಣ ಸಿಗುವುದಿಲ್ಲ. ಒಂದೆಡೆ ಅದು ದಾಂಪತ್ಯ ಜೀವನವನ್ನು ಸುದೃಢಗೊಳಿಸಲು ಪ್ರಯತ್ನಿಸುತ್ತದೆ. ಆದರೆ ಹಿಂದೂ ಮತ್ತು ಕ್ರೈಸ್ತ ಧರ್ಮದಲ್ಲಿರುವಂತೆ ವಿವಾಹ ಬಂಧನವನ್ನು ಮುರಿಯಲಾಗದ ಬಂಧನವೆಂದು ಪರಿಗಣಿಸುವುದಿಲ್ಲ. ಆ ಧರ್ಮಗಳಲ್ಲಿ ದಂಪತಿಗಳ ಪಾಲಿಗೆ ಅವರ ವೈವಾಹಿಕ ಜೀವನವು ಎಷ್ಟೇ ದೊಡ್ಡ ವಿಪತ್ತಾಗಿ ಮಾರ್ಪಟ್ಟರೂ ವಿವಾಹ ಬಂಧನವನ್ನು ಮುರಿಯಲು ಸಾಧ್ಯವೇ ಇಲ್ಲ. ಇನ್ನೊಂದೆಡೆ ಇಸ್ಲಾಮೀ ಕಾನೂನು ಪರಸ್ಪರ ಬೇರ್ಪಡುವ ಮಾರ್ಗವನ್ನು ತೆರೆಯುತ್ತದೆ. ಆದರೆ ಅದು ಇಂದು ರಷ್ಯಾ ಅಮೇರಿಕ ಮತ್ತು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಪ್ರಚಲಿತವಿರುವಂತೆ ವಿವಾಹ ವಿಚ್ಛೇದನವನ್ನು ಒಂದು ಅತ್ಯಂತ ಸುಲಭ ಕಾರ್ಯವೆಂದೇನೂ ಪರಿಗಣಿಸಿಲ್ಲ. ಅಲ್ಲಿ ವಿವಾಹ ಸಂಬಂಧಗಳಲ್ಲಿ ಸ್ಥಿರತೆಯೆಂಬುದು ತೀರಾ ಉಳಿದಿಲ್ಲ. ವೈವಾಹಿಕ ಸಂಬಂಧದ ಇಂತಹ ದೌರ್ಬಲ್ಯದಿಂದಾಗಿ ಅಲ್ಲಿ ವಿವಾಹ ವಿಚ್ಛೇದನವು ಒಂದು ಸಾಮಾನ್ಯ ಪ್ರಕ್ರಿಯೆಯಾಗಿದೆ ಮತ್ತು ಕುಟುಂಬ ಜೀವನದ ಸೌಧವು ಸಂಪೂರ್ಣ ಕುಸಿದು ಬಿದ್ದಿದೆ.

ಈ ಮೂಲತತ್ವದ ಪ್ರಕಾರ ದಂಪತಿಗಳು ಪರಸ್ಪರ ಬೇರ್ಪಡುವುದಕ್ಕೆ ಮೂರು ವಿಧಾನಗಳಿವೆ.(1) ತಲಾಕ್ (2) ಖುಲಾ ಮತ್ತು (3) ನ್ಯಾಯಾಲಯದ ಮೂಲಕ ವಿವಾಹ ಬಂಧನವನ್ನು ಅನೂರ್ಜಿತಗೊಳಿಸುವುದು.

# 1. ತಲಾಕ್ ಮತ್ತು ಅದರ ನಿಬಂಧನೆಗಳು:

ತಲಾಕ್ ಎಂಬುದು ಇಸ್ಲಾಮೀ ಧರ್ಮಶಾಸ್ತ್ರದ ಒಂದು ಪಾರಿಭಾಷಿಕ. ಇದರ ಅರ್ಥ ಬೇರ್ಪಡುವುದು ಎಂದಾಗಿದ್ದು ಅದರ ಹಕ್ಕನ್ನು ಪುರುಷನಿಗೆ ನೀಡಲಾಗಿದೆ. ಪುರುಷನಿಗೆ ಸ್ವಾತಂತ್ರ್ಯವಿದೆ. ಅವರು ಮಹ್‌ರ್ ಎಂಬ ವಿವಾಹ ಧನ (ವಧು ದಕ್ಷಿಣೆ) ನೀಡಿ ತಾನು ಗಳಿಸಿದ, ವೈವಾಹಿಕ ಬಾಧ್ಯತೆಯನ್ನು ತಾನಿಚ್ಛಿಸಿದಾಗ ಪರಿತ್ಯಜಿಸಬಹುದು. ಆದರೆ ಇಸ್ಲಾಮೀ ಧರ್ಮಶಾಸ್ತ್ರ ತಲಾಕನ್ನು ಎಂದೂ ಇಷ್ಟಪಡುವುದಿಲ್ಲ. ಪ್ರವಾದಿ(ಸ) ಹೀಗೆ ಹೇಳಿರುವರು:

'ಧರ್ಮಸಮ್ಮತ (ಹಲಾಲ್) ಕಾರ್ಯಗಳ ಪೈಕಿ ಅಲ್ಲಾಹನಿಗೆ ಅತ್ಯಧಿಕ ಅಪ್ರಿಯವಾದುದು ತಲಾಕ್ ಆಗಿದೆ.' (ಹದೀಸ್) 'ಮದುವೆ ಮಾಡಿರಿ. ತಲಾಕ್ ನೀಡದಿರಿ. ಏಕೆಂದರೆ ಅಲ್ಲಾಹನು(ಬೇರೆ ಬೇರೆ) ರುಚಿ ನೋಡುವ ಹವ್ಯಾಸವುಳ್ಳ ಸ್ತ್ರೀಯರನ್ನಾಗಲಿ ಪುರುಷರನ್ನಾಗಲಿ ಇಷ್ಟಪಡುವುದಿಲ್ಲ.' (ಹದೀಸ್)

ಆದುದರಿಂದ ಪುರುಷನಿಗೆ ನೀಡಲ್ಪಟ್ಟಿರುವ ತಲಾಕಿನ ಹಕ್ಕು ಶರ್ತಬದ್ಧವಾಗಿದೆ. ಆ ಶರ್ತಗಳಿಂದಾಗಿ ಆತನು ಅದನ್ನು ಒಂದು ಕೊನೆಯ ಆಯುಧವೆಂಬಂತೆ ಮಾತ್ರ ಉಪಯೋಗಿಸಬಹುದು.

ಪವಿತ್ರ ಕುರ್‌ಆನಿನ ಶಿಕ್ಷಣ ಪ್ರಕಾರ ಒಬ್ಬ ವ್ಯಕ್ತಿಗೆ ತನ್ನ ಪತ್ನಿಯು ಇಷ್ಟವಿಲ್ಲದಿದ್ದರೂ ಅವನು ಆಕೆಯೊಂದಿಗಿನ ತನ್ನ ವಿವಾಹ ಬಂಧನವನ್ನು ಕಾಪಾಡಿಕೊಳ್ಳಲು ಸಾಧ್ಯವಿದ್ದಷ್ಟು ಪ್ರಯತ್ನಿಸಬೇಕು.

"ನೀವು ಅವರೊಂದಿಗೆ ಉತ್ತಮ ರೀತಿಯಿಂದ ಜೀವನ ನಡೆಸಿರಿ. ಅವರು ನಿಮಗೆ ಅಪ್ರಿಯರಾಗಿದ್ದರೆ ಒಂದು ವಸ್ತುವು ನಿಮಗೆ ಅಪ್ರಿಯ ವಾಗಿದ್ದರೂ ಅಲ್ಲಾಹನು ಅದರಲ್ಲೇ ಅತಿ ಹೆಚ್ಚು ಒಳಿತನ್ನಿರಿಸಿರಲೂಬಹುದು." (ಅನ್ನಿಸಾ:19)

ಅವರೊಂದಿಗೆ ನಿಭಾಯಿಸುವುದು ನಿಮಗೆ ಸಾಧ್ಯವಿಲ್ಲದಾದಾಗ ಅವರಿಗೆ ತಲಾಕ್ ನೀಡುವ ಹಕ್ಕು ನಿಮಗಿದೆ. ಆದರೆ ಒಮ್ಮೆಲೇ ಅವರನ್ನು ತೊರೆದು ಬಿಡುವುದು ಸರಿಯಲ್ಲ. ಒಂದೊಂದು ತಿಂಗಳ ಅಂತರದಲ್ಲಿ ಒಂದೊಂದು ತಲಾಕ್ ನೀಡಿರಿ. ಮೂರನೇಯ ತಿಂಗಳ ಕೊನೆಯ ತನಕ ನಿಮಗೆ ಯೋಚಿಸುವ ಮತ್ತು ಸರಿಯಾದ ತೀರ್ಮಾನ ಮಾಡುವ ಅವಕಾಶ ಉಳಿದಿರುವುದು. ಈ ಮಧ್ಯೆ ಸಂಬಂಧ ಸುಧಾರಣೆಯ ಯಾವುದಾದರೂ ದಾರಿ ಕಂಡು ಬರಲೂಬಹುದು ಅಥವಾ ಮಹಿಳೆಯ ವರ್ತನೆಯಲ್ಲಿ ಉತ್ತಮ ಬದಲಾವಣೆ ಕಂಡು ಬರಲೂಬಹುದು ಅಥವಾ ನಿಮ್ಮ ಮನಸ್ಸು ಪರಿವರ್ತನೆಗೊಳ್ಳಲೂಬಹುದು.

ಈ ಅವಧಿಯಲ್ಲಿ ಚೆನ್ನಾಗಿ ಯೋಚಿಸಿದ ಬಳಿಕವೂ ನಿಮ್ಮ ತೀರ್ಮಾನ ವಿಚ್ಛೇದನ ಮಾಡುವುದೆಂದೇ ಆಗಿದ್ದರೆ ಮೂರನೇ ತಿಂಗಳ ಕೊನೆಯಲ್ಲಿ ಕೊನೆಯ ತಲಾಕ್ ಉಚ್ಛರಿಸಬಹುದು ಅಥವಾ ಹಾಗೆಯೇ ಇದ್ದತ್‌ನ ಅವಧಿ ಮುಗಿಯಗೊಡಲೂಬಹುದು.*

* ಮೂರನೇ ತಲಾಕ್ ನೀಡದಿರುವುದೇ ಉತ್ತಮ ವಿಧಾನವಾಗಿದೆ. ಇದ್ದತ್‌ನ ಅವಧಿಯನ್ನು ಹಾಗೆಯೇ ಮುಗಿಯಗೊಟ್ಟರೆ ಸಾಕು. ಹೀಗಾದರೆ ಅವರು ಪರಸ್ಪರ ಪುನಃ ನಿಕಾಹ್ ಮಾಡಬಯಸಿದರೆ ಅದಕ್ಕೆ ಅವರಿಗೆ

"ತಲಾಕ್ (ವಿವಾಹ ವಿಚ್ಛೇದನ) ಎರಡು ಸಲ. ಅನಂತರ ನ್ಯಾಯೋಚಿತವಾಗಿ ಸ್ತ್ರೀಯನ್ನು ತಡೆದಿರಿಸಿಕೊಳ್ಳಬೇಕು ಅಥವಾ ಯೋಗ್ಯ ರೀತಿಯಿಂದ ಅವಳನ್ನು ಬಿಡುಗಡೆಗೊಳಿಸಬೇಕು." (ಅಲ್‌ಬಕರಃ : 229)

"ತಲಾಕ್ ಕೊಡಲ್ಪಟ್ಟ ಸ್ತ್ರೀಯರು ಮೂರು ಬಾರಿ ಮುಟ್ಟಾಗುವ ತನಕ ತಮ್ಮನ್ನು ತಡೆದಿರಿಸಿಕೊಳ್ಳಬೇಕು ಮತ್ತು ಅಲ್ಲಾಹನು ಅವರ ಗರ್ಭಾಶಯದೊಳಗೆ ಸೃಷ್ಟಿಸಿರುವುದನ್ನು ಬಚ್ಚಿಡುವುದು ಅವರಿಗೆ ಧರ್ಮಬದ್ಧವಲ್ಲ. ಅವರು ಅಲ್ಲಾಹ್ ಮತ್ತು ನಿರ್ಣಾಯಕ ದಿನದ ಮೇಲೆ ವಿಶ್ವಾಸವಿರಿಸುವವರಾಗಿದ್ದರೆ ಹಾಗೆ ಎಂದಿಗೂ ಮಾಡಬಾರದು. ಅವರ ಪತಿಯಂದಿರು ಸಂಬಂಧವನ್ನು ಸುಗಮ ಗೊಳಿಸಿಕೊಳ್ಳಲು ದ್ಯುಕ್ತರಾಗಿದ್ದರೆ, ಈ 'ಇದ್ದತ್'ನ ಕಾಲಾವಧಿ ಯಲ್ಲಿ ಅವರನ್ನು ಪುನಃ ತಮ್ಮ ಪತ್ನಿತ್ವಕ್ಕೆ ಮರಳಿಸಿಕೊಳ್ಳಲು ಹಕ್ಕುಳ್ಳವರಾಗಿರುತ್ತಾರೆ." (ಅಲ್‌ಬಕರಃ : 228)

ಇದರ ಜೊತೆಗೇ ಅವರನ್ನು ಈ ಅವಧಿಯಲ್ಲಿ ಮನೆಯಲ್ಲೇ ಇರಿಸಬೇಕೆಂಬ ಆಜ್ಞೆಯೂ ಇದೆ. ಒಂದೇ ಕಡೆ ವಾಸಿಸುವುದರಿಂದ ಸಂಬಂಧ ಸುಧಾರಣೆಯ ಯಾವುದಾದರೂ ಅವಕಾಶ ಒದಗಿ ಬರಲೂ ಸಾಕೆಂಬುದೇ ಈ ಆಜ್ಞೆಯ ಹಿಂದಿರುವ ಆಶಯವಾಗಿದೆ.

"ಸಂದೇಶವಾಹಕರೇ, ನೀವು ಸ್ತ್ರೀಯರಿಗೆ ತಲಾಕ್ ಕೊಡುವಾಗ ಅವರಿಗೆ ಅವರ ಇದ್ದತ್‌ಗಾಗಿ ತಲಾಕ್ ಕೊಡಿರಿ. ಮತ್ತು ಇದ್ದತಿನ ಕಾಲಾವಧಿಯನ್ನು ಸರಿಯಾಗಿ ಎಣಿಸಿರಿ ಮತ್ತು ನಿಮ್ಮ ಪ್ರಭುವಾದ ಅಲ್ಲಾಹನನ್ನು ಭಯಪಡಿರಿ. (ಇದ್ದತಿನ ಕಾಲಾವಧಿಯಲ್ಲಿ) ಅವರು ಸ್ಪಷ್ಟವಾದ ಅಶ್ಲೀಲ ಕಾರ್ಯವೆಸಗದಿರುವಾಗ ನೀವು ಅವರನ್ನು ಅವರ ಮನೆಗಳಿಂದ ಹೊರ ಹಾಕಬಾರದು ಮತ್ತು ಅವರಾಗಿಯೂ ಹೊರಟು ಹೋಗಬಾರದು. ಅಲ್ಲಾಹನು ನಿಶ್ಚಯಿಸಿದ ಮೇರೆಗಳಿವು. ಅಲ್ಲಾಹನ ಮೇರೆಗಳನ್ನು ಮೀರುವವನು ತನ್ನ ಮೇಲೆ ತಾನೇ ಅಕ್ರಮ ವೆಸಗುವನು. ಪ್ರಾಯಶಃ ಇದಾದ ಬಳಿಕ ಅಲ್ಲಾಹನು (ಹೊಂದಾಣಿಕೆಯ) ಯಾವು ದಾದರೂ ದಾರಿಯನ್ನು ಉಂಟು ಮಾಡಲೂಬಹುದು- ನಿಮಗೆ ಅರಿಯದು."

(ಅತ್ತಲಾಕ್ : 1-2)

ಇದಲ್ಲದೆ ಆರ್ತವದ ಕಾಲದಲ್ಲಿ ತಲಾಕ್ ನೀಡುವುದನ್ನು ನಿಷೇಧಿಸಲಾಗಿದೆ. ಶುದ್ಧವಾಗಿರುವ ಕಾಲದಲ್ಲಿ ಮಾತ್ರ ತಲಾಕ್ ನೀಡಬೇಕೆಂದು ಆದೇಶಿಸಲಾಗಿದೆ. ಈ ನಿಯಮದ ಹಿಂದೆ ಎರಡು ಕಾರಣಗಳಿವೆ.

1. ಆರ್ತವದಲ್ಲಿ ಸ್ತ್ರೀಯರು ಸ್ವಲ್ಪ ಸಿಡುಕು ಸ್ವಭಾವದವರಾಗಿರುತ್ತಾರೆ. ಅವರಿಂದ ಸ್ವತಃ ಅವರೇ ಸಾಮಾನ್ಯ ದಿನಗಳಲ್ಲಿ ಇಷ್ಟಪಡದ ಕೆಲವು ಪ್ರಮಾದಗಳು ಈ ಕಾಲದಲ್ಲಿ ಸಂಭವಿಸುತ್ತವೆ.

---

ಅವಕಾಶವಿರುವುದು. ಆದರೆ ಮೂರನೆ ಬಾರಿಯೂ ತಲಾಕ್ ನೀಡಿ ಬಿಟ್ಟರೆ ಅದು 'ತಲಾಕ್ ಮುಗಲ್ಲಝ್' ಎಂದು ಪರಿಗಣಿಸಲ್ಪಡುತ್ತದೆ. ಆ ಬಳಿಕ ಮಹಿಳೆ ಇನ್ನೊಂದು ಮದುವೆಯಾಗಿ ಆ ಪತಿಯು ಸ್ವಇಚ್ಛೆಯಿಂದ ಆಕೆಯನ್ನು ವಿಚ್ಛೇದನ ಮಾಡುವವರೆಗೆ ಪ್ರಥಮ ಪತಿಗೆ ಆಕೆಯೊಂದಿಗೆ ಮರು ಮದುವೆಯ ಅವಕಾಶವಿಲ್ಲ. ಜನರು ಸಾಮಾನ್ಯವಾಗಿ ಈ ನಿಬಂಧನೆಯ ಬಗ್ಗೆ ಅಜ್ಞರಾಗಿರುವುದು ಬಹಳ ಖೇದಕರ ವಿಷಯ. ತಲಾಕ್ ನೀಡುವ ಸಂದರ್ಭ ಬಂದಾಗ ಒಮ್ಮೆಲೇ ಮೂರು ತಲಾಕ್ ಹೇಳಿ ಬಿಡುವರು ಮತ್ತೆ ಪಶ್ಚಾತ್ತಾಪ ಪಟ್ಟು ಅದರ ಪರಿಹಾರೋಪಾಯಕ್ಕಾಗಿ ಧರ್ಮ ಪಂಡಿತರಿಗೆ ದುಂಬಾಲು ಬೀಳುವರು.

ಇದೊಂದು ಆರೋಗ್ಯ ನಿಯಮ. ಆದ್ದರಿಂದ ಆರ್ತವ ಕಾಲದಲ್ಲಿ ಪತಿ-ಪತ್ನಿಯರ ಮಧ್ಯೆ ಸಂಭವಿಸಿದ ವೈಮನಸ್ಯಕ್ಕಾಗಿ ತಲಾಕ್ ನೀಡಬಾರದೆಂದು ಅದೇಶಿಸಲಾಗಿದೆ.

2. ಆರ್ತವ ಕಾಲದಲ್ಲಿ ಪತಿ ಪತ್ನಿಯರ ನಡುವೆ ಪ್ರಮುಖ ಆಕರ್ಷಣೆಯಾಗಿರುವ ಹಾಗೂ ಪರಸ್ಪರ ಅವಲಂಬನೆಯ ಸಾಧನವಾಗಿರುವ ದೈಹಿಕ ಸಂಪರ್ಕ ಏರ್ಪಡುವುದಿಲ್ಲ. ಆದ್ದರಿಂದ ಈ ಅವಧಿಯಲ್ಲಿ ಅವರ ಮಧ್ಯೆ ವೈಮನಸ್ಯ ಉಂಟಾದರೆ ಆಶ್ಚರ್ಯವಿಲ್ಲ. ಆರ್ತವ ಮುಗಿದ ಬಳಿಕ ಅವರು ಪರಸ್ಪರ ಆಕರ್ಷಿತರಾಗಿ ಆ ವೈಮನಸ್ಯವನ್ನು ಮರೆತು ಬಿಡುವ ಸಾಧ್ಯತೆಯೇ ಹೆಚ್ಚು.

ಈ ಕಾರಣಗಳಿಗಾಗಿಯೇ ಪ್ರವಾದಿ(ಸ) ಆರ್ತವ ಕಾಲದಲ್ಲಿ ಪತ್ನಿಗೆ ತಲಾಕ್ ನೀಡಕೂಡದೆಂದು ಆಜ್ಞಾಪಿಸಿರುವರು. ಒಂದು ಹದೀಸ್‌ನಲ್ಲಿ ಈ ರೀತಿ ವರದಿಯಾಗಿದೆ.

ಹ. ಅಬ್ದುಲ್ಲಾ ಬಿನ್ ಉಮರ್(ರ) ತಮ್ಮ ಪತ್ನಿಗೆ, ಆರ್ತವ ಕಾಲದಲ್ಲಿ ತಲಾಕ್ ನೀಡಿದರು. ಹ. ಉಮರ್(ರ) ಈ ವಿಷಯವನ್ನು ಪ್ರವಾದಿವರ್ಯ(ಸ)ರಲ್ಲಿ ನಿವೇದಿಸಿದರು. ಪ್ರವಾದಿ(ಸ) ಇದನ್ನು ಕೇಳಿ ಕ್ರುದ್ಧರಾದರು ಮತ್ತು ಅವರಿಗೆ ಸಂಬಂಧ ಪುನಃ ಸ್ಥಾಪಿಸಬೇಕೆಂದು ಮತ್ತು ಆರ್ತವದಿಂದ ಶುದ್ಧವಾದ ಬಳಿಕ ತಲಾಕ್ ನೀಡಬಹುದೆಂದು ಆದೇಶಿಸಿರೆಂದು ಹೇಳಿದರು.

ಇನ್ನೊಂದು ಹದೀಸ್‌ನಲ್ಲಿ ಈ ರೀತಿ ಇದೆ. ಪ್ರವಾದಿವರ್ಯರು(ಸ) ಈ ಕೃತ್ಯಕ್ಕಾಗಿ ಹ. ಇಬ್ನು ಉಮರ್‌ರನ್ನು- ಗದರಿಸಿದರು ಮತ್ತು ತಲಾಕ್ ನೀಡುವ ಕ್ರಮವನ್ನು ಈ ರೀತಿ ಕಲಿಸಿದರು:

'ಇಬ್ನು ಉಮರ್! ನೀವು ತಪ್ಪು ಕ್ರಮ ಅನುಸರಿಸಿದಿರಿ. ಸರಿಯಾದ ಕ್ರಮ ಈ ರೀತಿ ಇದೆ. ಆರ್ತವದಿಂದ ಶುದ್ಧವಾಗುವ ತನಕ ಕಾಯಬೇಕು ಮತ್ತು ಶುದ್ಧಿಯ ಕಾಲದಲ್ಲಿ ಒಂದು ತಲಾಕ್ ನೀಡಬೇಕು. ಇನ್ನೊಂದು ಆರ್ತವದ ಬಳಿಕ ಶುದ್ಧಿಯ ಕಾಲದಲ್ಲಿ ಇನ್ನೊಂದು ತಲಾಕ್ ನೀಡಬೇಕು ಮತ್ತು ಮೂರನೇ ಸಲ ಆಕೆ ಶುದ್ಧಳಾದಾಗ ಒಂದೋ ಆಕೆಯನ್ನು ತೊರೆಯಬೇಕು ಇಲ್ಲವೇ ಆಕೆಯನ್ನು ತಡೆದಿರಿಸಿಕೊಳ್ಳಬೇಕು.'

ಹ. ಇಬ್ನು ಉಮರ್(ರ) ಕೇಳಿದರು. ಪ್ರವಾದಿವರ್ಯರೇ! ನಾನೊಂದು ವೇಳೆ ಮೂರು ತಲಾಕ್ ನೀಡಿದ್ದರೆ ನನಗೆ ಆಕೆಯೊಂದಿಗೆ ಸಂಬಂಧ ಪುನಃ ಸ್ಥಾಪಿಸುವ ಹಕ್ಕು ಇತ್ತೇ?

ಪ್ರವಾದಿ(ಸ) ಹೇಳಿದರು 'ಇಲ್ಲ. ಆಕೆ ವಿಚ್ಛೇದಿತಳಾಗುತ್ತಿದ್ದಳು ಮತ್ತು ನೀನು ಪಾಪಿಯಾಗುತ್ತಿದ್ದೆ.'

ಇದರಿಂದ ಮೂರು ತಲಾಕ್ ಒಮ್ಮೆಲೇ ನೀಡುವುದು ಅಪರಾಧವೆಂದು ತಿಳಿದು ಬರುತ್ತದೆ. ಈ ರೀತಿ ತಲಾಕ್ ನೀಡುವಿಕೆ ಇಸ್ಲಾಮಿನ ಮೂಲ ತತ್ವಕ್ಕೇ ವಿರುದ್ಧವಾಗಿದೆ. ಇದರಿಂದ ಅಲ್ಲಾಹನು ಸೂರಃ ತಲಾಕ್‌ನಲ್ಲಿ ನಿಶ್ಚಯಿಸಿರುವಂತಹ ಮೇರೆಗಳ ಉಲ್ಲಂಘನೆ ಮಾಡಿದಂತಾಗುತ್ತದೆ.* ಹ. ಉಮರ್ ಬಿನ್ ಖತ್ತಾಬ್(ರ)ರವರ ಕಾಲದಲ್ಲಿ, ಏಕಕಾಲದಲ್ಲಿ

* ಈ ಹಿಂದೆ ವಿವರಿಸಿರುವಂತೆ ಪತಿ-ಪತ್ನಿಯರ ಸಂಬಂಧವು ಸಾಧ್ಯವಾದಷ್ಟು ಸುದೃಢವಾಗ ಬೇಕೆಂಬುದು ಶರೀಅತ್‌ನ ಉದ್ದೇಶ. ಒಂದು ವೇಳೆ ಅದನ್ನು ಮುರಿಯಬೇಕಾಗಿ ಬಂದರೂ ಸುಗಮ ಸಂಬಂಧ ಪುನಃ ಸ್ಥಾಪನೆಯ ಎಲ್ಲ ಪ್ರಯತ್ನಗಳೂ ವಿಫಲವಾದಾಗ ಮಾತ್ರ. ಆದ್ದರಿಂದ ತಲಾಕ್ ನೀಡುವವನು ಬಹಳ ಗಹನವಾಗಿ ಯೋಚಿಸಿ ತಲಾಕ್ ನೀಡಬೇಕೆಂದು ಶರೀಅತ್ ಬಯಸುತ್ತದೆ. ತಲಾಕ್ ನೀಡಿದ ಬಳಿಕವೂ ಮೂರು ತಿಂಗಳ ತನಕ ಸಂಬಂಧ ಸುಧಾರಣೆಯ ದ್ವಾರವನ್ನು ತೆರೆದಿಡಬೇಕೆಂದೂ ಅದು ಬಯಸುತ್ತದೆ. ಆದರೆ ಒಂದೇ ಬಾರಿಗೆ ಮೂರು ತಲಾಕ್ ನೀಡುವವನು ಈ ಎಲ್ಲ ಉದ್ದೇಶಗಳನ್ನು ಒಮ್ಮೆಗೇ ಮಣ್ಣುಗೂಡಿಸುತ್ತಾನೆ.

ಮೂರು ತಲಾಕ್ ನೀಡಿದವನನ್ನು ಅವರ ಮುಂದೆ ತಂದಾಗ ಅವರು ಅವನಿಗೆ ಛಡಿ ಏಟು ಬಾರಿಸುತ್ತಿದ್ದರು ಮತ್ತು ಆ ಬಳಿಕ ಪತಿ-ಪತ್ನಿಯರನ್ನು ಬೇರ್ಪಡಿಸುತ್ತಿದ್ದರು. ಒಮ್ಮೆ ಹ. ಇಬ್ನು ಅಬ್ಬಾಸ್(ರ)ರವರಲ್ಲಿ 'ಒಬ್ಬನು ಒಮ್ಮೆಲೇ ಮೂರು ತಲಾಕ್‌ಗಳನ್ನು ಹೇಳಿದರೆ ಅದರ ನಿಯಮವೇನು?' ಎಂದು ವಿಚಾರಿಸಲಾಯಿತು. ಅಬ್ಬಾಸ್(ರ) ಹೇಳಿದರು:' ಆತನು ಅಲ್ಲಾಹನ ಆಜ್ಞೋಲ್ಲಂಘನೆ ಮಾಡಿದಂತಾಯಿತು ಮತ್ತು ಆತನ ಪತ್ನಿ ಆತನಿಂದ ಬೇರ್ಪಟ್ಟಳು.'
ಹ. ಅಲೀ(ರ) ಹೀಗೆ ಹೇಳಿರುವರು:

ತಲಾಕ್ ನೀಡುವಾಗ ಶರೀಅತ್ ವಿಧಿಸಿದ ನಿಯಮಗಳನ್ನು ಪಾಲಿಸಿದರೆ ಆಗ ಯಾರಿಗೂ ತನ್ನ ಹೆಂಡತಿ ಬೇರ್ಪಟ್ಟ ಬಗ್ಗೆ ಲಜ್ಜಿತನಾಗುವ ಅವಕಾಶವಿರಲಾರದು.

ತಲಾಕ್‌ಗೆ ಇಷ್ಟೆಲ್ಲಾ ಅಡೆತಡೆಗಳನ್ನು ನಿರ್ಮಿಸಿದ ಬಳಿಕ ಕೊನೆಯ ತಡೆ ಎಂಬ ನೆಲೆಯಲ್ಲಿ'ತಲಾಕ್ ಮುಗಲ್ಲಿಝ್'* ನೀಡುವವನು ಆ ಮಹಿಳೆಯೊಂದಿಗೆ ಮತ್ತೆ ಮದುವೆಯಾಗುವಂತಿಲ್ಲವೆಂಬ ಕಠಿಣ ನಿಯಮವನ್ನೂ ವಿಧಿಸಲಾಗಿದೆ. ಆಕೆಯನ್ನು ಇನ್ನೊಬ್ಬನು ಮದುವೆಯಾಗಿ ಆಸ್ವದಿಸಿ ತನ್ನಿಷ್ಟದಂತೆ ಆಕೆಯನ್ನು ತೊರೆದಾಗ ಮಾತ್ರ ಆಕೆ ಒಪ್ಪಿದರೆ ಪುನರ್ವಿವಾಹ ಆಗಬಹುದು.

**"(ಪತಿಯು ಎರಡು ಬಾರಿ ತಲಾಕ್ ಕೊಟ್ಟ ಬಳಿಕ ಮೂರನೇ ಬಾರಿಯೂ) ತಲಾಕ್ ಕೊಟ್ಟು ಬಿಟ್ಟರೆ ಆ ಸ್ತ್ರೀಯ ನಿಕಾಹ್ ಇನ್ನೊಬ್ಬನೊಂದಿಗೆ ಆಗಿ ಅವನು ತಲಾಕ್ ಕೊಡುವ ಹೊರತು ಅವಳು ಪುನಃ ಅವನಿಗೆ (ಮೊದಲಿನ ಪತಿಗೆ) ಹಲಾಲ್ ಆಗಲಾರಳು..."**
**(ಅಲ್‌ಬಕರಃ : 230)**

ಇದು ಎಷ್ಟೊಂದು ಕಠಿಣ ನಿಯಮವೆಂದರೆ ಈ ನಿಯಮದಿಂದಾಗಿ ಓರ್ವ ಪತಿಯು ತನ್ನಪತ್ನಿಯನ್ನು ವಿಚ್ಛೇದಿಸುವ ಮೊದಲು ನೂರು ಬಾರಿ ಯೋಚಿಸುವನು. ಆಕೆಯೊಂದಿಗೆ ಜೀವನ ಸಾಗಿಸಲು ಇನ್ನು ಸಾಧ್ಯವೇ ಇಲ್ಲ ಎಂಬ ಖಚಿತ, ಅಂತಿಮ ತೀರ್ಮಾನ ಕೈಗೊಂಡ ಬಳಿಕ ಮಾತ್ರ ಅವನು ಆಕೆಗೆ ಮೂರು ತಲಾಕ್ ನೀಡುವನು.

ಈ ನಿಯಮದಿಂದ ಪಾರಾಗಲು ಕೆಲವರು ಒಂದು ವಾಮ ಮಾರ್ಗವನ್ನು ಕಂಡು ಹಿಡಿದಿರುವರು. ತಾವು ಮೂರು ತಲಾಕ್ ನೀಡಿದ ಮಹಿಳೆಯೊಂದಿಗೆ ಮರುವಿವಾಹ ಆಗಬೇಕೆಂದಿದ್ದರೆ ಒಬ್ಬನನ್ನು ಆಕೆ ವಿವಾಹವಾಗುವಂತೆ ಮಾಡಿ ಅವರು ಪರಸ್ಪರ ಸಂಸರ್ಗದಲ್ಲಿ ಏರ್ಪಡುವುದಕ್ಕಿಂತ ಮುಂಚಿತವಾಗಿಯೇ ಆತನಿಗೇನಾದರೂ ನೀಡಿ ಆತನಿಂದ ಆಕೆಗೆ ತಲಾಕ್ ಕೊಡಿಸುವುದೇ ಆ ವಾಮ ಮಾರ್ಗ. ಆದರೆ ಒಬ್ಬ ಹೀಗೆ ಕೇವಲ ನಾಮಮಾತ್ರಕ್ಕೆ ವಿವಾಹವಾದರೆ ಸಾಲದು. ವಿಚ್ಛೇದಿತ ಹೆಣ್ಣನ್ನು ವಿವಾಹವಾದ ನಂತರ ಆತನು ಆಕೆಯೊಂದಿಗೆ ಸಂಸರ್ಗ ನಡೆಸುವ ತನಕವೂ ಆಕೆ ತನ್ನ ಪ್ರಥಮ ಪತಿಯ ಪಾಲಿಗೆ ಧರ್ಮಬದ್ಧಳಾಗುವುದಿಲ್ಲ ಎಂದು ಪ್ರವಾದಿವರ್ಯರು(ಸ) ಸ್ಪಷ್ಟವಾಗಿ ತಿಳಿಸಿರುವರು.

---

* ಅರ್ಥಾತ್ ಮೂರು ತಲಾಕ್, ಆ ಬಳಿಕ ಆಕೆ ಅವನನ್ನು ಮದುವೆಯಾಗುವಂತಿಲ್ಲ. ಆಕೆಗೆ ಇನ್ನೊಬ್ಬನೊಂದಿಗೆ ಮದುವೆಯಾಗಿ ಅವನು ತನ್ನಿಷ್ಟದಂತೆ ಆಕೆಯನ್ನು ವಿಚ್ಛೇದಿಸಿದರೆ ಆ ಬಳಿಕ ಮಾತ್ರ ಆಕೆ ಇವನನ್ನು ಮರುಮದುವೆಯಾಗಬಹುದು.

ಇನ್ನು ಕೇವಲ ತನ್ನ ವಿಚ್ಛೇದಿತ ಪತ್ನಿಯನ್ನು ಪುನಃ ವಿವಾಹವಾಗುವ ಸಲುವಾಗಿಯೇ ಯಾರದಾದರೂ ಜೊತೆ ಆಕೆಯ ವಿವಾಹ ಮಾಡಿಸುವನೋ ಮತ್ತು ಈ ಉದ್ದೇಶದಿಂದ ಯಾರು ಆಕೆಯನ್ನು ಮದುವೆಯಾಗುವನೋ ಅವರಿಬ್ಬರನ್ನೂ ಪ್ರವಾದಿ(ಸ) ಶಪಿಸಿರುವರು. ಅಂಥವನನ್ನು ಪ್ರವಾದಿ(ಸ) "ಬಾಡಿಗೆಯ ಗೂಳಿ" ಎಂದು ಕರೆದಿರುವರು. ಇಂಥ ನಿಕಾಹ್ ಮತ್ತು ವ್ಯಭಿಚಾರದಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಇಂಥ ಕೆಟ್ಟ, ದುಷ್ಟ, ಅಧಾರ್ಮಿಕ ಮತ್ತು ನಾಚಿಕೆಗೇಡಿನ ಕಾರ್ಯದ ಪರವಾಗಿ ವಿಧಿ ನೀಡುವ ಧರ್ಮ ಪಂಡಿತರ ಬಗ್ಗೆಯೇ ನಿಜವಾಗಿ ಆಶ್ಚರ್ಯವಾಗುತ್ತದೆ.

## ಖುಲಾ

ತನಗಿಷ್ಟವಿಲ್ಲದ ಹಾಗೂ ಯಾವ ರೀತಿಯಿಂದಲೂ ತನಗೆ ಸಹಬಾಳ್ವೆ ನಡೆಸಲು ಸಾಧ್ಯವಿಲ್ಲದ ಸ್ತ್ರೀಯರನ್ನು ತೊರೆಯಲು ಪುರುಷನಿಗೆ ಇಸ್ಲಾಮೀ ಕಾನೂನಿನಲ್ಲಿ 'ತಲಾಕ್'ನ ಹಕ್ಕು ನೀಡಿರುವಂತೆಯೇ ಸ್ತ್ರೀಗೂ ತನಗೆ ಇಷ್ಟವಿಲ್ಲದ ಮತ್ತು ಯಾವ ರೀತಿಯಿಂದಲೂ ತಾನು ಸಹಬಾಳ್ವೆ ನಡೆಸಲು ಸಾಧ್ಯವಿಲ್ಲದ ಪುರುಷನಿಂದ ಬೇರ್ಪಡಲು 'ಖುಲಾ'ದ ಹಕ್ಕು ನೀಡಲಾಗಿದೆ.

ಈ ವಿಷಯದಲ್ಲಿ ಶರೀಅತ್‌ನ ನಿಯಮಗಳಿಗೆ ಎರಡು ಮುಖಗಳಿವೆ. ಒಂದನೆಯದು ನೈತಿಕ ಮುಖ ಎರಡನೆಯದು ಕಾನೂನಿನ ಮುಖ.

ನೈತಿಕ ದೃಷ್ಟಿಕೋನದಂತೆ ಪುರುಷನಾಗಲೀ ಸ್ತ್ರೀಯಾಗಲೀ ತಲಾಕ್ ಅಥವಾ ಖುಲಾದ ಹಕ್ಕನ್ನು ಕೇವಲ ಒಂದು ಕೊನೆಯ ಅಸ್ತ್ರವಾಗಿ ಮಾತ್ರ ಬಳಸಬೇಕು. ಕೇವಲ ತಮ್ಮ ದೇಹೇಚ್ಛೆಗಳ ಪೂರ್ತೀಕರಣಕ್ಕಾಗಿ ತಲಾಕ್ ಮತ್ತು ಖುಲಾವನ್ನು ಒಂದು ಆಟ ವಿನೋದವಾಗಿ ಮಾರ್ಪಡಿಸಬಾರದು. ಆದ್ದರಿಂದಲೇ ಈ ಕುರಿತು ಪ್ರವಾದಿ(ಸ) ಈ ರೀತಿ ಹೇಳಿರುವುದಾಗಿ ವರದಿಯಾಗಿದೆ:

**ಅಲ್ಲಾಹನು ರುಚಿ ನೋಡುವ ಹವ್ಯಾಸವುಳ್ಳ ಪುರುಷರನ್ನು ಮತ್ತು ಸ್ತ್ರೀಯರನ್ನು ಮೆಚ್ಚುವುದಿಲ್ಲ. (ಹದೀಸ್)**

**ರಸಾಸ್ವಾದನೆ ಮಾಡುವ ಮತ್ತು ಅಧಿಕವಾಗಿ ತಲಾಕ್ ನೀಡುವವರ ಮೇಲೆ ಅಲ್ಲಾಹನ ಶಾಪವಿದೆ. (ಹದೀಸ್)**

**ತನ್ನ ಗಂಡನ ಯಾವುದೇ ಅತಿಕ್ರಮ ಇಲ್ಲದೆ ಆತನಿಂದ ಖುಲಾ ಪಡೆಯುವ ಸ್ತ್ರೀಯ ಮೇಲೆ ಅಲ್ಲಾಹನ, ಆತನ ಮಲಕ್‌ಗಳ (ದೇವಚರರು) ಮತ್ತು ಸಮಸ್ತ ಜನರ ಶಾಪವಿದೆ. (ಹದೀಸ್)**

**ಖುಲಾವನ್ನು ಆಟ ವಿನೋದವಾಗಿ ಮಾರ್ಪಡಿಸುವವರು ಕಪಟ ವಿಶ್ವಾಸಿನಿಯರಾಗಿರುವರು. (ಹದೀಸ್)**

ಆದರೆ ಜನರ ವೈಯಕ್ತಿಕ ಹಕ್ಕುಗಳನ್ನು ನಿರ್ಣಯಿಸುವ ಹೊಣೆ ಹೊತ್ತ ಕಾನೂನು ಈ ನೈತಿಕ ನಿಯಮಗಳ ಬಗ್ಗೆ ಚರ್ಚಿಸುವುದಿಲ್ಲ. ಅದು ಪುರುಷನಿಗೆ ಪತಿಯೆಂಬ ನೆಲೆಯಲ್ಲಿ ತಲಾಕ್‌ನ ಹಕ್ಕು ನೀಡಿರುವಂತೆ ಸ್ತ್ರೀಗೆ ಪತ್ನಿಯೆಂಬ ನೆಲೆಯಲ್ಲಿ ಖುಲಾದ ಹಕ್ಕು ನೀಡುತ್ತದೆ. ಅಗತ್ಯ

ಬಿದ್ದಾಗ ವಿವಾಹ ಬಂಧನದಿಂದ ವಿಮೋಚನೆ ಪಡೆಯಲು ಅವರಿಬ್ಬರಿಗೂ ಅವಕಾಶವಿರಬೇಕು ಮತ್ತು ವಿವಾಹದ ಉದ್ದೇಶವು ಪೂರ್ತಿಯಾಗದಿದ್ದಾಗ ಹಾಗೂ ವಿವಾಹ ಬಂಧನವು ಒಂದು ವಿಪತ್ತಾಗಿ ಮಾರ್ಪಟ್ಟಾಗ ಕೇವಲ ವಿಮೋಚನೆಯ ದಾರಿ ಲಭ್ಯವಿಲ್ಲವೆಂಬ ಕಾರಣದಿಂದ ಪುರುಷನಾಗಲೀ ಸ್ತ್ರೀಯಾಗಲೀ ಪರಸ್ಪರ ದ್ವೇಷ ತುಂಬಿದ ವಾತಾವರಣದಲ್ಲಿ ಅನಿವಾರ್ಯವಾಗಿ ಸಹಬಾಳ್ವೆ ನಡೆಸಲು ನಿರ್ಬಂಧಿತರಾಗಬಾರದು ಎಂಬುದೇ ಈ ನಿಯಮದ ಉದ್ದೇಶವಾಗಿದೆ. ಇನ್ನು ಇಬ್ಬರ ಪೈಕಿ ಯಾರಾದರೂ ತಮ್ಮ ಹಕ್ಕನ್ನು ದುರುಪಯೋಗಪಡಿಸಬಹುದೆಂಬ ಪ್ರಶ್ನೆ. ಇದಕ್ಕೆ ಪರಿಹಾರವಾಗಿ ಕಾನೂನು ಸಾಧ್ಯವಿರುವಷ್ಟು ಮಟ್ಟಿಗೆ ಸೂಕ್ತ ನಿಯಂತ್ರಣಗಳನ್ನು ಹೇರಿದೆ. ಆದರೆ ಒಂದು ಹಕ್ಕಿನ ಸದುಪಯೋಗ ಅಥವಾ ದುರುಪಯೋಗವು ಬಹುಮಟ್ಟಿಗೆ, ಸ್ವತಃ ಅದನ್ನು ಹೊಂದಿರುವ ವ್ಯಕ್ತಿಯ ವಿವೇಚನಾ ಸಾಮರ್ಥ್ಯ, ಪ್ರಾಮಾಣಿಕತೆ ಮತ್ತು ದೇವ ಭಯ-ಭಕ್ತಿಯನ್ನು ಅವಲಂಬಿಸಿಕೊಂಡಿದೆ. ಆ ವ್ಯಕ್ತಿ ಕೇವಲ ಭೋಗಾಭಿಲಾಷಿಯೋ ಅಥವಾ ನಿಜಕ್ಕೂ ತನ್ನ ಹಕ್ಕನ್ನು ಬಳಸಿಕೊಳ್ಳುವ ಧರ್ಮಬದ್ಧ ಅಗತ್ಯ ಆ ವ್ಯಕ್ತಿಗೆ ಇದೆಯೋ ಎಂಬುದನ್ನು ನಿರ್ಣಯಿಸಲು ಆವನ ಮತ್ತು ದೇವನ ಹೊರತು ಬೇರಾರಿಗೂ ಸಾಧ್ಯವಿಲ್ಲ.

ಕಾನೂನು ಒಬ್ಬ ವ್ಯಕ್ತಿಗೆ ಅವನ(ಳ) ನೈಸರ್ಗಿಕ ಹಕ್ಕನ್ನು ನೀಡಿದ ಬಳಿಕ ಅದರ ದುರುಪಯೋಗವಾಗದಂತೆ ಕೆಲವು ನಿಬಂಧನೆಗಳನ್ನು ಮಾತ್ರ ಹೇರಬಲ್ಲುದು. ಈ ಮುಂಚೆ ತಲಾಕಿನ ಕುರಿತು ಚರ್ಚಿಸಿರುವಲ್ಲಿ ನೀವು ಕಂಡಿರುವಿರಿ. ಪುರುಷನಿಗೆ ಸ್ತ್ರೀಯಿಂದ ಬೇರ್ಪಡುವ ಹಕ್ಕು ನೀಡುವ ಜೊತೆಗೆ ಅದಕ್ಕೆ ಹಲವು ಅಡೆತಡೆಗಳನ್ನು ನಿರ್ಮಿಸಲಾಗಿದೆ. ಉದಾಹರಣೆಗಾಗಿ ಮಹ್‌ರ್ ರೂಪದಲ್ಲಿ ಎಷ್ಟೇ ದೊಡ್ಡ ಮೊತ್ತ ಕೊಟ್ಟಿದ್ದರೂ ಅದನ್ನು ಮರಳಿ ಪಡೆಯುವಂತಿಲ್ಲ. ಮಹಿಳೆಗೆ ಮುಟ್ಟಾಗಿರುವಾಗ ತಲಾಕ್ ನೀಡಬಾರದು. ಮೂರು ಶುದ್ಧ ಕಾಲದಲ್ಲಿ (ಆರ್ತವ ಅಲ್ಲದ ಕಾಲ) ಒಂದೊಂದಾಗಿ ಮೂರು ಬಾರಿ ತಲಾಕ್ ನೀಡಬೇಕು. ಇದ್ದತ್ ಅವಧಿಯಲ್ಲಿ ಸ್ತ್ರೀಯನ್ನು ತನ್ನ ಜೊತೆಗೇ ಇರಿಸಿಕೊಳ್ಳಬೇಕು. ಮೂರನೇ ತಲಾಕ್ ನೀಡಿದ ಬಳಿಕ ಇನ್ನೊಬ್ಬ ಪುರುಷನೊಂದಿಗೆ ವಿವಾಹವಾಗದೆ ಪುನಃ ಆತನು ಆಕೆಯನ್ನು ವಿವಾಹವಾಗುವಂತಿಲ್ಲ. ಇದೇ ರೀತಿ ಸ್ತ್ರೀಗೂ ಖುಲಾದ ಹಕ್ಕು ನೀಡುವ ಜೊತೆಗೆ ಕೆಲವು ಅಡೆತಡೆಗಳನ್ನು ಹೇರಲಾಗಿದೆ. ಅವುಗಳನ್ನೆಲ್ಲಾ ಪವಿತ್ರ ಕುರ್‌ಆನಿನ ಈ ಸಣ್ಣ ಸೂಕ್ತವು ಸಾರ ಸಂಪೂರ್ಣವಾಗಿ ವಿವರಿಸುತ್ತದೆ.

"ಪತ್ನಿಯರಿಗೆ ನೀವು ಕೊಟ್ಟಿರುವ ಯಾವೊಂದು ಸಾಧನವನ್ನೂ ಮರಳಿ ಪಡೆಯುವುದು ನಿಮಗೆ ಧರ್ಮಸಮ್ಮತವಲ್ಲ. ಅಲ್ಲಾಹನ ಮೇರೆಗಳನ್ನು ತಮಗೆ ಪಾಲಿಸಲು ಅಸಾಧ್ಯವಾಗಬಹುದೆಂದು ಈರ್ವರೂ ಭಯಪಡುವಾಗ ಹೊರತು. ಒಂದು ವೇಳೆ ದಂಪತಿಗಳು ಅಲ್ಲಾಹನ ಮೇರೆಗಳನ್ನು ಪಾಲಿಸಲಾರರೆಂದು ನಿಮಗೆ ಆಶಂಕೆಯಿದ್ದರೆ ಆಕೆಯೇನಾದರೂ ಪರಿಹಾರ ಕೊಟ್ಟು ವಿಮುಕ್ತಳಾಗುವುದರಲ್ಲಿ ಈರ್ವರದೂ ತಪ್ಪಿಲ್ಲ." (ಅಲ್‌ಬಕರಃ : 229)

ಈ ಆಯತ್‌ನಿಂದ ಈ ಕೆಳಗಿನ ವಿಧಿಗಳು ಸಾಬೀತಾಗುತ್ತವೆ.

1. ಖುಲಾ ಅಲ್ಲಾಹನ ಮೇರೆಯನ್ನು ಮೀರುವ ಭಯವಿದ್ದಾಗ ಮಾತ್ರ ಆಗಬೇಕು. 'ಈರ್ವರದ್ದೂ ತಪ್ಪಿಲ್ಲ' ಎಂಬ ಪದಗಳಿಂದ ತಿಳಿದು ಬರುವುದೇನೆಂದರೆ ಖುಲಾ ಎಂಬುದು

ತಲಾಕ್‌ನಂತೆಯೇ ಒಂದು ಕೆಟ್ಟ ವಸ್ತು. ಆದರೆ ಅಲ್ಲಾಹ್ ನಿಶ್ಚಯಿಸಿದ ಮೇರೆಗಳನ್ನು ಮೀರುವ ಭಯವಿದ್ದಾಗ ಖುಲಾ ಮಾಡುವುದರಲ್ಲಿ ಯಾವುದೇ ತಪ್ಪಿಲ್ಲ.

2. ಪುರುಷನು ತಲಾಕ್ ನೀಡಬಯಸಿದರೆ ಮಹರ್‌ನ ಮೊತ್ತದ ನಷ್ಟವನ್ನು ಅನುಭವಿಸಬೇಕಾಗುತ್ತದೆ. ಅದೇ ರೀತಿ ಸ್ತ್ರೀಯು ಖುಲಾ ಪಡೆಯ ಬಯಸಿದಾಗ ಆರ್ಥಿಕ ನಷ್ಟವನ್ನನುಭವಿಸಲು ಸಿದ್ಧಳಿರಬೇಕು. ಪುರುಷನು ಸ್ವತಃ ತಲಾಕ್ ನೀಡುವಾಗ ಆಕೆಗೆ ಈಗಾಗಲೇ ನೀಡಿರುವ ಮಹ್‌ರ್ ಮತ್ತಿತರ ವಸ್ತು ಒಡವೆಗಳಿಂದ ಒಂದು ಚಿಕ್ಕಾಸನ್ನೂ ವಾಪಾಸು ಪಡೆಯುವ ಅಧಿಕಾರ ಅವನಿಗಿಲ್ಲ. ಮಹಿಳೆ ಬೇರ್ಪಡ ಬಯಸಿದರೆ ತಾನು ತನ್ನ ಪತಿಯಿಂದ ಪಡೆದ ಎಲ್ಲಾ ವಸ್ತು ಒಡವೆಗಳನ್ನು ಅಥವಾ ಅವುಗಳ ಒಂದು ಪಾಲನ್ನು ಮರಳಿಸಿ ಬೇರ್ಪಡಬಹುದು.

3. ಹೀಗೆ ಪರಿಹಾರ ಕೊಟ್ಟು ಖುಲಾ ಪಡೆಯುವಾಗ ಪರಿಹಾರ ನೀಡುವ ನಿರ್ಧಾರವನ್ನು ಏಕಪಕ್ಷೀಯವಾಗಿ ಮಾಡಲು ಸಾಧ್ಯವಿಲ್ಲ. ಪರಿಹಾರ ಕೊಡುವಾಕೆಯಂತೆ ಪರಿಹಾರ ಪಡೆಯುವವನೂ ಅದಕ್ಕೆ ಒಪ್ಪಬೇಕು. ತಾತ್ಪರ್ಯವೇನೆಂದರೆ ಸ್ತ್ರೀಯು ತಾನು ಇಂತಿಷ್ಟು ಪರಿಹಾರ ನೀಡುವೆನೆಂದು ಹೇಳಿದ ಮಾತ್ರಕ್ಕೆ ತನ್ನಿಂತಾನೇ ಖುಲಾ ಆಗಿ ಬಿಡುವುದಿಲ್ಲ. ಪತಿಯು ಆಕೆ ನೀಡಿದ ಪರಿಹಾರದ ಕೊಡುಗೆಯನ್ನು ಸ್ವೀಕರಿಸಿ ಆಕೆಗೆ ತಲಾಕ್ ನೀಡಲು ಸಿದ್ಧನಾದಾಗ ಮಾತ್ರ ಅದು ಖುಲಾ ಆಗುತ್ತದೆ.

4. ಖುಲಾ ಆಗುವುದಕ್ಕೆ ಮಹಿಳೆಯು ತನ್ನ ಪೂರ್ತಿ ಮಹ್‌ರ್ ಅಥವಾ ಅದರ ಒಂದು ಭಾಗವನ್ನು ನೀಡಿ ಬೇರ್ಪಡುವ ಬಯಕೆ ಮುಂದಿಟ್ಟರೆ ಮತ್ತು ಪುರುಷನು ಅದನ್ನು ಸ್ವೀಕರಿಸಿ ತಲಾಕ್ ನೀಡಿದರೆ ಸಾಕಾಗುವುದು. 'ಪರಿಹಾರ ಕೊಟ್ಟು ವಿಮುಕ್ತಳಾಗುವುದು' ಎಂಬ ಪದದ ಬಳಕೆಯಿಂದ ಖುಲಾ ಇಬ್ಬರ ಸಮ್ಮತಿಯಿಂದ ಮಾತ್ರ ಪೂರ್ಣಗೊಳ್ಳುತ್ತದೆ ಎಂದು ವಿಧಿತವಾಗುತ್ತದೆ. ಖುಲಾ ಆಗಲು ನ್ಯಾಯಾಲಯದ ತೀರ್ಮಾನ ಆಗಬೇಕೆಂಬ ಶರತ್ತಿದೆ ಎನ್ನುವವರ ಅಭಿಪ್ರಾಯ ತಪ್ಪೆಂಬುದು ಇದರಿಂದ ವ್ಯಕ್ತವಾಗುತ್ತದೆ. ಯಾವ ವಿಷಯವು ಮನೆಯಲ್ಲೇ ಪರಿಹಾರವಾಗಬಲ್ಲುದೋ ಅದನ್ನು ಕೋರ್ಟು ಕಚೇರಿಗಳಿಗೆ ಕೊಂಡೊಯ್ಯುವುದನ್ನು ಇಸ್ಲಾಮ್ ಇಷ್ಟಪಡುವುದಿಲ್ಲ.

5. ಮಹಿಳೆ ಪರಿಹಾರ ನೀಡಿ ಪುರುಷನು ಅದನ್ನು ಸ್ವೀಕರಿಸದಿದ್ದರೆ ಮಹಿಳೆಗೆ ಕೋರ್ಟಿಗೆ ಹೋಗುವ ಹಕ್ಕಿದೆ. ಅದು ಈ ಸೂಕ್ತದ 'ಒಂದು ವೇಳೆ ದಂಪತಿಗಳು ಅಲ್ಲಾಹನ ಮೇರೆಗಳನ್ನು ಪಾಲಿಸಲಾರರೆಂದು ನಿಮಗೆ ಆಶಂಕೆಯಿದ್ದರೆ' ಎಂಬ ಪದಗಳಿಂದ ವ್ಯಕ್ತವಾಗುತ್ತದೆ. ಈ ಸೂಕ್ತದಲ್ಲಿ 'ನಿಮಗೆ ಆಶಂಕೆಯಿದ್ದರೆ' ಎಂಬುದರ ಅಭಿಸಂಬೋದನೆ ಮುಸಲ್ಮಾನರ ನಾಯಕತ್ವದ ಕಡೆಗೆ ಇದೆ. ಮುಸಲ್ಮಾನರ ನಾಯಕತ್ವದ ಪ್ರಥಮ ಹೊಣೆಗಾರಿಕೆಯು ಅಲ್ಲಾಹನ ಮೇರೆಗಳನ್ನು ರಕ್ಷಿಸುವುದಾಗಿದೆ. ಅಲ್ಲಾಹನು ನಿಶ್ಚಯಿಸಿದ ಮೇರೆಗಳು ಉಲ್ಲಂಘಿಸಲ್ಪಡುತ್ತಿವೆಯೆಂಬ ಆಶಂಕೆ ನಿಜವೆಂದು ಸಾಬೀತಾದಾಗ ಈ ಮೇರೆಗಳ ರಕ್ಷಣೆಗಾಗಿ ಮಹಿಳೆಗೆ ಅಲ್ಲಾಹನು ನೀಡಿರುವ ಹಕ್ಕನ್ನು ಆಕೆಗೆ ಕೊಡಿಸುವುದು ಮುಸ್ಲಿಮ್ ನಾಯಕತ್ವದ ಹೊಣೆಗಾರಿಕೆಯಾಗಿದೆ.

ಇವು ಕೇವಲ ಸಂಕ್ಷಿಪ್ತ ವಿಧಿಗಳು. ದೇವನ ಮೇರೆಗಳನ್ನು ಮೀರುವ ಸಾಧ್ಯತೆ ಇದೆಯೆಂದು

ನಿರ್ಧರಿಸುವುದು ಹೇಗೆ? ನ್ಯಾಯಸಮ್ಮತವಾಗಿ ಎಷ್ಟು ಪರಿಹಾರ ನೀಡಬೇಕು? ಸ್ತ್ರೀಯು ಪರಿಹಾರ ನೀಡಲು ಸಿದ್ಧಳಾಗಿ ಪುರುಷನು ಅದನ್ನು ಸ್ವೀಕರಿಸದೆ ಹೋದರೆ ನ್ಯಾಯಾಧೀಶರು ಯಾವ ಧೋರಣೆ ಅನುಸರಿಸಬೇಕು? ಈ ಸಮಸ್ಯೆಗಳ ವಿವರವಾದ ಪರಿಹಾರವು ನಮಗೆ, ಪ್ರವಾದಿವರ್ಯ(ಸ)ರು ಮತ್ತು ನಾಲ್ವರು ಖಲೀಫರುಗಳ ಕಾಲದಲ್ಲಿ ನಡೆದ ಮೊಕದ್ದಮೆಗಳ ವೃತ್ತಾಂತದಲ್ಲಿ ತಿಳಿದು ಬರುತ್ತದೆ.

## ಖುಲಾದ ಬಗ್ಗೆ ಐತಿಹಾಸಿಕ ತೀರ್ಪುಗಳು

ಹ. ಸಾಬಿತ್ ಬಿನ್ ಕೈಸ್‌ರಿಂದ ಅವರ ಪತ್ನಿಯರು ಖುಲಾ ಪಡೆದ ಪ್ರಸಂಗವು ಖುಲಾದ ಅತ್ಯಂತ ಸುಪ್ರಸಿದ್ಧ ಮೊಕದ್ದಮೆಯಾಗಿದೆ. ಈ ಮೊಕದ್ದಮೆಯ ವೃತ್ತಾಂತದ ವಿವಿಧ ತುಣುಕುಗಳು ಹದೀಸ್‌ಗಳಲ್ಲಿ ನಮಗೆ ದೊರಕುತ್ತದೆ. ಅವುಗಳನ್ನು ಕ್ರೋಢೀಕರಿಸಿ ನೋಡಿದರೆ ಸಾಬಿತ್(ರ)ರವರ ಇಬ್ಬರು ಪತ್ನಿಯರು ಅವರಿಂದ ಖುಲಾ ಪಡೆದಿದ್ದರೆಂದು ತಿಳಿದು ಬರುತ್ತದೆ. ಓರ್ವ ಪತ್ನಿಯ ಹೆಸರು ಜಮೀಲಾ ಬಿಂತಿ ಉಬೈ ಬಿನ್ ಸಲೂಲ್ (ಅಬ್ದುಲ್ಲಾ ಬಿನ್ ಉಬೈಯ ಸೋದರಿ)* ಅವರಿಗೆ ತಮ್ಮ ಪತಿಯ ರೂಪವೇ ಹಿಡಿಸುತ್ತಿರಲಿಲ್ಲ. ಅವರು'ಖುಲಾ' ಪಡೆಯುವ ಸಲುವಾಗಿ ಪ್ರವಾದಿ(ಸ) ಅವರ ಮೊರೆಹೊಕ್ಕರು. ಅವರು ದೂರು ನೀಡಿದ್ದು ಈ ಕೆಳಗಿನಂತಿತ್ತು:

'ಅಲ್ಲಾಹನ ಸಂದೇಶವಾಹಕರೇ! ನನ್ನ ಮತ್ತು ಅವರ ತಲೆಗಳನ್ನು ಯಾವ ವಸ್ತುವೂ ಎಂದೂ ಒಟ್ಟುಗೂಡಿಸಲಾಗದು. ನಾನು ನನ್ನ ಮುಸುಕನ್ನು ಸರಿಸಿ ನೋಡಿದಾಗ ಅವರು ಕೆಲವು ಮಂದಿಯೊಂದಿಗೆ ಬರುತ್ತಿದ್ದರು. ಅವರು ಆ ಜನರ ಪೈಕಿ ಅತ್ಯಧಿಕ ಕಪ್ಪಾಗಿದ್ದರು, ಅತ್ಯಧಿಕ ಕುಳ್ಳಗಾಗಿದ್ದರು ಮತ್ತು ಅತ್ಯಧಿಕ ಕುರೂಪಿಯಾಗಿದ್ದರು. (ಇಬ್ನು ಜರೀರ್)

'ಅಲ್ಲಾಹನಾಣೆ! ನಾನು ಧರ್ಮ ಮತ್ತು ಚಾರಿತ್ರ್ಯದ ಯಾವುದೇ ಕೊರತೆಯ ಕಾರಣ ಅವರನ್ನು ದ್ವೇಷಿಸುವುದಲ್ಲ. ನನಗೆ ಅವರ ರೂಪವೇ ಅಪ್ರಿಯವಾಗಿದೆ.' (ಇಬ್ನು ಜರೀರ್)

'ಅಲ್ಲಾಹನಾಣೆ! ನನಗೆ ಅಲ್ಲಾಹನ ಭಯವಿಲ್ಲದಿರುತ್ತಿದ್ದರೆ ಆತನು ನನ್ನ ಬಳಿ ಬಂದಾಗ ನಾನು ಆತನ ಮುಖಕ್ಕೆ ಉಗುಳಿಬಿಡುತ್ತಿದ್ದೆ.' (ಇಬ್ನು ಜರೀರ್)

'ಅಲ್ಲಾಹನ ಸಂದೇಶವಾಹಕರೇ! ನಾನು ಎಷ್ಟು ಸುಂದರಿಯಾಗಿರುವೆ ಎಂಬುದನ್ನು ತಾವು ಬಲ್ಲಿರಿ. ಸಾಬಿತ್ ಓರ್ವ ಕುರೂಪಿ ವ್ಯಕ್ತಿಯಾಗಿರುವರು.' (ಅಬ್ದುರ್ರಝ್ಝಾಕ್ ಫತಹುಲ್ ಬಾರಿಯಿಂದ ಉದ್ಧೃತ)

'ಆತನ ಧರ್ಮ ಮತ್ತು ಚಾರಿತ್ರ್ಯದ ಬಗ್ಗೆ ನನಗೇನೂ ಆಕ್ಷೇಪವಿಲ್ಲ. ಆದರೆ ನನಗೆ ಇಸ್ಲಾಮಿನಲ್ಲಿ ಕುಫ್ರ್‌ನ ಭಯವಿದೆ.**' (ಬುಖಾರಿ)

ಇದನ್ನು ಕೇಳಿ ಪ್ರವಾದಿವರ್ಯರು(ಸ) 'ನಿನಗೆ ಆತನು ನೀಡಿದ ತೋಟವನ್ನು

* ಕೆಲವರು ಝೈನಬ್ ಬಿಂತಿ ಅಬ್ದುಲ್ಲಾ ಬಿನ್ ಉಬೈ ಎಂದಿರುವರು. ಆದರೆ ಪ್ರಸಿದ್ಧವಿರುವುದು ಜಮೀಲಾ ಎಂಬ ಹೆಸರೇ ಆಗಿದೆ. ಆಕೆ ಅಬ್ದುಲ್ಲಾ ಬಿನ್ ಉಬೈಯ ಮಗಳಲ್ಲ, ಸೋದರಿಯಾಗಿದ್ದರು.

** 'ಇಸ್ಲಾಮ್‌ನಲ್ಲಿ ಕುಫ್ರ್‌ನ ಭಯ'ವೆಂದರೆ ಅರೋಚಕತೆ ಮತ್ತು ದ್ವೇಷದೊಂದಿಗೆ ನಾನು ಆತನ ಸಹವಾಸ ಮಾಡಿದರೆ ಆತನ ಆಜ್ಞೆಗಳನ್ನು ಪಾಲಿಸಲಾರೆ ಎಂಬ ಭಯ ನನಗಿದೆ. ಪತಿಯ ಅನುಸರಣೆ, ಅವನ ನಿಷ್ಠೆ

ಮರಳಿಸುವೆಯಾ?' ಎಂದು ವಿಚಾರಿಸಿದರು.

'ಹೌದು ಪ್ರವಾದಿವರ್ಯರೇ! ಮಾತ್ರವಲ್ಲ ಅವರು ಅದಕ್ಕಿಂತ ಹೆಚ್ಚು ಕೇಳಿದರೂ ನಾನು ಕೊಡಲು ಸಿದ್ಧ' ಆಕೆ ನಿವೇದಿಸಿಕೊಂಡರು.

ಪ್ರವಾದಿವರ್ಯರು; 'ಹೆಚ್ಚೇನೂ ಕೊಡಬೇಕಾಗಿಲ್ಲ. ಆದರೆ ಆತ ನೀಡಿದ ತೋಟವನ್ನು ಮರಳಿಸಿಬಿಡು' ಎಂದರು. ಬಳಿಕ ಸಾಬಿತ್‌ರವರಿಗೆ ಈ ರೀತಿ ಆಜ್ಞಾಪಿಸಿದರು: 'ಆಕೆ ನೀಡುವ ತೋಟವನ್ನು ಪಡೆದುಕೊಂಡು ಆಕೆಗೆ ಒಂದು ತಲಾಕ್ ನೀಡು'.

ಸಾಬಿತ್(ರ)ರವರ ಇನ್ನೋರ್ವ ಪತ್ನಿ ಹಬೀಬ ಬಿಂತು ಸಹ್ಲ್ ಅನ್ಸಾರಿಯಾ ಆಗಿದ್ದರು. ಅವರ ವೃತ್ತಾಂತವನ್ನು ಇಮಾಮ್ ಮಾಲಿಕ್ ಮತ್ತು ಅಬೂ ದಾವೂದ್(ರ) ಈ ರೀತಿ ವಿವರಿಸಿರುವರು:

ಒಂದು ದಿನ ಮುಂಜಾನೆ ಪ್ರವಾದಿ ಮುಹಮ್ಮದ್(ಸ) ತಮ್ಮ ಮನೆಯಿಂದ ಬೇಗ ಹೊರಟರು. ಅವರ ಮನೆಯ ಹೊರಗೆ ಹಬೀಬ(ರ) ನಿಂತಿದ್ದರು. 'ಏನು ಸಮಾಚಾರ?' ಎಂದು ಪ್ರವಾದಿವರ್ಯರು(ಸ) ವಿಚಾರಿಸಿದಾಗ 'ನನ್ನ ಮತ್ತು ಸಾಬಿತ್‌ರ ಮಧ್ಯೆ ಹೊಂದಾಣಿಕೆ ಸಾಧ್ಯವಿಲ್ಲ' ಎಂದರು. ಸಾಬಿತ್(ರ) ಬಂದಾಗ ಪ್ರವಾದಿವರ್ಯರು(ಸ) ಹೀಗೆಂದರು:

'ಈಕೆ ಹಬೀಬ ಬಿಂತು ಸಹ್ಲ್. ಅಲ್ಲಾಹನು ಇವಳಿಂದ ಹೇಳಿಸ ಬಯಸಿದೆಲ್ಲವನ್ನೂ ಈಕೆ ಹೇಳಿರುವಳು.'

ಹಬೀಬ ಹೇಳಿದರು, 'ಓ ಪ್ರವಾದಿವರ್ಯರೇ! ಸಾಬಿತ್‌ರವರು ನನಗೆ ನೀಡಿದ್ದೆಲ್ಲಾ ನನ್ನ ಬಳಿ ಇದೆ.'

ಪ್ರವಾದಿವರ್ಯರು(ಸ) ಸಾಬಿತ್‌ರಿಗೆ ಈ ರೀತಿ ಆಜ್ಞಾಪಿಸಿದರು. 'ಅದನ್ನು ಪಡೆದು ಆಕೆಯನ್ನು ತೊರೆದು ಬಿಡಿ.'

ಅಬೂದಾವೂದ್ ಮತ್ತು ಇಬ್ನು ಜರೀರ್(ರ) ಈ ಘಟನೆಯನ್ನು ಹ. ಆಯಿಶಾ(ರ) ರವರಿಂದ ಈ ರೀತಿ ವಿವರಿಸಿದ್ದಾರೆ: 'ಸಾಬಿತ್‌ರವರು ಹಬೀಬ(ರ)ರಿಗೆ ನೀಡಿದ ಹೊಡೆತದಿಂದ ಅವರ ಎಲುಬು ತುಂಡಾಗಿತ್ತು. ಹಬೀಬರವರು ಬಂದು ಪ್ರವಾದಿವರ್ಯರ(ಸ) ಬಳಿ ದೂರು ನೀಡಿದರು.'

ಪ್ರವಾದಿವರ್ಯರು(ಸ) ಸಾಬಿತ್(ರ)ರವರಿಗೆ ಹೀಗೆ ಆಜ್ಞಾಪಿಸಿದರು, 'ಆಕೆಯ ಸೊತ್ತಿನ ಒಂದು ಭಾಗವನ್ನು ಪಡೆದು ಆಕೆಯಿಂದ ಬೇರ್ಪಡಿರಿ.'

---

ಮತ್ತು ನನ್ನ ನೀತಿ ಚಾರಿತ್ರ್ಯದ ಪಾವಿತ್ರ್ಯವನ್ನು ರಕ್ಷಿಸಬೇಕಾದುದು ಅಲ್ಲಾಹನ ಮತ್ತು ಆತನ ಪ್ರವಾದಿಯ ಆಜ್ಞೆ. ಆದರೆ ನಾನವುಗಳನ್ನು ಪಾಲಿಸಲಾರೆನೆಂದು ಭಯಪಡುತ್ತೇನೆ. ಇದು ಓರ್ವ ಸತ್ಯವಿಶ್ವಾಸಿಯ ಭಾವನೆ. ಅವರು ದೇವ ಸೀಮೋಲ್ಲಂಘನೆಯನ್ನು ಕುಫ್ರ್ ಎಂದು ಬಗೆಯುತ್ತಾರೆ. ಆದರೆ ಇಂದಿನ ಮೌಲವಿಗಳಾದರೋ ನಮಾಝ್, ಉಪವಾಸವ್ರತ, ಹಜ್ಜ್ ಮತ್ತು ಝಕಾತ್‌ಗಳ ಪೈಕಿ ಯಾವುದನ್ನು ಪಾಲಿಸದಿದ್ದರೂ ಬಹಿರಂಗವಾಗಿ ದೇವಾಜ್ಞೋಲ್ಲಂಘನೆ ಮಾಡುತ್ತಲಿದ್ದರೂ ಅವನ ಸ್ಥಿತಿಯನ್ನು "ಈಮಾನ್"ನ ಸ್ಥಿತಿಯೆಂದೇ ಹೇಳುತ್ತಾರೆ, ಮಾತ್ರವಲ್ಲ ಅವರ ಸತ್ಯವಿಶ್ವಾಸದ ಬಗ್ಗೆ ಅವರಿಗೆ ಬಹಳ ಖಾತ್ರಿ ಇದ್ದಂತಿದೆ. ಅಂಥವರಿಗೆ ಈ ಮಂದಿ ಸ್ವರ್ಗದ ಸುವಾರ್ತೆಗಳನ್ನು ನೀಡುತ್ತಾರೆ, ಅವನ ಸ್ಥಿತಿಯನ್ನು ಸತ್ಯವಿಶ್ವಾಸಕ್ಕೆ ವಿರುದ್ಧವಾದ ಸ್ಥಿತಿ ಎಂದು ಹೇಳುವವರನ್ನು ಖಾರಿಜೀಗಳು ಎನ್ನುತ್ತಾರ!

ಆದರೆ ಇಬ್ನು ಮಾಜ(ರ)ರವರು ಉಲ್ಲೇಖ ಮಾಡಿರುವ ಹ. ಹಬೀಬ(ರ)ರ ಮಾತುಗಳಂತೆ ಹಬೀಬರಿಗೂ ಸಾಬಿತ್‌ರ ಬಗ್ಗೆ ಇದ್ದ ದೂರು ಹೊಡೆತದ್ದಾಗಿರದೆ ಕುರೂಪದ್ದೇ ಆಗಿತ್ತು. ಮೇಲೆ ವಿವರಿಸಿದ ಜಮೀಲರವರು ಹೇಳಿದ್ದ ನನಗೆ ದೇವನ ಭಯವಿಲ್ಲದಿರುತ್ತಿದ್ದರೆ ನಾನು ಆತನ ಮುಖಕ್ಕೆ ಉಗುಳಿ ಬಿಡುತ್ತಿದ್ದೆ! ಎಂಬ ಮಾತುಗಳನ್ನೇ ಅವರೂ ಹೇಳಿದ್ದರು.

ಹ. ಉಮರ್(ರ)ರವರ ಮುಂದೆ ಓರ್ವ ದಂಪತಿಗಳ ಮೊಕದ್ದಮೆ ಬಂತು ಹ. ಉಮರ್(ರ) ಮಹಿಳೆಗೆ ಪತಿಯ ಜೊತೆಯೇ ಇರುವಂತೆ ಉಪದೇಶಿಸಿದರು. ಆದರೆ ಆ ಮಹಿಳೆ ಅದನ್ನು ಸ್ವೀಕರಿಸಲಿಲ್ಲ. ಹ. ಉಮರ್(ರ) ಅವಳನ್ನು ಒಂದು ಕೋಣೆಯಲ್ಲಿ ಬಂಧಿಸಿದರು. ಆ ಕೋಣೆಯಲ್ಲಿ ಕಸಕಡ್ಡಿಗಳು ರಾಶಿ ಬಿದ್ದಿದ್ದುವು. ಮೂರು ದಿನ ಸೆರೆಯಲ್ಲಿ ಇಟ್ಟ ಬಳಿಕ ಅವರನ್ನು ಅಲ್ಲಿಂದ ಹೊರತೆಗೆದು 'ಈಗ ನಿಮ್ಮ ಸ್ಥಿತಿ ಹೇಗಿದೆ?' ಎಂದು ವಿಚಾರಿಸಿದರು.

ಆಕೆ ಹೇಳಿದಳು: ಅಲ್ಲಾಹನಾಣೆ ನನಗೆ ಸುಖ ಸಿಕ್ಕಿದ್ದೇ ಈ ರಾತ್ರಿಗಳಲ್ಲಿ. ಇದನ್ನು ಕೇಳಿ ಹ. ಉಮರ್(ರ)ರವರು ಆಕೆಯ ಪತಿಗೆ ಈ ರೀತಿ ಆಜ್ಞಾಪಿಸಿದರು: 'ಆಕೆಗೆ ತಲಾಕ್ ಕೊಟ್ಟು ಬಿಡಿ. ಆಕೆಯ ಕಿವಿಯ ಓಲೆಯನ್ನು ಪಡೆದಾದರೂ ಆದೀತು.'[1]

ರಬೀಅತ್ ಬಿಂತಿ ಮುಅವ್ವದ್ ಬಿನ್ ಅಫ್ರಾ ಎಂಬಾಕೆ ತಮ್ಮ ಎಲ್ಲ ಸಂಪತ್ತನ್ನು ಕೊಟ್ಟಾದರೂ ತಮ್ಮ ಪತಿಯಿಂದ ಖುಲಾ ಪಡೆಯಬೇಕೆಂದು ಬಯಸಿದರು. ಆದರೆ ಆತ ಅದಕ್ಕೆ ಒಪ್ಪಲಿಲ್ಲ. ಮೊಕದ್ದಮೆ ಹ. ಉಸ್ಮಾನ್(ರ)ರವರ ಬಳಿ ಹೋಯಿತು. ಹ. ಉಸ್ಮಾನ್(ರ)ರವರು ಆತನಿಗೆ ಈ ರೀತಿ ಆಜ್ಞಾಪಿಸಿದರು. 'ಆಕೆಯ ಜಡೆ ಕಟ್ಟುವ ದಾರವನ್ನು ಪಡೆದಾದರೂ ಆಕೆಗೆ ಖುಲಾ ಕೊಟ್ಟು ಬಿಡಿ.'[2]

## ಖುಲಾದ ನಿಯಮಗಳು

ಪ್ರಸ್ತುತ ವರದಿಗಳಿಂದ ಈ ಕೆಳಗಿನ ವಿಷಯಗಳ ಮೇಲೆ ಬೆಳಕು ಬೀಳುತ್ತದೆ.

1. 'ಅವರು ಅಲ್ಲಾಹನ ಮೇರೆಗಳನ್ನು ಪಾಲಿಸಲಾರರು ಎಂದು ನೀವು ಭಯ ಪಡುವುದಾದರೆ' ಎಂಬುದರ ವಿವರಣೆಯು ಸಾಬಿತ್ ಬಿನ್ ಕೈಸ್‌ರ ಪತ್ನಿಯರ ದೂರಿನಲ್ಲಿ ವ್ಯಕ್ತವಾಗುತ್ತದೆ. ಅವರ ಪತಿ ಕುರೂಪಿಯಾಗಿರುವರು ಮತ್ತು ಅವರಿಗೆ ಅಪ್ರಿಯರಾಗಿರುವರು ಎಂಬ ಆ ಮಹಿಳೆಯರ ದೂರನ್ನು ಪ್ರವಾದಿ(ಸ) ಸ್ವೀಕರಿಸುತ್ತಾರೆ. ಪ್ರವಾದಿವರ್ಯರು(ಸ) ಅವರಿಗೆ ರೂಪ-ಕುರೂಪದ ತತ್ವಶಾಸ್ತ್ರದ ಬಗ್ಗೆ ಒಂದು ಭಾಷಣ ಬಿಗಿಯಲಿಲ್ಲ. ಏಕೆಂದರೆ ಪ್ರವಾದಿಯವರ(ಸ) ದೃಷ್ಟಿಯು ಶರೀಅತ್‌ನ ಉದ್ದೇಶಗಳ ಮೇಲಿತ್ತು. ಪತ್ನಿಯರ ಮನದಲ್ಲಿ ಪತಿಯ ಕುರಿತು ತಿರಸ್ಕಾರ ಮತ್ತು ಅಪ್ರಿಯತೆ ಮನೆ ಮಾಡಿದೆ ಎಂದು ತಿಳಿದು ಬಂದ ಕೂಡಲೇ ಪ್ರವಾದಿವರ್ಯರು(ಸ) ಅವರ ಮನವಿಯನ್ನು ಸ್ವೀಕರಿಸುತ್ತಾರೆ. ಏಕೆಂದರೆ ಪತಿ-ಪತ್ನಿಯರನ್ನು ಪರಸ್ಪರ ಒತ್ತಾಯಪೂರ್ವಕ ಜೋಡಿಸಿಡುವುದು ಧರ್ಮ. ನೀತಿ ಮತ್ತು ನಾಗರಿಕತೆಗೆ ತಲಾಕ್ ಮತ್ತು ಖುಲಾಗಿಂತಲೂ ಹೆಚ್ಚು ದುಷ್ಪರಿಣಾಮಕಾರಿಯಾಗಿ ಪರಿಣಮಿಸುವುದು. ಇದರಿಂದ ಶರೀಅತ್‌ನ ಉದ್ದೇಶಗಳೇ ಈಡೇರದೆ ಹೋಗುವ ಭಯವಿದೆ. ಪ್ರವಾದಿ(ಸ)ರವರ ಈ ವರ್ತನೆಯಿಂದ ತಿಳಿದು

1. ಕಶ್ಫುಲ್ ಗಮ್ಮ ಭಾಗ-2

ಬರುವುದೇನೆಂದರೆ ಖುಲಾದ ವಿಧಿಯನ್ನು ಅನ್ವಯಿಸಲು ಪತ್ನಿಗೆ ಪತಿಯು ತೀರ ಅಪ್ರಿಯನಾಗಿದ್ದಾನೆ ಎಂದೂ ಅವನ ಜೊತೆಗಿರುವುದನ್ನು ಆಕೆ ಇಷ್ಟ ಪಡುವುದಿಲ್ಲವೆಂದೂ ರುಜುವಾದರೆ ಸಾಕಾಗುವುದು.

2. ತಿರಸ್ಕಾರ ಮತ್ತು ಜಿಗುಪ್ಸೆ ನಿಜಕ್ಕೂ ಇದೆ ಎಂಬುದನ್ನು ಖಚಿತಪಡಿಸಿಕೊಳ್ಳಲು ಹಾಗೂ ದಂಪತಿಗಳ ಮಧ್ಯೆ ಇನ್ನು ಹೊಂದಾಣಿಕೆ ಸಾಧ್ಯವೇ ಇಲ್ಲವೆಂಬುದನ್ನು ಖಾತ್ರಿ ಮಾಡಿಕೊಳ್ಳಲು ಶರೀಅತ್ ನ್ಯಾಯಾಧೀಶರು ಯಾವುದೇ ಸೂಕ್ತ ವಿಧಾನ ಕೈಗೊಳ್ಳಬಹುದೆಂದು ಹ. ಉಮರ್(ರ)ರವರ ತೀರ್ಮಾನದಿಂದ ತಿಳಿದು ಬರುತ್ತದೆ.

3. ತಿರಸ್ಕಾರ ಮತ್ತು ಜಿಗುಪ್ಸೆಯ ಕಾರಣವನ್ನು ಶೋಧಿಸುವ ಅಗತ್ಯವಿಲ್ಲವೆಂಬುದೂ ಹ. ಉಮರ್(ರ)ರವರ ತೀರ್ಮಾನದಿಂದ ತಿಳಿದು ಬರುತ್ತದೆ. ಇದೊಂದು ಬುದ್ಧಿಗೆ ನಿಲುಕದ ಮಾತು. ಪತ್ನಿಗೆ ತನ್ನ ಪತಿಯ ಬಗ್ಗೆ ಬೇರೆ ಯಾರ ಮುಂದೆಯೂ ವಿವರಿಸಲು ಸಾಧ್ಯವಿಲ್ಲದ ಅನೇಕ ಕಾರಣಗಳಿಂದ ತಿರಸ್ಕಾರ ಭಾವವಿರಬಹುದು. ತಿರಸ್ಕಾರಕ್ಕೆ ಇರುವ ಕಾರಣಗಳನ್ನು ಇತರರ ಮುಂದೆ ವಿವರಿಸಿದರೆ ಅವರಿಗದು ಸಮಂಜಸವೆಂದು ಕಾಣದಿರಲೂಬಹುದು. ಆದರೆ ಯಾರಿಗೆ ರಾತ್ರಿ ಹಗಲು ಅವನ ಜೊತೆ ವಾಸಿಸಬೇಕಾಗಿದೆಯೋ ಅಂಥವಳ ಮನಸ್ಸಿನಲ್ಲಿ ತಿರಸ್ಕಾರ ಹುಟ್ಟಿಸಲು ಆ ಕಾರಣಗಳು ಪರ್ಯಾಪ್ತವಿರಬಹುದು. ಆದ್ದರಿಂದ ಪತ್ನಿಯು ಪತಿಯ ಬಗ್ಗೆ ತಿರಸ್ಕಾರಭಾವ ಹೊಂದಿದ್ದಾಳೆ ಎಂಬುದನ್ನು ಮಾತ್ರ ನ್ಯಾಯಾಧೀಶರು ಖಚಿತಪಡಿಸಿಕೊಂಡರೆ ಸಾಕಾಗುವುದು. ಯಾವ ಕಾರಣಗಳನ್ನು ಮಹಿಳೆ ವಿವರಿಸುತ್ತಿರುವಳೋ ಅವುಗಳು ಆತನನ್ನು ದ್ವೇಷಿಸಲು ಪರ್ಯಾಪ್ತ ಕಾರಣಗಳೋ ಅಲ್ಲವೋ ಎಂಬುದನ್ನು ತೀರ್ಮಾನಿಸುವುದು ಆತನ ಕೆಲಸವಲ್ಲ.

4. ನ್ಯಾಯಾಧೀಶರು (ಕಾಝಿ) ಮಹಿಳೆಗೆ ಹಿತೋಪದೇಶ ಖಂಡಿತ ಮಾಡಬಹುದು. ತನ್ಮೂಲಕ ಆಕೆಯನ್ನು ಪತಿಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಲು ಪ್ರೇರೇಪಿಸಬಹುದು. ಆದರೆ ಆಕೆಯ ಇಚ್ಛೆಯ ವಿರುದ್ಧ ವರ್ತಿಸುವಂತೆ ಆಕೆಯನ್ನು ಬಲವಂತ ಪಡಿಸುವಂತಿಲ್ಲ. ಏಕೆಂದರೆ ಖುಲಾ ಆಕೆಯ ಹಕ್ಕು. ಅದನ್ನು ಅಲ್ಲಾಹನೇ ಆಕೆಗೆ ನೀಡಿರುವನು. ಪತಿಯೊಂದಿಗೆ ಇದ್ದರೆ ತಾನು ದೇವ ನಿಶ್ಚಿತ ಮೇರೆಗಳನ್ನು ಉಲ್ಲಂಘಿಸುವ ಭಯವಿದೆ ಎಂದು ಆಕೆ ವಾದಿಸಿದರೆ ಆಕೆಯೊಡನೆ, ನೀನು ಆ ಮೇರೆಗಳನ್ನು ಮೀರಿದರೂ ಚಿಂತಿಲ್ಲ; ಆ ಪತಿಯೊಂದಿಗೆ ಹೊಂದಾಣಿಕೆ ಮಾಡಲೇಬೇಕೆಂದು ಹೇಳುವ ಹಕ್ಕನ್ನು ಶರೀಅತ್ ಯಾರಿಗೂ ನೀಡಿಲ್ಲ.

5. ಖುಲಾದ ವಿಷಯದಲ್ಲಿ ಮಹಿಳೆ ತನ್ನ ಧರ್ಮಸಮ್ಮತ ಅಗತ್ಯಕ್ಕಾಗಿ ಖುಲಾ ಬಯಸುತ್ತಾಳೋ ಅಥವಾ ಕೇವಲ ವಿಷಯಲಂಪಟತನದಿಂದಾಗಿ ಬೇರ್ಪಡ ಬಯಸುತ್ತಾಳೋ ಎಂಬುದು ನ್ಯಾಯಾಧೀಶರ ತನಿಖೆಗೆ ಒಳಪಡುವ ಸಂಗತಿಯೇ ಅಲ್ಲ. ಆದ್ದರಿಂದಲೇ ಪ್ರವಾದಿವರ್ಯ(ಸ)ರು ಮತ್ತು ಖುಲಫಾಉರ್ರಾಶಿದೀನ್[ಸತ್ಯಸಂಧ ಖಲೀಫರುಗಳಾದ ಹ. ಅಬೂಬಕರ್, ಉಮರ್, ಉಸ್ಮಾನ್ ಮತ್ತು ಅಲೀ(ರ)] ಅವರು ನ್ಯಾಯಾಧೀಶರ ನೆಲೆಯಲ್ಲಿ ಖುಲಾದ ಮೊಕದ್ದಮೆಗಳನ್ನು ಇತ್ಯರ್ಥಗೊಳಿಸುವಾಗ ಈ ಪ್ರಶ್ನೆಯನ್ನು ತೀರಾ ಕಡೆಗಣಿಸಿದ್ದರು.

2. ಅಬ್ದುರ್ರಝಾಕ್-ಫತಹುಲ್ ಬಾರಿಯಿಂದ ಉದ್ಧೃತ.

ಏಕೆಂದರೆ ಮೊದಲನೆಯದಾಗಿ ಈ ಪ್ರಶ್ನೆಯ ಬಗ್ಗೆ ಸರಿಯಾಗಿ ತನಿಖೆ ನಡೆಸಲು ಯಾವ ನ್ಯಾಯಾಧೀಶನಿಂದಲೂ ಸಾಧ್ಯವಿಲ್ಲ. ಎರಡನೆಯದಾಗಿ ಪುರುಷರಿಗೆ ತಲಾಕ್‌ನ ಹಕ್ಕು ನೀಡಿರುವಂತೆಯೇ ಸ್ತ್ರೀಯರಿಗೆ ಖುಲಾದ ಹಕ್ಕು ನೀಡಲಾಗಿದೆ. ವಿಷಯಲಂಪಟತೆಯ ಸಾಧ್ಯತೆ ಎರಡು ಕಡೆಗಳಲ್ಲೂ ಸಮಾನವಾಗಿದೆ. ಆದರೆ ತಲಾಕನ್ನು ವಿಷಯ ಲಂಪಟತೆಗಾಗಿ ಬಳಸಬಾರದೆಂಬ ನಿಬಂಧನೆ ಕಾನೂನಿನಲ್ಲಿ ಇಲ್ಲ. ಆದ್ದರಿಂದ ಕಾನೂನಿಗೆ ಸಂಬಂಧಿಸಿದ ಹಕ್ಕಿನ ವಿಷಯದಲ್ಲಿ ಹೇಳುವಾಗ ಮಹಿಳೆಯ ಖುಲಾದ ಹಕ್ಕನ್ನೂ ಯಾವುದೇ ನೈತಿಕ ಮೇರೆಯಲ್ಲಿ ಸೀಮಿತಗೊಳಿಸಬಾರದು. ಮೂರನೆಯದಾಗಿ ಖುಲಾ ಬಯಸುವ ಸ್ತ್ರೀಯು ಎರಡರಲ್ಲಿ ಒಂದು ಸ್ಥಿತಿಯಲ್ಲಿರುತ್ತಾಳೆ. ಒಂದೋ ಆಕೆ ಯಥಾರ್ಥದಲ್ಲಿ ಖುಲಾದ ಧರ್ಮಸಮ್ಮತ ಬಯಕೆಯುಳ್ಳವಳಾಗಿರಬಹುದು. ಇಲ್ಲವೇ ಆಕೆ ವಿಷಯ ಲಂಪಟೆಯಾಗಿರಬಹುದು. ಮೊದಲನೆಯ ಸ್ಥಿತಿಯಲ್ಲಿ ಖುಲಾದ ಬೇಡಿಕೆಯನ್ನು ತಿರಸ್ಕರಿಸುವುದು ಅನ್ಯಾಯವೆನಿಸುತ್ತದೆ. ಎರಡನೆಯ ಸ್ಥಿತಿಯಲ್ಲಿ ಖುಲಾ ಕೊಡಿಸದಿದ್ದರೆ ಶರೀಅತ್‌ನ ಪ್ರಮುಖ ಉದ್ದೇಶಗಳು ನಿರರ್ಥಕಗೊಳ್ಳಬಹುದು. ಏಕೆಂದರೆ ಸ್ತ್ರೀಯು ವಿಷಯ ಲಂಪಟಳಾಗಿದ್ದರೆ ಆಕೆ ತನ್ನ ಬಯಕೆಯನ್ನು ಈಡೇರಿಸಲು ಒಂದಲ್ಲ ಒಂದು ವಿಧಾನವನ್ನು ಕೈಗೊಂಡೇ ತೀರುವಳು. ಧರ್ಮಸಮ್ಮತ ಮಾರ್ಗಗಳನ್ನು ನೀವು ಆಕೆಗೆ ತಡೆದರೆ ಆಕೆ ನಿಷಿದ್ಧ ಮಾರ್ಗಗಳಿಂದ ತನ್ನ ನೈಸರ್ಗಿಕ ಬಯಕೆಯನ್ನು ಪೂರ್ತಿಗೊಳಿಸುವಳು. ಇದು ಇನ್ನಷ್ಟು ಕೆಟ್ಟದು. ಓರ್ವ ಸ್ತ್ರೀಯು ಒಂದರ ನಂತರ ಒಂದರಂತೆ ಐವತ್ತು ಪತಿಯಂದಿರನ್ನು ಬದಲಿಸಿಕೊಂಡರೂ ಅದು ಆಕೆ ಓರ್ವನ ಪತ್ನಿಯಾಗಿದ್ದುಕೊಂಡು ಒಮ್ಮೆಯಾದರೂ ವ್ಯಭಿಚಾರವೆಸಗುವುದಕ್ಕಿಂತ ಉತ್ತಮವಾಗಿದೆ.

6. ಪತ್ನಿಯು ಕೇಳಿದಾಗ ಪತಿಯು ಖುಲಾ ನೀಡಲು ಒಪ್ಪದಿದ್ದರೆ ನ್ಯಾಯಾಧೀಶರು ಖುಲಾ ನೀಡುವಂತೆ ಆತನಿಗೆ ಆಜ್ಞಾಪಿಸಬೇಕು. ಈ ಕುರಿತು ಲಭ್ಯವಿರುವ ಎಲ್ಲ ವರದಿಗಳಲ್ಲೂ ಇಂತಹ ಸಂದರ್ಭಗಳಲ್ಲಿ ಏನಾದರೂ ಹಣ ಸ್ವೀಕರಿಸಿ ಪತ್ನಿಯನ್ನು ತೊರೆಯಬೇಕೆಂದು ಪ್ರವಾದಿವರ್ಯರು(ಸ) ಮತ್ತು ನಾಲ್ವರು ಖಲೀಫರು ಆಜ್ಞಾಪಿಸಿರುವುದಾಗಿ ತಿಳಿಸಲಾಗಿದೆ. ನ್ಯಾಯಾಧೀಶರು ಆಜ್ಞೆ ಮಾಡಿದ ಬಳಿಕ ಅದು ಪಾಲಿಸಲ್ಪಡಲೇಬೇಕು. ಪತಿಯು ಆ ಆಜ್ಞೆಯನ್ನು ಪಾಲಿಸದಿದ್ದರೆ ನ್ಯಾಯಾಧೀಶರು ಆತನಿಗೆ ಸೆರೆವಾಸ ವಿಧಿಸಬಹುದು. ಶರೀಅತ್‌ನಲ್ಲಿ ಕಾಝಿ(ನ್ಯಾಯಾಧೀಶ)ಯವರು ಕೇವಲ ಓರ್ವ ಸಲಹೆಗಾರನಾಗಿರದೆ ಓರ್ವ ಆಜ್ಞಾಧಿಕಾರಿಯಾಗಿದ್ದಾರೆ. ಪ್ರಜೆಗಳಿಗೆ ಅವರ ಆಜ್ಞೆಯನ್ನು ನಿರಾಕರಿಸುವ ಸ್ವಾತಂತ್ರ್ಯವಿಲ್ಲ. ಒಂದು ವೇಳೆ ಕಾಝಿಯ ಸ್ಥಾನವು ಕೇವಲ ಸಲಹೆಗಾರನಂತಾದರೆ ಪ್ರಜೆಗಳಿಗೆ ನ್ಯಾಯಾಲಯದ ದ್ವಾರ ತೆರೆದಿರುವುದು ಕೇವಲ ಪ್ರಹಸನವಾಗಿ ಮಾರ್ಪಡುವುದು.

7. ಪ್ರವಾದಿವರ್ಯರು(ಸ) ಸ್ಪಷ್ಟಪಡಿಸಿದ ಪ್ರಕಾರ, ಖುಲಾ ಎಂಬುದು ಒಂದು 'ತಲಾಕ್ ಬಾಯಿನ್'ಗೆ ಸಮಾನವಾದುದು. ಅರ್ಥಾತ್ ಖುಲಾ ನೀಡಿದ ಬಳಿಕ ಇದ್ದತ್ ಅವಧಿಯಲ್ಲಿ ಪತಿಗೆ ಪತ್ನಿಯೊಂದಿಗೆ ಸಂಬಂಧ ಪುನಃ ಸ್ಥಾಪಿಸುವ ಹಕ್ಕು ಇರಲಾರದು. ಏಕೆಂದರೆ ಪತಿಗೆ ಪತ್ನಿಯೊಂದಿಗೆ ಸಂಬಂಧ ಪುನಃ ಸ್ಥಾಪಿಸುವ ಹಕ್ಕು ಇದೆ ಎಂದಾದರೆ ಖುಲಾದ ಉದ್ದೇಶವೇ ಈಡೇರುವುದಿಲ್ಲ. ಅಷ್ಟೇ ಅಲ್ಲ ಪತ್ನಿಯು ಪತಿಗೆ ನೀಡುವ ಪರಿಹಾರ ಹಣವನ್ನು ನಿಕಾಹ್

ಬಂಧನದಿಂದ ವಿಮುಕ್ತಿ ನೀಡಿದ್ದರ ಪ್ರತಿಯಾಗಿಯೇ ನೀಡಿರುತ್ತಾಳೆ. ಆದ್ದರಿಂದ ಪತಿಯು ಪರಿಹಾರ ಧನ ಪಡೆದ ಬಳಿಕವೂ ಆಕೆಯನ್ನು ವಿಮುಕ್ತಗೊಳಿಸದಿದ್ದರೆ ಅದು ವಂಚನೆ ಎನಿಸುತ್ತದೆ. ಅದನ್ನು ಶರೀಅತ್ ಧರ್ಮಸಮ್ಮತವೆಂದು ಪರಿಗಣಿಸುವುದಿಲ್ಲ. ಒಂದು ವೇಳೆ ಸ್ವತಃ ಆ ಮಹಿಳೆಯು ಆ ಬಳಿಕ ಆತನೊಂದಿಗೆ ಪುನಃ ವಿವಾಹ ಮಾಡಿಕೊಳ್ಳಬಯಸಿದರೆ ಹಾಗೆ ಮಾಡುವ ಅವಕಾಶ ಆಕೆಗೆ ಪ್ರಾಪ್ತವಿದೆ. ಏಕೆಂದರೆ ಇದು 'ತಲಾಕ್ ಮುಗಲ್ಲಿಝ' ಅಲ್ಲ. 'ತಲಾಕ್ ಮುಗಲ್ಲಿಝ'ದ ಬಳಿಕ ಮರಳಿ ವಿವಾಹವಾಗಬೇಕಾದರೆ 'ತಹ್‌ಲೀಲ್' (ಇನ್ನೊಬ್ಬ ಪುರುಷನೊಂದಿಗೆ ವಿವಾಹವಾಗಿ ಆತನು ಸ್ವಇಚ್ಛೆಯಿಂದ ವಿಚ್ಛೇದನ ನೀಡುವುದು) ಆಗಬೇಕೆಂಬ ಶರ್ತವಿದೆ. ಆದರೆ ಇಲ್ಲಿ ಅಂತಹ ಶರ್ತವಿಲ್ಲ.

8. ಖುಲಾಕ್ಕೆ ಪರಿಹಾರ ಧನ ನಿರ್ಣಯಿಸುವ ಬಗ್ಗೆ ಅಲ್ಲಾಹನು ಯಾವುದೇ ಮಿತಿಯನ್ನು ನಿರ್ಣಯಿಸಲಿಲ್ಲ. ಎಷ್ಟು ಪರಿಹಾರಕ್ಕೆ ಖುಲಾ ನೀಡಬಹುದೆಂದು ದಂಪತಿಗಳು ಒಪ್ಪುತ್ತಾರೋ ಅದಕ್ಕೆ ಪ್ರತಿಯಾಗಿ ಖುಲಾ ಆಗುತ್ತದೆ. ಆದರೆ ಪತಿಯಾದವನು ಖುಲಾ ನೀಡುವ ಪರಿಹಾರ ಧನವಾಗಿ ತಾನು ಪತ್ನಿಗೆ ನೀಡಿರುವ ಮಹ್‌ರ್‌ಗಿಂತ ಹೆಚ್ಚಿನ ಮೊತ್ತವನ್ನು ಪಡೆಯುವುದನ್ನು ಪ್ರವಾದಿ(ಸ)ರವರು ಮೆಚ್ಚುವುದಿಲ್ಲ. ಪ್ರವಾದಿ(ಸ) ಹೀಗೆ ಹೇಳಿರುವರು: 'ಖುಲಾ ನೀಡಲ್ಪಡುವ ಮಹಿಳೆಯಿಂದ ಪುರುಷನು ಆಕೆಗೆ ನೀಡಿರುವುದಕ್ಕಿಂತ ಅಧಿಕ ಮೊತ್ತವನ್ನು ಪಡೆಯಬಾರದು.' ಹ. ಅಲೀ(ರ)ರವರೂ ಅದನ್ನು ಸ್ಪಷ್ಟ ಶಬ್ದಗಳಲ್ಲಿ ಮಕ್ರೂಹ್ (ಅರೋಚಕ) ಎಂದಿರುವರು. ಕರ್ಮಶಾಸ್ತ್ರದ ಇಮಾಮರಲ್ಲೂ ಈ ಬಗ್ಗೆ ಒಮ್ಮತಾಭಿಪ್ರಾಯವಿದೆ. ಮಹಿಳೆಯು ಪತಿಯ ಕಿರುಕುಳವನ್ನು ತಡೆಯಲಾರದೆ ಖುಲಾ ಪಡೆಯುವುದಾದರೆ ಆಗಂತೂ ಆಕೆಯಿಂದ ಒಂದು ಚಿಕ್ಕಾಸು ಪಡೆಯುವುದು ಕೂಡಾ ಪತಿಗೆ ಮಕ್ರೂಹ್ (ಅರೋಚಕ) ಆಗಿದೆ. ಸುಪ್ರಸಿದ್ಧ ಕರ್ಮಶಾಸ್ತ್ರ ಗ್ರಂಥವಾದ 'ಹಿದಾಯದಲ್ಲಿ' ಈ ರೀತಿ ಇದೆ.

'ಅತಿಕ್ರಮವು ಪತಿಯ ಕಡೆಯಿಂದಾಗಿದ್ದು ಅದರ ಕಾರಣದಿಂದಲೇ ಪತ್ನಿಯು ಖುಲಾ ಬಯಸುವುದಾದರೆ ಆಕೆಯಿಂದ ಯಾವುದೇ ಪರಿಹಾರ ಪಡೆಯುವುದು ಪತಿಗೆ ಮಕ್ರೂಹ್ ಆಗಿದೆ.'

ಈ ಸ್ಪಷ್ಟೀಕರಣಗಳ ಬಳಿಕ ಶರೀಅತ್ ವಿಧಿಗಳಿಗನುಸಾರ ಈ ಕೆಳಗಿನ ನಿಯಮವನ್ನು ರೂಪಿಸಬಹುದು:

ಖುಲಾದ ಬೇಡಿಕೆ ಮುಂದಿಡುವ ಮಹಿಳೆಯು ಪತಿಯ ಅತಿಕ್ರಮವನ್ನು ಸಾಬೀತುಪಡಿಸಿದರೆ ಅಥವಾ ಖುಲಾ ಪಡೆಯಲು ಸೂಕ್ತವೆಂದು ನ್ಯಾಯಾಧೀಶರಿಗೆ ಭಾಸವಾಗುವಂತಹ ಕಾರಣಗಳನ್ನು ಮುಂದಿಟ್ಟರೆ, ಆಕೆಯಿಂದ ಮಹ್‌ರ್‌ನ ಮೊತ್ತದ ಒಂದು ಸಣ್ಣ ಅಂಶ ಅಥವಾ ಅರ್ಧಾಂಶ ಮರುಪಾವತಿ ಮಾಡಿಸಿ ಆಕೆಗೆ ಖುಲಾ ಕೊಡಿಸಬೇಕು. ಒಂದು ವೇಳೆ ಆಕೆ ಪತಿಯ ಅತಿಕ್ರಮ ಸಾಬೀತುಗೊಳಿಸದಿದ್ದರೆ ಅಥವಾ ಇನ್ನಾವುದೇ ಸೂಕ್ತ ಕಾರಣ ಮುಂದಿಡದೆ ಹೋದರೆ ಪೂರ್ತಿ ಮಹ್‌ರ್‌ನ ಮೊತ್ತ ಅಥವಾ ಅದರ ಒಂದು ದೊಡ್ಡ ಭಾಗ ಮರಳಿಸುವುದನ್ನು ಕಡ್ಡಾಯಗೊಳಿಸಬೇಕು. ಆದರೆ ಆಕೆಯ ವರ್ತನೆಯಿಂದ ಶಿಕ್ಷೆಯ ವಿಷಯ ಲಂಪಟತೆಯು ನ್ಯಾಯಾಧೀಶರಿಗೆ ಖಚಿತ ಪಟ್ಟರೆ ಅವರು ಆಕೆಗೆ ಶಿಕ್ಷೆಯ ರೂಪದಲ್ಲಿ ಆಕೆ ಮಹ್‌ರ್‌ಗಿಂತ ಹೆಚ್ಚಿನ ಮೊತ್ತವನ್ನು ಪಾವತಿ ಮಾಡುವಂತೆ ಒತ್ತಾಯಪಡಿಸಬಹುದು.

## ಖುಲಾದ ಬಗೆಗಿನ ಒಂದು ಮೂಲಭೂತ ತಪ್ಪು

ಖುಲಾದ ಬಗೆಗಿನ ಈ ವಿವರಣೆಯಿಂದ ಇಸ್ಲಾಮೀ ಕಾನೂನಿನಲ್ಲಿ ಸ್ತ್ರೀ-ಪುರುಷರ ಹಕ್ಕುಗಳ ಮಧ್ಯೆ ಎಷ್ಟೊಂದು ಸರಿಯಾದ ಸಮತೋಲನವನ್ನು ಕಾಯ್ದಿರಿಸಲಾಗಿದೆ ಎಂಬ ಅಂಶವು ಸ್ಫುಟವಾಗುತ್ತದೆ. ಈಗ ಕಾರ್ಯತಃ ಸ್ತ್ರೀಯರಿಂದ ಖುಲಾದ ಹಕ್ಕನ್ನು ಕಸಿದಿರುವುದು ನಮ್ಮ ತಪ್ಪಾಗಿದೆ. ನಾವಂತೂ ಸ್ತ್ರೀಗೆ ಖುಲಾ ನೀಡುವುದು ಅಥವಾ ನೀಡದಿರುವುದನ್ನು ಪುರುಷರ ಇಚ್ಛೆಗೆ ಬಿಟ್ಟ ವಿಷಯವಾಗಿ ಮಾರ್ಪಡಿಸಿರುವೆವು. ಇದು ಶರೀಅತ್‌ನ ತತ್ವಗಳಿಗೆ ವಿರುದ್ಧವಾಗಿದೆ. ಇದರಿಂದಾಗಿ ಸ್ತ್ರೀಯರ ಹಕ್ಕು ಚ್ಯುತಿಯಾಗಿದ್ದರೆ ಅಥವಾ ಆಗುತ್ತಿದ್ದರೆ ಅದಕ್ಕೆ ಅಲ್ಲಾಹ್ ಮತ್ತು ಪ್ರವಾದಿವರ್ಯರ(ಸ) ಕಾನೂನು ಖಂಡಿತ ಹೊಣೆ ಅಲ್ಲ. ಈಗಲಾದರೂ ನಾವು ಸ್ತ್ರೀಯರಿಗೆ ಅವರ ಈ ಹಕ್ಕನ್ನು ನೀಡುವುದಾದರೆ ನಮ್ಮ ದಾಂಪತ್ಯ ಸಂಬಂಧಗಳಲ್ಲಿ ಹುಟ್ಟಿರುವ ಎಷ್ಟೋ ಜಟಿಲ ಸಮಸ್ಯೆಗಳು ಬಗೆಹರಿಯಬಹುದು. ಮಾತ್ರವಲ್ಲ ಅದೆಷ್ಟೋ ಸಮಸ್ಯೆಗಳು ಉದ್ಭವಿಸುವುದೇ ನಿಂತು ಹೋದೀತು.

ಶರೀಅತ್ ಖುಲಾದ ವಿಷಯವನ್ನು ಪೂರ್ಣವಾಗಿ ಪತಿ-ಪತ್ನಿಯರಿಗೆ ಸೀಮಿತಗೊಳಿಸಿದ್ದು ಅದರಲ್ಲಿ ಹಸ್ತಕ್ಷೇಪ ನಡೆಸುವುದು ಕಾಝಿ (ನ್ಯಾಯಾಧೀಶ)ಯವರ ಅಧಿಕಾರ ವ್ಯಾಪ್ತಿಗೆ ಮೀರಿದ ವಿಷಯವಾಗಿದೆ ಎಂಬ ತಪ್ಪು ಭಾವನೆಯೇ ಇಂದು ಮಹಿಳೆಯರ ಖುಲಾದ ಹಕ್ಕನ್ನು ಕಾರ್ಯತಃ ಕಸಿದು ಹೋಗಿರುವುದಕ್ಕೆ ಕಾರಣವಾಗಿದೆ. ಇದರ ಪರಿಣಾಮವಾಗಿ ಖುಲಾ ನೀಡುವುದು ಅಥವಾ ನೀಡದಿರುವುದು ಕೇವಲ ಪತಿಯ ಇಚ್ಛೆಗೆ ಬಿಟ್ಟ ವಿಷಯವಾಗಿ ಮಾರ್ಪಟ್ಟಿದೆ. ಪತ್ನಿಯು ಖುಲಾ ಪಡೆಯ ಬಯಸಿದಾಗ ಪುರುಷನು ಸ್ವಾರ್ಥದಿಂದ ಅಥವಾ ಕೀಟಲೆ ಕೊಡುವ ಉದ್ದೇಶದಿಂದ ಖುಲಾ ನೀಡಲು ನಿರಾಕರಿಸಿದರೆ ಪತ್ನಿಗೆ ಯಾವ ಪರಿಹಾರ ಮಾರ್ಗವೂ ಉಳಿಯದಂತಾಗಿದೆ. ಆದರೆ ಇದು ಶರೀಅತ್ ಕಾನೂನಿನ ಉದ್ದೇಶಕ್ಕೆ ತೀರಾ ವಿರುದ್ಧವಾದುದು. ದಂಪತಿಗಳ ಪೈಕಿ ಓರ್ವರನ್ನು ಅಸಹಾಯಕರನ್ನಾಗಿ ಮಾರ್ಪಡಿಸಿ ಎಲ್ಲ ಅಧಿಕಾರವನ್ನೂ ಇನ್ನೋರ್ವರಿಗೆ ನೀಡುವುದು ಶರೀಅತ್‌ನ ಉದ್ದೇಶ ಖಂಡಿತ ಅಲ್ಲ. ಒಂದು ವೇಳೆ ಹಾಗಿರುತ್ತಿದ್ದರೆ, ಶರೀಅತ್ ದಾಂಪತ್ಯ ಸಂಬಂಧದೊಂದಿಗೆ ಜೋಡಿಸಿರುವ ಉನ್ನತ ನೈತಿಕ ಮತ್ತು ಸಾಂಸ್ಕೃತಿಕ ಉದ್ದೇಶಗಳು ನಿರರ್ಥಕಗೊಳ್ಳುತ್ತಿದ್ದವು.

ಈ ಹಿಂದೆ ವಿವರಿಸಿದಂತೆ ಇಸ್ಲಾಮೀ ಶರೀಅತ್‌ನ ದಾಂಪತ್ಯ ಕಾನೂನು ಒಂದು ತತ್ವದ ಮೇಲೆ ಆಧಾರಿತವಾಗಿದೆ. ಅದೇನೆಂದರೆ ಸ್ತ್ರೀ ಪುರುಷರ ದಾಂಪತ್ಯ ಸಂಬಂಧವು ನೈತಿಕ ಪರಿಶುದ್ಧತೆ, ಪ್ರೀತಿ, ಕರುಣೆ ಮತ್ತು ಸಹಾನುಭೂತಿಗಳ ಮೇಲೆ ನೆಲೆ ನಿಂತಿರುವ ತನಕ ಅದನ್ನು ಸ್ಥಿರವಾಗಿ ಉಳಿಸಬೇಕಾದುದು ಅತ್ಯವಶ್ಯಕವೂ ಸ್ತುತ್ಯರ್ಹವೂ ಆಗಿದೆ ಮತ್ತು ಈ ಸ್ಥಿತಿಯಲ್ಲಿ ಅದನ್ನು ಮುರಿಯಲು ಯತ್ನಿಸುವುದು ಅತ್ಯಂತ ಖಂಡನಾರ್ಹವಾಗಿದೆ. ಆದರೆ ದಾಂಪತ್ಯದ ಈ ಸಂಬಂಧವು ಆ ಇಬ್ಬರಿಗೆ ಅಥವಾ ಇಬ್ಬರ ಪೈಕಿ ಒಬ್ಬರಿಗೆ ನೈತಿಕತೆಯ ಪತನದ ಹೇತುವಾದರೆ ಅಥವಾ ಅವರಲ್ಲಿ ಸಹಾನುಭೂತಿ ಮತ್ತು ಕರುಣೆಯ ಬದಲು ಪರಸ್ಪರ ತಿರಸ್ಕಾರ ಮತ್ತು ಜಿಗುಪ್ಸೆ ಹುಟ್ಟಿ ಬೆಳೆದರೆ ಈ ಸಂಬಂಧವನ್ನು ಮುರಿಯಬೇಕಾಗುತ್ತದೆ. ಅದನ್ನು ಹಾಗೆಯೇ ಉಳಿಸುವುದು

ಶರೀಅತ್‌ನ ಉದ್ದೇಶಗಳಿಗೆ ವಿರುದ್ಧವಾಗಿದೆ. ಈ ತತ್ವದ ಮೇಲೆ ಶರೀಅತ್ ಕಾನೂನು ದಂಪತಿಗಳಿಬ್ಬರಿಗೂ ತಲಾ ಒಂದು ಅಸ್ತ್ರ ನೀಡಿದೆ. ದಾಂಪತ್ಯ ಸಂಬಂಧವು ಅಸಹನೀಯವಾಗಿ ಮಾರ್ಪಟ್ಟಾಗ ಆ ಅಸ್ತ್ರದ ಬಳಕೆಯಿಂದ ಸಮಸ್ಯೆಯನ್ನು ಪರಿಹರಿಸಿಕೊಳ್ಳಬಹುದಾಗಿದೆ. ಪುರುಷನಿಗೆ ನೀಡಲ್ಪಟ್ಟ ಅಸ್ತ್ರದ ಹೆಸರು ತಲಾಕ್. ಅದರ ಉಪಯೋಗಕ್ಕೆ ಆತನಿಗೆ ಸ್ವತಂತ್ರ ಅಧಿಕಾರ ನೀಡಲಾಗಿದೆ. ಇದಕ್ಕೆ ಪ್ರತಿಯಾಗಿ ಮಹಿಳೆಗೆ ನೀಡಲ್ಪಟ್ಟ ಅಸ್ತ್ರದ ಹೆಸರು ಖುಲಾ ಅದರ ಉಪಯೋಗದ ವಿಧಾನ ಈ ರೀತಿ ಇದೆ: ಪತ್ನಿ ದಾಂಪತ್ಯ ಸಂಬಂಧವನ್ನು ಮುರಿಯ ಬಯಸಿದಾಗ ಮೊದಲು ಪುರುಷನಿಂದ ಖುಲಾವನ್ನು ಅಪೇಕ್ಷಿಸಬೇಕು. ಆತನು ಖುಲಾ ನೀಡಲು ನಿರಾಕರಿಸಿದರೆ ಆಕೆ ಕಾಝಿ (ನ್ಯಾಯಾಧೀಶ)ಯವರ ಸಹಾಯ ಪಡೆಯಬಹುದು.

ಈ ರೀತಿ ದಂಪತಿಗಳ ಮಧ್ಯೆ ಸಮತೋಲನ ಸ್ಥಾಪಿಸಬಹುದಾಗಿದೆ. ಅಲ್ಲಾಹ್ ಮತ್ತು ಆತನ ಪ್ರವಾದಿಯವರು ವಾಸ್ತವದಲ್ಲಿ ಈ ರೀತಿಯ ಸಮತೋಲನವನ್ನೇ ಸ್ಥಾಪಿಸಿದ್ದರು. ಆದರೆ ಈಗ ಕಾಝಿಯವರ ಅಧಿಕಾರವನ್ನು ತೆಗೆದು ಹಾಕಿ ಈ ಸಮತೋಲನವನ್ನು ಕೆಡಿಸಲಾಗಿದೆ. ಏಕೆಂದರೆ ಇದರಿಂದ ಮಹಿಳೆಗೆ ನೀಡಲ್ಪಟ್ಟ ಆ ಕಾನೂನಿನ ಅಸ್ತ್ರವು ತೀರಾ ನಿರುಪಯುಕ್ತವಾಗಿ ಬಿಟ್ಟಿದೆ. ಪುರುಷನಿಗಂತೂ ದಾಂಪತ್ಯ ಸಂಬಂಧದಲ್ಲಿ ದೇವ ಮೇರೆಗಳನ್ನು ಮೀರುವ ಆಶಂಕೆ ಇದ್ದಾಗ ಅಥವಾ ದಾಂಪತ್ಯ ಸಂಬಂಧವು ಅಸಹನೀಯವಾಗಿ ಮಾರ್ಪಟ್ಟಾಗ ಆತನಿಗೆ ಅದನ್ನು ಮುರಿಯಲು ಅವಕಾಶವಿದೆ. ಆದರೆ ಇದೇ ಆಶಂಕೆ ಮಹಿಳೆಗೆ ಇದ್ದರೆ ಅಥವಾ ದಾಂಪತ್ಯ ಸಂಬಂಧವು ಆಕೆಯ ಮಟ್ಟಿಗೆ ಅಸಹನೀಯವಾಗಿ ಮಾರ್ಪಟ್ಟರೆ ಆಕೆಯ ಬಳಿ ಈ ಸಂಬಂಧವನ್ನು ಮುರಿಯುವ ಯಾವ ಮಾರ್ಗವೂ ಇಲ್ಲವಾಗಿದೆ. ಪುರುಷನೇ ಆಕೆಯನ್ನು ಸ್ವತಂತ್ರಗೊಳಿಸಬೇಕಷ್ಟೆ, ಅನ್ಯಥಾ ಆಕೆ ಆ ಬಂಧನದಲ್ಲೆ ಬಿಗಿದಿರಲು ನಿರ್ಬಂಧಿತಳಾಗಿರುವಳು. ಅದರಿಂದ ದೇವಮೇರೆಗಳೊಳಗೆ ಇರುವುದು ಆಕೆಗೆ ಅಸಾಧ್ಯವಾದರೂ ಸರಿಯೇ ಮತ್ತು ವಿವಾಹಕ್ಕೆ ಶರೀಅತ್ ಗೊತ್ತು ಪಡಿಸಿದ ಉದ್ದೇಶಗಳು ಈಡೇರದಿದ್ದರೂ ಸರಿಯೇ. ಅಲ್ಲಾಹ್ ಮತ್ತವನ ಸಂದೇಶವಾಹಕರ ಶರೀಅತ್‌ನಲ್ಲಿ ಇಷ್ಟೊಂದು ಸ್ಪಷ್ಟ ಅನ್ಯಾಯ ಇದೆಯೆಂಬ ಅಪವಾದ ಹೇರುವ ಧೈರ್ಯ ಯಾರಿಗಾದರೂ ಇದೆಯೇ? ಆ ಧೈರ್ಯವನ್ನು ಯಾರಾದರೂ ತೋರುವುದಾದರೆ ಆತನು ಅಲ್ಲಾಹನು ಮತ್ತು ಪ್ರವಾದಿವರ್ಯರು ಖುಲಾದ ವಿಷಯದಲ್ಲಿ ಕಾಝಿಯವರಿಗೆ ಯಾವ ಅಧಿಕಾರವನ್ನೂ ನೀಡಲಿಲ್ಲವೆಂಬುದಕ್ಕೆ ಅಲ್ಲಾಹನ ಗ್ರಂಥ ಮತ್ತು ಪ್ರವಾದಿ ಚರ್ಯೆಯಿಂದ ಪುರಾವೆಗಳನ್ನು ನೀಡಬೇಕೇ ಹೊರತು ಕರ್ಮಶಾಸ್ತ್ರ ಪಂಡಿತರ ಹೇಳಿಕೆಗಳಿಂದಲ್ಲ.

## ಖುಲಾದ ಬಗ್ಗೆ ಕಾಝಿಯ ಅಧಿಕಾರಗಳು

ಖುಲಾದ ಕಾನೂನಿನ ಬಗ್ಗೆ ವಿವರಿಸಿರುವ ಪವಿತ್ರ ಕುರ್‌ಆನ್‌ನ ಸೂಕ್ತವನ್ನು ಮತ್ತೊಮ್ಮೆ ಓದಿರಿ:

"...ಅವರಿಬ್ಬರೂ ಅಲ್ಲಾಹನ ಮೇರೆಗಳಲ್ಲೇ ನೆಲೆನಿಲ್ಲಲಾರರೆಂದು ನಿಮಗೆ ಶಂಕೆಯುಂಟಾದಾಗ ಸ್ತ್ರೀಯು ತನ್ನ ಪುರುಷನಿಗೆ (ಪತಿಗೆ) ಏನಾದರೂ ಪರಿಹಾರ ಕೊಟ್ಟು ಬಿಡುಗಡೆ ಹೊಂದುವುದರಲ್ಲಿ ದೋಷವಿಲ್ಲ..." (ಅಲ್‌ಬಕರಃ : 229)

ಈ ಸೂಕ್ತದಲ್ಲಿ ದಂಪತಿಗಳ ಪ್ರಸ್ತಾಪವಿರುವುದು ಉತ್ತಮ ಪುರುಷ (Third person) ಎಂಬ ನೆಲೆಯಲ್ಲಿ. ಆದ್ದರಿಂದ ಇಲ್ಲಿ ಸಂಬೋಧಿತರು ದಂಪತಿಗಳಾಗುವುದು ಸಾಧ್ಯವಿಲ್ಲ. ಈ ಆಜ್ಞೆಯ ಸಂಬೋಧಿತರು ಮುಸಲ್ಮಾನರ ಆಜ್ಞಾಧಿಕಾರಿಗಳಾಗಿರುತ್ತಾರೆ. ಖುಲಾದ ವಿಷಯದಲ್ಲಿ ದಂಪತಿಗಳು ಪರಸ್ಪರ ಒಪ್ಪಂದಕ್ಕೆ ಬರುವುದು ಸಾಧ್ಯವಿಲ್ಲದೆ ಹೋದಾಗ ಅವರು ತಮ್ಮ ಆಜ್ಞಾಧಿಕಾರಿಗಳನ್ನು ಸಂಪರ್ಕಿಸಬೇಕೆಂಬುದೇ ಅಲ್ಲಾಹನ ಈ ಆಜ್ಞೆಯ ಇಂಗಿತವಾಗಿದೆ.

ನಾವು ಈ ಮೊದಲು ಉಲ್ಲೇಖಿಸಿರುವ ಹದೀಸ್‌ಗಳು ಇದನ್ನೇ ದೃಢ ಪಡಿಸುತ್ತವೆ. ಪ್ರವಾದಿವರ್ಯರ ಮತ್ತು ನಾಲ್ವರು ಖಲೀಫರುಗಳ ಬಳಿಗೆ ಮಹಿಳೆಯರು ದೂರು ತೆಗೆದುಕೊಂಡು ಬಂದಿದ್ದರೆಂಬುದು ಮತ್ತು ಆ ದೂರುಗಳನ್ನು ಅವರು ಆಲಿಸಿದ್ದರು ಎಂಬುದು ದಂಪತಿಗಳಲ್ಲಿ ಖುಲಾದ ಬಗ್ಗೆ ಪರಸ್ಪರ ಒಪ್ಪಂದ ಏರ್ಪಡದಿದ್ದರೆ ಮಹಿಳೆಯು ಕಾಝಿಯ ಬಳಿಗೆ ಹೋಗಬೇಕು ಎಂಬುದಕ್ಕೆ ಸ್ವತಃ ಪುರಾವೆಯಾಗಿದೆ. ಒಂದು ವೇಳೆ ಕಾಝಿಗೆ ದೂರು ಆಲಿಸುವ ಅಧಿಕಾರ ಮಾತ್ರವಿದ್ದು ಪುರುಷನು ಒಪ್ಪದಿದ್ದ ಸ್ಥಿತಿಯಲ್ಲಿ ಆತನಿಗೆ ತನ್ನ ತೀರ್ಪನ್ನು ಜಾರಿಗೊಳಿಸುವ ಅಧಿಕಾರವಿಲ್ಲವೆಂದಾದರೆ ಕಾಝಿಯನ್ನು ಸಂಪರ್ಕಿಸುವುದೇ ವ್ಯರ್ಥವೆನಿಸುತ್ತದೆ. ಏಕೆಂದರೆ ಆಗ ಆತನ ಬಳಿ ಹೋದರೂ ಹೋಗದಿದ್ದರೂ ಪರಿಣಾಮ ಒಂದೇ ಆಗಿರುವುದು. ಆದರೆ ಹದೀಸ್‌ಗಳಿಂದ ಕಾಝಿಗೆ ಈ ಬಗ್ಗೆ ಯಾವ ಅಧಿಕಾರವೂ ಇಲ್ಲವೆಂದು ಸಾಬೀತಾಗುತ್ತದೆಯೇ? ಪ್ರವಾದಿವರ್ಯರು(ಸ) ಮತ್ತು ಖುಲಫಾಉರ್ರಾಶಿದೀನ್‌ಗಳ ಎಷ್ಟು ತೀರ್ಪುಗಳನ್ನು ನಾವು ಈ ಹಿಂದೆ ಉಲ್ಲೇಖಿಸಿರುವೆವೋ ಅವುಗಳಲ್ಲೆಲ್ಲಾ ಒಂದೋ ಆಜ್ಞೆಯ ಧ್ವನಿ ಇದೆ, ಉದಾಹರಣೆಗೆ'ತಲ್ಲಿಕ್‌ಹಾ' (ಆಕೆಗೆ ತಲಾಕ್ ನೀಡಿರಿ) 'ಫಾರಿಕ್‌ಹಾ' (ಆಕೆಯಿಂದ ಬೇರ್ಪಡಿರಿ) ಮತ್ತು 'ಖಲ್ಲಿ ಸಬೀಲಿಹಾ' (ಆಕೆಯನ್ನು ತೊರೆಯಿರಿ) ಅಥವಾ ಪ್ರವಾದಿ(ಸ) ಪುರುಷನಿಗೆ ಈ ರೀತಿ ಆಜ್ಞಾಪಿಸಿದರು ಎಂದು ಉಲ್ಲೇಖಿಸಲ್ಪಟ್ಟಿದೆ. ಇಬ್ನು ಜರೀರ್(ರ) ಅವರು ಇಬ್ನು ಅಬ್ಬಾಸ್(ರ)ರಿಂದ ವರದಿ ಮಾಡಿರುವ ಹದೀಸ್‌ನಲ್ಲಿ ಈ ರೀತಿ ಉಲ್ಲೇಖಿಸಲ್ಪಟ್ಟಿದೆ; 'ಫಫರ್ರಕ ಬೈನಹುಮಾ' (ಮತ್ತು ಅವರು ದಂಪತಿಗಳನ್ನು ಬೇರ್ಪಡಿಸಿದರು) ಇದೇ ಪದಗಳು ಜಮೀಲ ಬಿಂತು ಉಬೈ ಬಿನ್ ಸಲೂಲ್‌ರಿಂದ ವರದಿಯಾದ ಹದೀಸ್‌ನಲ್ಲೂ ಬಂದಿವೆ. ಇವುಗಳನ್ನೆಲ್ಲಾ ಗಮನದಲ್ಲಿರಿಸಿದರೆ ಕಾಝಿಗೆ ಖುಲಾದ ವಿಷಯದಲ್ಲಿ ಆಜ್ಞೆ ನೀಡುವ ಅಧಿಕಾರವಿಲ್ಲವೆಂದು ಸಂಶಯ ಪಡಲು ಆಸ್ಪದವೇ ಉಳಿಯುವುದಿಲ್ಲ.

ಪತಿಯು ಈ ಆಜ್ಞೆಯನ್ನು ಕೇವಲ ಸಲಹೆಯೆಂದು ಪರಿಗಣಿಸಿ ಪಾಲಿಸಲು ನಿರಾಕರಿಸಿದರೆ ಕಾಝಿ ಬಲವಂತವಾಗಿ ಈ ಆಜ್ಞೆಯನ್ನು ಜಾರಿಗೊಳಿಸುವನೇ ಎಂಬುದು ಇನ್ನು ಉಳಿದಿರುವ ಪ್ರಶ್ನೆ. ಇದಕ್ಕೆ ಉತ್ತರವೇನೆಂದರೆ ಪ್ರವಾದಿವರ್ಯರ(ಸ) ಮತ್ತು ನಾಲ್ವರು ಖಲೀಫರುಗಳ ಕಾಲದಲ್ಲಿ ಅವರೊಂದು ಆಜ್ಞೆ ನೀಡಿ ಯಾರಾದರೂ ಅದನ್ನು ಪಾಲಿಸಲು ನಿರಾಕರಿಸಿದ ಯಾವುದೇ ಉದಾಹರಣೆ ನಮಗೆ ಸಿಗುವುದಿಲ್ಲ. ಆದರೆ ಹ. ಅಲೀ(ರ) ಅವರು ನೀಡಿದ ಒಂದು ತೀರ್ಪಿನ ಆಧಾರದಲ್ಲಿ ನಾವು ಈ ಬಗ್ಗೆ ಸರಿಯಾದ ನಿಲುವೇನೆಂಬುದನ್ನು ಊಹಿಸಬಹುದಾಗಿದೆ. ಅವರು ಓರ್ವ ಹಟಮಾರಿ ಪತಿಯೊಡನೆ: 'ಮಧ್ಯಸ್ಥಿಕೆದಾರರ ತೀರ್ಮಾನವನ್ನು ಮಹಿಳೆ ಒಪ್ಪಿಕೊಂಡಂತೆ

ನೀವು ಒಪ್ಪಿಕೊಳ್ಳುವ ತನಕ ನಾವು ನಿನ್ನನ್ನು ಬಿಡಲಾರೆವು.' ಎಂದು ಹೇಳಿದ್ದರು. ಮಧ್ಯಸ್ಥಿಕೆದಾರರ ತೀರ್ಮಾನವನ್ನು ಪಾಲಿಸಲು ನಿರಾಕರಿಸುವವರನ್ನು ಸೆರೆಯಲ್ಲಿರಿಸುವ ಅಧಿಕಾರ ಕಾಝಿಗೆ ಇದೆಯೆಂದಾದರೆ ಅವನಿಗೆ ಸ್ವಯಂ ತನ್ನ ತೀರ್ಪನ್ನು ಪಾಲಿಸದವರನ್ನು ಸೆರೆಯಲ್ಲಿರಿಸುವ ಹಕ್ಕೂ ಅದಕ್ಕಿಂತಲೂ ಮಿಗಿಲಾಗಿ ಇದೆ. ಲೋಕದ ಎಲ್ಲ ವ್ಯವಹಾರಗಳ ಪೈಕಿ ಕೇವಲ ಖುಲಾದ ವ್ಯವಹಾರದಲ್ಲಿ ಮಾತ್ರ ಕಾಝಿಯವರನ್ನು ಅವರ ಅಧಿಕಾರದಿಂದ ವಂಚಿತಗೊಳಿಸಲು ಯಾವ ಕಾರಣವೂ ಇಲ್ಲ. ಕರ್ಮಶಾಸ್ತ್ರ ಗ್ರಂಥಗಳಲ್ಲಿ ಅನೇಕ ಕಡೆಗಳಲ್ಲಿ ಕಾಝಿಯವರ ತೀರ್ಪಿನ ಪ್ರಕಾರ ಪತಿ ತಲಾಕ್ ನೀಡಲು ನಿರಾಕರಿಸಿದರೆ ಕಾಝಿಯವರೇ ಸ್ವತಃ ಅವರ ವಿವಾಹ ಬಂಧನವನ್ನು ಕಡಿದು ಅವರನ್ನು ಬೇರ್ಪಡಿಸಬಹುದಾಗಿದೆ ಎಂದು ಉಲ್ಲೇಖಿಸಲಾಗಿದೆ. ಹಾಗಿರುವಾಗ ಖುಲಾದ ವಿಷಯದಲ್ಲಿ ಮಾತ್ರ ಅವರಿಗೆ ಈ ಅಧಿಕಾರ ಏಕಿರಬಾರದು?

ಮುಂದೆ ವಿವರಿಸಲಿರುವ ವಿಷಯಗಳಲ್ಲಿ ಈ ವಾಸ್ತವಿಕತೆಯು ಇನ್ನಷ್ಟು ಸ್ಫುಟವಾಗಲಿದೆ. ನಪುಂಸಕತೆ, ಲಿಂಗ ಹೀನತೆ, ಶಿಖಂಡಿತನ, ಕ್ಷಯ ಮತ್ತು ಕುಷ್ಠರೋಗ ಮತ್ತು ಹುಚ್ಚು ಇರುವ ಪತಿಯಂದಿರ ಬಗ್ಗೆ ಕರ್ಮಶಾಸ್ತ್ರ ಪಂಡಿತರು ವಿವರಿಸಿರುವ ನಿಯಮಗಳಲ್ಲಿರುವಾಗ ಹಾಗೂ ಪ್ರೌಢ ಮಹಿಳೆಯರ ಆಯ್ಕೆ ಅಧಿಕಾರ ಮತ್ತಿತರ ವಿಷಯಗಳಲ್ಲಿ ನಿಶ್ಚಯಿಸಿರುವ ಸಂಶೋಧನಾತ್ಮಕ (ಇಜ್ತಿಹಾದ್) ನಿಯಮಗಳು ಇರುವಾಗ ಪತ್ನಿಯರಿಗೆ ಖುಲಾ ಕೊಡಿಸುವ ಪೂರ್ಣ ಅಧಿಕಾರವು ಕಾಝಿಯವರಿಗೆ ಇರಬೇಕಾದುದು ಅತ್ಯಗತ್ಯವಾಗಿದೆ. ಅನ್ಯಥಾ ಇಂತಹ ಪರಿಸ್ಥಿತಿಯಲ್ಲಿ ಸಿಲುಕಿರುವ ಮಹಿಳೆಯರು ಒಂದೋ ಜೀವನವಿಡೀ ಸಂಕಷ್ಟದ ಬಾಳು ಸಾಗಿಸಬೇಕಾದೀತು, ಆತ್ಮಹತ್ಯೆಗೈಯಬೇಕಾದೀತು ಅಥವಾ ತಮ್ಮ ದೇಹೇಚ್ಛೆಗಳನ್ನು ತಡೆಯಲಾರದೆ ವ್ಯಭಿಚಾರದಲ್ಲಿ ಸಿಲುಕಬೇಕಾದೀತು ಅಥವಾ ಧರ್ಮಭ್ರಷ್ಟರಾಗಿ ವಿವಾಹ ಬಂಧನದಿಂದ ಮುಕ್ತಿ ಪಡೆಯಲು ಪ್ರಯತ್ನಿಸಬೇಕಾದೀತು. ನಮ್ಮ ಉದ್ದೇಶವನ್ನು ಸ್ಪಷ್ಟ ಪಡಿಸುವ ಸಲುವಾಗಿ ಇಲ್ಲಿ ಕೇವಲ ಒಂದು ಉದಾಹರಣೆಯನ್ನು ನೀಡುತ್ತಿದ್ದೇವೆ:

ನಪುಂಸಕತ್ವದ ಬಗ್ಗೆ ಇರುವ ಕರ್ಮಶಾಸ್ತ್ರ ವಿಧಿ ಈ ರೀತಿ ಇದೆ: ಆತನಿಗೆ ಶುಶ್ರೂಷೆಗಾಗಿ ಒಂದು ವರ್ಷದ ಅವಧಿಯನ್ನು ನೀಡಲಾಗುವುದು. ಚಿಕಿತ್ಸೆಯ ಬಳಿಕ ಆತನು ಒಮ್ಮೆಯಾದರೂ ಸಂಸರ್ಗಕ್ಕೆ ಶಕ್ತನಾದರೆ ಮಹಿಳೆಗೆ ವಿವಾಹವನ್ನು ಅಸಿಂಧು(ಫಸ್)ಗೊಳಿಸುವ ಹಕ್ಕು ಇರುವುದಿಲ್ಲ. ಮಾತ್ರವಲ್ಲ ಪತಿಯು ಅಪೂರ್ಣ ಸಂಸರ್ಗ ನಡೆಸಿದಾಗಲೂ ಪತ್ನಿಯ ವಿವಾಹ ಅಸಿಂಧುಗೊಳಿಸುವ ಹಕ್ಕು ಶಾಶ್ವತವಾಗಿ ಕೊನೆಗೊಳ್ಳುತ್ತದೆ. ಒಂದು ವೇಳೆ ಮಹಿಳೆಗೆ ವಿವಾಹದ ಸಮಯದಲ್ಲೇ ಆತನು ನಪುಂಸಕನೆಂದು ತಿಳಿದಿದ್ದರೆ ಆಕೆಗೆ ಆ ವಿಷಯವನ್ನು ಕಾಝಿಯ ಬಳಿ ಒಯ್ಯುವ ಹಕ್ಕೇ ಇರುವುದಿಲ್ಲ. ಒಂದು ವೇಳೆ ವಿವಾಹದ ಬಳಿಕ ಒಮ್ಮೆ ಸಂಸರ್ಗವೇರ್ಪಟ್ಟು ಆ ಬಳಿಕ ಅವನು ನಪುಂಸಕನಾದರೆ ಮಹಿಳೆಗೆ ಆತನ ವಿರುದ್ಧ ದಾವೆ ಹೂಡುವ ಹಕ್ಕು ಇರುವುದಿಲ್ಲ. ಒಂದು ವೇಳೆ ವಿವಾಹದ ನಂತರ ಪತಿಯು ನಪುಂಸಕನೆಂಬುದು ತಿಳಿದು ಬಂದರೂ ಆಕೆ ಅವನ ಜೊತೆ ಇರುವುದನ್ನೇ ಇಷ್ಟ ಪಟ್ಟರೆ ಆಗಲೂ ಆಕೆಗೆ ವಿವಾಹ ಅಸಿಂಧುಗೊಳಿಸಬೇಕೆಂಬ

ದಾವೆ ಹೂಡುವ ಹಕ್ಕು ಉಳಿಯುವುದಿಲ್ಲ. ಇಂತಹ ಪರಿಸ್ಥಿತಿಗಳಲ್ಲಿ ಮಹಿಳೆಗೆ ವಿವಾಹ ಅಸಿಂಧು(ಫಸ್ಖ್)ಗೊಳಿಸುವ ಹಕ್ಕು ಈ ರೀತಿ ನಷ್ಟವಾದರೆ ಆ ಬಳಿಕ ಅಂತಹ ಕೆಲಸಕ್ಕೆ ಬಾರದ ಪತಿಯಿಂದ ವಿಮೋಚನೆ ಹೊಂದಲು ಪತ್ನಿಯ ಬಳಿ ಉಳಿಯುವುದು ಖುಲಾ ಪಡೆಯುವ ವಿಧಾನ ಮಾತ್ರ. ಆದರೆ ಅದು ಆಕೆಗೆ ಸಿಗಲಾರದು. ಪತಿಯಿಂದ ಖುಲಾ ಕೇಳಿದರೆ ಆತ ಪೂರ್ಣ ಮಹ್‌ರ್ ಕೇಳುತ್ತಾನೆ. ಒಮ್ಮೊಮ್ಮೆ ಅದಕ್ಕಿಂತ ಹೆಚ್ಚಿನ ಹಣ ಪಡೆದೂ ಖುಲಾ ನೀಡಲು ಒಪ್ಪುವುದಿಲ್ಲ. ನ್ಯಾಯಾಲಯಕ್ಕೆ ಹೋದರೂ ಅದೂ ಅವನನ್ನು ತಲಾಕ್ ನೀಡುವಂತೆ ಒತ್ತಾಯಿಸಲು ಅಥವಾ ತಾನೇ ವಿವಾಹವನ್ನು ವಿಚ್ಛೇದಿಸಲು ನಿರಾಕರಿಸುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಆ ಬಡಪಾಯಿಯ ಅವಸ್ಥೆ ಏನಾದೀತೆಂಬುದನ್ನು ಸ್ವಲ್ಪ ಊಹಿಸಿನೋಡಿ. ಆಗ ಆಕೆ ಆತ್ಮಹತ್ಯೆ ಮಾಡಿಕೊಳ್ಳಬೇಕು ಅಥವಾ ಕ್ರೈಸ್ತ ಪಾದ್ರಿಗಳಂತೆ ವಿಷಯಾಸಕ್ತಿಗಳನ್ನು ದಮನಿಸಿ ಜೀವಿಸುವ ಯಾತನೆಯನ್ನು ಅನುಭವಿಸಬೇಕು ಅಥವಾ ವಿವಾಹ ಬಂಧನದಲ್ಲಿದ್ದುಕೊಂಡೇ ಅನೈತಿಕ ಸಂಬಂಧಗಳನ್ನು ಬೆಳೆಸಿಕೊಳ್ಳಬೇಕು ಅಥವಾ ಇಸ್ಲಾಮ್ ಧರ್ಮವನ್ನೇ ತೊರೆದು ಬಿಡಬೇಕು. ಆದರೆ ಇಸ್ಲಾಮೀ ಕಾನೂನಿನ ಉದ್ದೇಶವು ಮಹಿಳೆಯನ್ನು ಈ ರೀತಿಯ ಯಾವುದಾದರೂ ಒಂದು ದುಃಸ್ಥಿತಿಯಲ್ಲಿ ಸಿಲುಕಿಸುವುದಾಗಿದೆಯೇ? ಶರೀಅತ್ ವೈವಾಹಿಕ ಕಾನೂನುಗಳನ್ನು ಯಾವ ಉದ್ದೇಶಾರ್ಥ ರಚಿಸಿದೆಯೋ, ಅವು ಇಂತಹ ವಿವಾಹ ಸಂಬಂಧಗಳಿಂದ ಪೂರ್ಣಗೊಳ್ಳುತ್ತವೆಯೇ? ಇಂತಹ ದಂಪತಿಗಳ ಮಧ್ಯೆ ಕರುಣೆ ಮತ್ತು ವಾತ್ಸಲ್ಯಗಳು ಇರಬಹುದೇ? ಅವರು ಪರಸ್ಪರ ಬೆಸೆದು ನಾಗರಿಕತೆಯ ಉಪಯುಕ್ತ ಸೇವೆಗೈಯುವರೇ?ಅವರ ಮನೆಗಳಲ್ಲಿ ಸುಖ ಸಂತೋಷಗಳು ನಲಿದಾಡಲು ಸಾಧ್ಯವೇ? ಈ ವಿವಾಹ ಬಂಧನವು 'ಇಹ್ಸಾನ್' ಆಗುವುದೇ? ಇದರಿಂದ ಧರ್ಮ, ನೀತಿ ಮತ್ತು ಮಾನ ಮರ್ಯಾದೆಗಳ ರಕ್ಷಣೆ ಸಾಧ್ಯವೇ? ಇಲ್ಲವೆಂದಾದರೆ ಓರ್ವ ಅಮಾಯಕ ಮಹಿಳೆಯ ಜೀವನ ಹಾಳು ಮಾಡಿದ ಅಥವಾ ಆಕೆಯನ್ನು ವ್ಯಭಿಚಾರಕ್ಕೆ ನಿರ್ಬಂಧಿಸಿದ ಅಥವಾ ಆಕೆಯನ್ನು ಧರ್ಮಭ್ರಷ್ಟಗೊಳಿಸಿದ ಪಾಪವು ಯಾರ ಮೇಲಿದೆ? ಅಲ್ಲಾಹ್ ಮತ್ತು ಪ್ರವಾದಿ ಈ ವಿಷಯದಲ್ಲಿ ಪೂರ್ಣ ಹೊಣೆ ಮುಕ್ತರು. ಏಕೆಂದರೆ ಅವರು ತಮ್ಮ ಕಾನೂನಿನಲ್ಲಿ ಅಂತಹ ಯಾವ ಕೊರತೆಯನ್ನೂ ಇರಿಸಿಲ್ಲ.

## ಶರೀಅತ್ ನ್ಯಾಯಾಲಯ

ಈ ಹಿಂದೆ ಗತಿಸಿದ ತಲಾಕ್ ಮತ್ತು ಖುಲಾದ ಚರ್ಚೆಯಲ್ಲಿ ಇಸ್ಲಾಮೀ ಕಾನೂನಿನ ಯಾವ ವಿವರಣೆಗಳನ್ನು ನೀಡಲಾಗಿದೆಯೋ ಅವುಗಳಿಂದ ವ್ಯಕ್ತವಾಗುವುದೇನೆಂದರೆ ಈ ಕಾನೂನು ಒಂದು ಸಾಮಾನ್ಯ ನಿಯಮದ ಮೇಲೆ ಅಧಿಷ್ಠಿತವಾಗಿದೆ. ಪತಿ-ಪತ್ನಿಯರ ದಾಂಪತ್ಯ ಸಂಬಂಧ ಮುಂದುವರಿಯುವುದಾದರೆ ಅಲ್ಲಾಹನ ಮೇರೆಗಳನ್ನು ಪಾಲಿಸುತ್ತಾ ಪರಸ್ಪರ ಕರುಣೆ ವಾತ್ಸಲ್ಯಗಳೊಂದಿಗೆ ಜೀವನ ಸಾಗಿಸುತ್ತಾ ಮುಂದುವರಿಯಬೇಕು. ಇದನ್ನು ಪವಿತ್ರ ಕುರ್‌ಆನ್ 'ಇಮ್ಸಾಕ್ ಬಿಲ್ ಮಅರೂಫ್' (ಉತ್ತಮ ರೀತಿಯ ಸಂಬಂಧ) ಎಂಬ ಸಮಗ್ರ ಪದದಲ್ಲಿ ವಿವರಿಸಿದೆ. ಇಂತಹ ಸಂಬಂಧ ಮುಂದುವರಿಯುವುದು ಅಸಾಧ್ಯವೆಂದಾದರೆ

'ತಸ್ರೀಹ್ ಬಿ ಇಹ್ಸಾನ್' (ಉತ್ತಮ ರೀತಿಯ ವಿಚ್ಛೇದನ) ಆಗಬೇಕು. ಅರ್ಥಾತ್ ಯಾವ ಸತಿ-ಪತಿಯರು ಉತ್ತಮ ರೀತಿಯಲ್ಲಿ ಕೂಡಿ ಬಾಳಲಾರರೋ ಅವರು ಉತ್ತಮ ರೀತಿಯಲ್ಲಿ ಪರಸ್ಪರ ಬೇರ್ಪಡಬೇಕು. ದಂಪತಿಗಳ ಪರಸ್ಪರ ಭಿನ್ನತೆಯಿಂದಾಗಿ ಸ್ವತಃ ಅವರ ಜೀವನಗಳಿಗೆ ಹಾನಿಯಾಗುವುದು ಮಾತ್ರವಲ್ಲದೆ, ಅವರ ಕುಟುಂಬಗಳಲ್ಲಿ ಜಗಳ ಸೃಷ್ಟಿಸುವ, ಸಮಾಜದಲ್ಲಿ ಅಶ್ಲೀಲತೆ ವ್ಯಾಪಿಸುವ, ಅನೈತಿಕತೆಯ ಪ್ರಚಾರವಾಗುವ ಮತ್ತು ಮುಂದಿನ ತಲೆಮಾರುಗಳಿಗೆ ಅದರ ದುಷ್ಪರಿಣಾಮಗಳು ತಲುಪುವ ಪರಿಸ್ಥಿತಿಗಳು ಉದ್ಭವವಾಗಬಾರದು. ಈ ಕೆಡುಕುಗಳ ದ್ವಾರವನ್ನು ಮುಚ್ಚುವ ಸಲುವಾಗಿಯೇ ಶರೀಅತ್ ಪುರುಷನಿಗೆ ತಲಾಕ್‌ನ ಮತ್ತು ಸ್ತ್ರೀಗೆ ಖಿಲಾದ ಹಕ್ಕು ನೀಡಿದೆ. ಇಂಥ ಸಂದರ್ಭ ಬಂದಾಗ ಅವರು ಸ್ವಯಂ'ತಸ್ರೀಹ್ ಬಿ ಇಹ್ಸಾನ್' ಅರ್ಥಾತ್ ಉತ್ತಮ ರೀತಿಯಲ್ಲಿ ವಿಚ್ಛೇದನವನ್ನು ಮಾಡಿಕೊಳ್ಳಬೇಕೆಂಬ ಸಲುವಾಗಿಯೇ ಆ ಹಕ್ಕನ್ನು ಸ್ತ್ರೀ ಪುರುಷರಿಗೆ ನೀಡಲಾಗಿದೆ.* ಆದರೆ ಅನೇಕ ಜಗಳ ಗಂಟಿಗಳಿರುತ್ತಾರೆ ಅವರು 'ಇಮ್ಸಾಕ್ ಬಿಲ್ ಮಅರೂಫ್' (ಉತ್ತಮ ರೀತಿಯಲ್ಲಿ ಸಂಬಂಧ ಪುನಃ ಸ್ಥಾಪನೆ)ಗಾಗಲೀ 'ತಸ್ರೀಹ್ ಬಿ ಇಹ್ಸಾನ್' (ಉತ್ತಮ ರೀತಿಯ ಬೇರ್ಪಡೆ)ಗಾಗಲೀ ಸಿದ್ಧರಾಗಿರುವುದಿಲ್ಲ. ಇದಲ್ಲದೆ ಅನೇಕ ದಾಂಪತ್ಯ ಸಂಬಂಧಗಳಲ್ಲಿ ಪರಸ್ಪರ ಹಕ್ಕು ಬಾಧ್ಯತೆಗಳ ಬಗ್ಗೆ ಭಿನ್ನಾಭಿಪ್ರಾಯಗಳು ಮೂಡುತ್ತವೆ ಅಥವಾ ಉತ್ತಮ ಸಂಬಂಧದ ಪುನಃಸ್ಥಾಪನೆ ಮಾಡಲಿಕ್ಕಾಗಲೀ ಉತ್ತಮ ರೀತಿಯ ವಿಚ್ಛೇದನ ಮಾಡಲಿಕ್ಕಾಗಲೀ ಸಾಧ್ಯವಿಲ್ಲದಂತಹ ಸನ್ನಿವೇಶಗಳಿರುತ್ತವೆ. ಆದ್ದರಿಂದಲೇ ಶರೀಅತ್ ತಲಾಕ್ ಮತ್ತು ಖಿಲಾಕ್ಕೆ ಹೊರತಾಗಿ ಒಂದು ಮೂರನೇ ವಿಧಾನವನ್ನೂ ನಿಶ್ಚಯಿಸಿದೆ. ಹಕ್ಕುಗಳ ಇತ್ಯರ್ಥ ಮತ್ತು ದೇವ ಮೇರೆಗಳ ರಕ್ಷಣೆಗಾಗಿ ನಿಶ್ಚಯಿಸಲ್ಪಟ್ಟಿರುವ ಈ ವಿಧಾನಕ್ಕೆ ಶರೀಅತ್ ನ್ಯಾಯಾಲಯವೆಂದು ಹೆಸರು.

* ಇಲ್ಲಿ ಪತಿ-ಪತ್ನಿಯರ ಪರಸ್ಪರ ಜಗಳವನ್ನು ಬಹಿರಂಗವಾಗಿ ಕೋರ್ಟು ಕಛೇರಿಗಳಿಗೆ ಒಯ್ಯುವುದನ್ನು ಇಸ್ಲಾಮೀ ಶರೀಅತ್ ಇಷ್ಟ ಪಡುವುದಿಲ್ಲವೆಂಬುದನ್ನು ತಿಳಿದಿರಬೇಕಾದುದು ಅಗತ್ಯ. ಆದ್ದರಿಂದಲೇ ಅವರು ಸಾಧ್ಯವಿರುವಷ್ಟು ತಮ್ಮ ಜಗಳಗಳನ್ನು ಮನೆಯ ನಾಲ್ಕು ಗೋಡೆಗಳೊಳಗೇ ಇತ್ಯರ್ಥಪಡಿಸಿಕೊಳ್ಳುವಂತೆ ಸತಿ-ಪತಿಯರಿಬ್ಬರಿಗೂ ಕಾನೂನುಬದ್ಧ ಹಕ್ಕುಗಳನ್ನು ನೀಡಲಾಗಿದೆ. ನ್ಯಾಯಾಲಯದ ಕದ ತಟ್ಟುವುದು ಕೊನೆಯ ಉಪಾಯವಾಗಿದೆ. ಮನೆಯೊಳಗೆ ಜಗಳ ಇತ್ಯರ್ಥ ಮಾಡಿಕೊಳ್ಳುವ ಯಾವ ಸಾಧ್ಯತೆಯೂ ಇಲ್ಲದಾಗ ಮಾತ್ರ ಆ ಉಪಾಯವನ್ನು ಕೈಗೊಳ್ಳಬೇಕು.

# ಶರೀಅತ್ ನ್ಯಾಯಾಲಯದ ಕುರಿತು ಕೆಲವು ತಾತ್ವಿಕ ಚರ್ಚೆಗಳು

ಶರೀಅತ್ ನ್ಯಾಯಾಲಯಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ವಿವರಿಸುವ ಮೊದಲು ಕೆಲವು ತಾತ್ವಿಕ ವಿಷಯಗಳ ಚರ್ಚೆ ಮಾಡುವುದು ಅಗತ್ಯವೆನಿಸುತ್ತದೆ.

## ಶರೀಅತ್ ನ್ಯಾಯಾಲಯದ ಪ್ರಥಮ ನಿಬಂಧನೆ:

ಶರೀಅತ್ ನ್ಯಾಯಾಲಯದ ಬಗೆಗಿರುವ ನಿಬಂಧನೆಗಳಲ್ಲಿ ಪ್ರಥಮ ನಿಬಂಧನೆಯೇನೆಂದರೆ ನ್ಯಾಯಾಲಯವು ಒಂದು ಇಸ್ಲಾಮೀ ನ್ಯಾಯಾಲಯವಾಗಿರಬೇಕು ಮತ್ತು ನ್ಯಾಯಾಧೀಶರು ಓರ್ವ ಮುಸ್ಲಿಮ್ ಆಗಿರಬೇಕು. ಇದಕ್ಕೆ ಒಂದು ಕಾರಣವನ್ನು ಕರ್ಮಶಾಸ್ತ್ರ ಪಂಡಿತರು ಸ್ಪಷ್ಟವಾಗಿ ನೀಡಿದ್ದಾರೆ. ಅದೇನೆಂದರೆ ಶರೀಅತ್ ತತ್ವಗಳ ಮೇರೆಗೆ ಶರೀಅತ್‌ಗೆ ಸಂಬಂಧಿಸಿದ ವಿಷಯಗಳಲ್ಲಿ ಓರ್ವ ಮುಸ್ಲಿಮೇತರ ನ್ಯಾಯಾಧೀಶನ ವಿಧಿಯು ಬಾಹ್ಯ ರೂಪದಲ್ಲಿ ಮುಸ್ಲಿಮರ ಮೇಲೆ ಜಾರಿಗೊಂಡರೂ ವಾಸ್ತವದಲ್ಲಿ ಅದು ಜಾರಿಗೊಳ್ಳುವುದಿಲ್ಲ. ಉದಾ: ಒಬ್ಬ ಮುಸಲ್ಮಾನನ ನಿಕಾಹನ್ನು ಅಸಿಂಧುಗೊಳಿಸುವ ಆಜ್ಞೆಯನ್ನು ಓರ್ವ ಮುಸ್ಲಿಮೇತರ ನ್ಯಾಯಾಧೀಶನು ವಿಧಿಸಿದರೆ ಆ ಆಜ್ಞೆಯು ಶರೀಅತ್ ನಿಯಮಗಳಿಗೆ ಬದ್ಧವಾಗಿದ್ದಾಗ್ಯೂ, ದಂಪತಿಗಳು ಪರಸ್ಪರ ಬೇರ್ಪಟ್ಟರೂ ವಾಸ್ತವದಲ್ಲಿ ಓರ್ವ ಅಮುಸ್ಲಿಮನು ಅಸಿಂಧುಗೊಳಿಸುವುದರಿಂದ ನಿಕಾಹ್ ಅಸಿಂಧುವಾಗುವುದಿಲ್ಲ. ಹಾಗೆಯೇ ಮಹಿಳೆಗೆ ಇನ್ನೊಬ್ಬರ ಜೊತೆ ನಿಕಾಹ್ ಮಾಡಿಕೊಳ್ಳುವುದೂ ಧರ್ಮಸಮ್ಮತವೆನಿಸುವುದಿಲ್ಲ. ಆಕೆ ವಿವಾಹ ಮಾಡಿಕೊಂಡರೆ ಅದು ಅಸಿಂಧುವಾಗುತ್ತದೆ. ಆ ವಿವಾಹದಿಂದ ಹುಟ್ಟುವ ಮಕ್ಕಳು ಕಾನೂನು ಬಾಹಿರವೆನಿಸುವರು. ಇನ್ನೊಂದು ಕಾರಣವೇನೆಂದರೆ: ಒಂದು ಇಸ್ಲಾಮೇತರ ನ್ಯಾಯಾಲಯದ ತೀರ್ಮಾನವನ್ನು ಪವಿತ್ರ ಕುರ್‌ಆನ್ ತಾತ್ವಿಕವಾಗಿಯೇ ಒಪ್ಪುವುದಿಲ್ಲ. ಇನ್ನು ವಿಶೇಷವಾಗಿ ಮುಸಲ್ಮಾನರ ವ್ಯಾಜ್ಯಗಳಲ್ಲಂತೂ ವಿಶೇಷವಾಗಿ ಇಸ್ಲಾಮೇತರ ನ್ಯಾಯಾಲಯದ ವಿಧಿಯು ಅಲ್ಲಾಹನ ಬಳಿ ಸ್ವೀಕಾರಾರ್ಹವಲ್ಲ ಎಂಬುದು ಕುರ್‌ಆನಿನ ಖಚಿತ ನಿಲುಮೆಯಾಗಿದೆ. ಈ ವಿಷಯವನ್ನು ನಾನು 'ಒಂದು ಅತ್ಯಂತ ಪ್ರಮುಖ ಧರ್ಮವಿಧಿ' ಎಂಬ ಲೇಖನದಲ್ಲಿ ಸ್ಪಷ್ಟ ಪಡಿಸಿದ್ದೇನೆ. ಆ ಲೇಖನವನ್ನು ಈ ಪುಸ್ತಕದ ಕೊನೆಯಲ್ಲಿ ಒಂದು ಅನುಬಂಧ ರೂಪದಲ್ಲಿ ಕೊಡಲಾಗಿದೆ.

## ನ್ಯಾಯಾಧೀಶ ಸ್ಥಾನಕ್ಕೆ ಇಜ್ತಿಹಾದ್‌ನ ಅವಶ್ಯಕತೆ:

ಯಾವ ವಿಷಯಗಳನ್ನು ನ್ಯಾಯಾಧೀಶರ ತೀರ್ಮಾನಕ್ಕೆ ಬಿಡಲಾಗಿದೆಯೋ ಅವುಗಳ ಬಗ್ಗೆ ಶರೀಅತ್‌ನಲ್ಲಿ ವಿವರವಾದ ಕಾನೂನು ವಿಧಿಗಳು ಇವೆ. ಆದರೆ ವೈಯಕ್ತಿಕ ವಿಷಯಗಳಲ್ಲಿ ಈ ಕಾನೂನು ವಿಧಿಗಳ ಸರಿಯಾದ ನಿಷ್ಕರ್ಷೆ ಮತ್ತು ಜಾರಿಗಾಗಿ ಸಂದರ್ಭಾನುಸಾರ ವಿಶದಾಂಶಗಳ ಅನ್ವೇಷಣೆ ಮಾಡಬೇಕು. ಈ ರೀತಿ ಕಾನೂನಿನ ಸ್ಫೂರ್ತಿಗನುಸಾರ ವಿವಾದಗಳು ಇತ್ಯರ್ಥವಾಗಬೇಕಾದರೆ ನ್ಯಾಯಾಧೀಶರಲ್ಲಿ ಇಜ್ತಿಹಾದ್‌ನ ಶಕ್ತಿ ಇರಬೇಕಾದುದು ಮತ್ತು ಯಾವ ಕಾನೂನನ್ನು ಜಾರಿಗೊಳಿಸಲು ಅವನು ನ್ಯಾಯಾಧೀಶರ ಪೀಠವನ್ನು ಅಲಂಕರಿಸಿರುವನೋ ಆ ಕಾನೂನಿನ ಬಗ್ಗೆ ಶ್ರದ್ಧೆ ಮತ್ತು ಗೌರವ ಅವನ ಮನದಲ್ಲಿ ಇರಬೇಕಾದುದು ಅತ್ಯಗತ್ಯ. ಈ ಶ್ರದ್ಧೆ ಮತ್ತು ಗೌರವ ವಾಸ್ತವದಲ್ಲಿ ಓರ್ವ ಮುಸಲ್ಮಾನನ ಮನದಲ್ಲಿ ಮಾತ್ರ ಇರಲು ಸಾಧ್ಯ. ಶ್ರದ್ಧಾಪೂರ್ವಕವಾಗಿ ಮುಸ್ಲಿಮನಾಗಿರುವ, ಇಸ್ಲಾಮೀ ಕಾನೂನಿನ ಮೂಲ ತತ್ವಗಳಿಗೂ ಅದರ ವಿಶದಾಂಶಗಳನ್ನೂ ಪೂರ್ಣವಾಗಿ ಗ್ರಹಿಸಿರುವ, ಅದರ ಸ್ಫೂರ್ತಿಯನ್ನು ಚೆನ್ನಾಗಿ ಅರಿತಿರುವ ಅದರ ಮೂಲ ಗ್ರಂಥಗಳ ಬಗ್ಗೆ ಸಾಕಷ್ಟು ಜ್ಞಾನವಿರುವ ಮತ್ತು ಮುಸ್ಲಿಮ್ ಸಮಾಜದ ಸಂಘಟನಾ ಸ್ವರೂಪವನ್ನು ಒಳಗಿನಿಂದಲೇ ಸರಿಯಾಗಿ ಅರಿತಿರುವ ವ್ಯಕ್ತಿಯಲ್ಲಿ ಮಾತ್ರ ಪ್ರಸ್ತುತ ಎರಡೂ ಗುಣ ವಿಶೇಷತೆಗಳು ಇರಲು ಸಾಧ್ಯ. ಅತ್ತ ಒಬ್ಬ ಮುಸ್ಲಿಮೇತರ ನ್ಯಾಯಾಧೀಶನಲ್ಲಿ ಈ ಗುಣಗಳು ಇರುವುದು ತೀರಾ ಅಸಾಧ್ಯ. ಆದ್ದರಿಂದ ಆತ ಮುಸಲ್ಮಾನರ ಶರೀಅತ್ ವ್ಯವಹಾರಗಳ ಕುರಿತು ಸರಿಯಾದ ತೀರ್ಪು ನೀಡುವನೆಂದು ನಿರೀಕ್ಷಿಸುವಂತಿಲ್ಲ.

# ಭಾರತದಲ್ಲಿ ಶರೀಅತ್ ನ್ಯಾಯಾಲಯದ ಕೊರತೆಯಿಂದಾಗುವ ನಷ್ಟಗಳು

ಭಾರತದಲ್ಲಿ* ಬ್ರಿಟಿಷ್ ಸರಕಾರ ಸ್ಥಾಪನೆಗೊಂಡ ಬಳಿಕವೂ 1864ರವರೆಗೆ ಮುಸಲ್ಮಾನರ ಶರೀಅತ್ ವ್ಯವಹಾರಗಳನ್ನೆಲ್ಲಾ ಮುಸ್ಲಿಮ್ ನ್ಯಾಯಾಧೀಶರೇ ಇತ್ಯರ್ಥ ಮಾಡುತ್ತಿದ್ದರು. ಈ ನ್ಯಾಯಾಧೀಶರನ್ನು ಉಲಮಾಗಳಿಂದ ಆಯ್ಕೆ ಮಾಡಲಾಗುತ್ತಿತ್ತು. ಆದರೆ ಆ ಬಳಿಕ ಶರೀಅತ್ ನ್ಯಾಯಾಲಯವನ್ನು ರದ್ದುಗೊಳಿಸಲಾಯಿತು ಮತ್ತು ಇತರ ಸಿವಿಲ್ ವ್ಯಾಜ್ಯಗಳಂತೆ ಶರೀಅತ್ ವ್ಯಾಜ್ಯಗಳನ್ನೂ ಬ್ರಿಟಿಷ್ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಗೆ ಒಳಪಡಿಸಲಾಯಿತು. ಇದರಿಂದ ಪ್ರಥಮವಾಗಿ ಉಂಟಾದ ನಷ್ಟವೇನೆಂದರೆ, ಶರೀಅತ್ ನಿಯಮದಂತೆ ಯಾವೆಲ್ಲ ವಿಷಯಗಳ ಮೇಲೆ ಶರೀಅತ್ ನ್ಯಾಯಾಲಯದ ವ್ಯಾಪ್ತಿ ಇತ್ತೋ ಅವೆಲ್ಲ ಸಂಪೂರ್ಣವಾಗಿ ಅನೂರ್ಜಿತಗೊಂಡವು. ಮುಸಲ್ಮಾನರಿಗೆ ತಮ್ಮ ಶರೀಅತ್ ವ್ಯವಹಾರಗಳಲ್ಲಿ ನ್ಯಾಯಾಲಯಗಳಿಂದ ತಮ್ಮ ಧರ್ಮದ ಪ್ರಕಾರ ಧರ್ಮಸಮ್ಮತ ಶರೀಅತ್ ತೀರ್ಪು ಎಂದು ಕರೆಯಬಹುದಾದಂತಹ ತೀರ್ಪುಗಳನ್ನು ಪಡೆಯುವುದು ಅಸಾಧ್ಯವಾಗಿ ಬಿಟ್ಟಿತು. ಇನ್ನು ಇದರಿಂದಾದ ಎರಡನೇ ನಷ್ಟವೂ ಪ್ರಥಮ ನಷ್ಟದಷ್ಟೇ ಪ್ರಾಮುಖ್ಯವಾಗಿದೆ. ಈ ನ್ಯಾಯಾಲಯಗಳ ಅಧಿಕಾರಿಗಳ ಬಳಿ, ಅವರೊಳಗೆ ಸರಿಯಾದ ಇಜ್ತಿಹಾದ್‌ನ ಸಾಮರ್ಥ್ಯವನ್ನು ಬೆಳೆಸುವ ರೀತಿಯಲ್ಲಿ ಅವರಿಗೆ ಇಸ್ಲಾಮೀ ಕಾನೂನಿನ ತತ್ವಗಳ ಮತ್ತು ವಿಶದಾಂಶಗಳ ಸಾಕಷ್ಟು ಜ್ಞಾನವನ್ನೊದಗಿಸಬಲ್ಲ ಯಾವ ಮೂಲಗಳೂ ಲಭ್ಯವಿರಲಿಲ್ಲ. ಅಂತೆಯೇ ಕಾನೂನಿನ ಬಗ್ಗೆ ಗೌರವಭಾವವೂ ಅವರಿಗಿರಲಿಲ್ಲ. ಆದ್ದರಿಂದ ಅದರ ಸೀಮೆಗಳನ್ನು ಉಲ್ಲಂಘಿಸುವಲ್ಲಿ ಅವರಿಗೆ ಯಾವ ರೀತಿಯ ಸಂಕೋಚವೂ ಇರಲಿಲ್ಲ. ಅರಬೀ ಭಾಷೆಯ ಜ್ಞಾನವೇ ಇಲ್ಲದ ಲೇಖಕರಿಂದ ಬರೆಯಲ್ಪಟ್ಟ ಪುಸ್ತಕಗಳೇ ಅವರ ಜ್ಞಾನಕ್ಕೆ ಮೂಲಾಧಾರ.

ಉದಾಹರಣೆಗೆ ಹೇಮಿಲ್ಟನ್ (Hamilton) ಅವರು ಫಾರ್ಸಿ ಭಾಷೆಯ ವ್ಯಾಖ್ಯಾನಗ್ರಂಥ (ಶರಹ್) ನೆರವಿನಿಂದ, 'ಹಿದಾಯಾ'ದ ಅನುವಾದ ಮಾಡಿದರು. ವಾಸ್ತವದಲ್ಲಿ ಆ ಬಡಪಾಯಿಗೆ

* ಇಲ್ಲಿ ಒಂದು ಮಾತನ್ನು ನಾನು ಮತ್ತೊಮ್ಮೆ ಸ್ಪಷ್ಟ ಪಡಿಸಬಯಸುತ್ತೇನೆ. ಇಸ್ಲಾಮೇತರ ಸರಕಾರದ ಆಜ್ಞೆಯ ಮೇರೆಗೆ ಸ್ಥಾಪನೆಗೊಂಡ ಶರೀಅತ್ ನ್ಯಾಯಾಲಯವನ್ನು ನಾನು ತಾತ್ವಿಕವಾಗಿ ಅನುಮೋದಿಸುವುದಿಲ್ಲ. ಆದರೂ ಇಲ್ಲಿ ಸದ್ಯದ ಅಧಃಪತನದ ಸ್ಥಿತಿಯಲ್ಲಿ ಭಾರತೀಯ ಮುಸಲ್ಮಾನರಿಗಾಗಿ ಮುಂದೆ ಒಂದು ಇಸ್ಲಾಮೀ ಸರಕಾರ ಸ್ಥಾಪನೆಗೊಳ್ಳುವವರೆಗೆ ಅವರು ಶರೀಅತ್ ವ್ಯವಹಾರಗಳಲ್ಲಿ ಕಡೆಯ ಪಕ್ಷ ಸ್ವೀಕರಿಸಬಹುದಾದ ಒಂದು ವ್ಯವಸ್ಥೆಯ ಕುರಿತು ವಿವರಿಸ ಬಯಸಿದ್ದೇನೆ.

'ಹಿದಾಯಾ'ವನ್ನು ಗ್ರಹಿಸುವ ಶಕ್ತಿಯೇ ಇರಲಿಲ್ಲ. ಕರ್ಮಶಾಸ್ತ್ರದ ಸಾಮಾನ್ಯ ಪಾರಿಭಾಷಿಕಗಳ ವಿಷಯದಲ್ಲೂ ಅವರು ಆ ಪುಸ್ತಕದ ಅನೇಕ ಕಡೆಗಳಲ್ಲಿ ಎಡವಿ ಬಿದ್ದಿದ್ದು, ಮೂಲ ಗ್ರಂಥವನ್ನು ನೋಡದೆ ಹೇಮಿಲ್ಟನ್‌ರ ಉಲ್ಲೇಖಗಳು ಅರ್ಥವಾಗುವುದಿಲ್ಲ. ಬೇಲಿ(Baillie) ಯವರು Digest of MUhammadan Law ಬರೆದಿರುವರು. ಅದು'ಫತಾವಾಆಲಮ್‌ಗೀರಿ'ಯ ಉದ್ಧರಣೆಗಳ ಅನುವಾದದಿಂದ ಕ್ರೋಢೀಕರಿಸಲ್ಪಟ್ಟಿದೆ. ಮೇಕ್ನಾಟನ್ (Machaughton)ರವರ ಗ್ರಂಥ ವಾದ Principles of Muhammadan Law ತೀರಾ ದೋಷಪೂರ್ಣ ಮಾಹಿತಿಗಳು ಮತ್ತು ಅಪೂರ್ಣ ಜ್ಞಾನದೊಂದಿಗೆ ಬರೆಯಲ್ಪಟ್ಟಿದೆ. ಸ್ವಯಂ ಬ್ರಿಟಿಷ್ ನ್ಯಾಯಾಲಯಗಳು ತಮ್ಮ ಈ ತಿಳುವಳಿಕೆಯ ಕೊರತೆಯನ್ನು ಅಂಗೀಕರಿಸುತ್ತವೆ. ಜಸ್ಟಿಸ್ ಮಾರ್ಬಿಯವರು ಒಂದು ಮೊಕದ್ದಮೆಯ ತೀರ್ಪಿನಲ್ಲಿ ಈ ರೀತಿ ಬರೆದಿರುವರು:

"ಇಸ್ಲಾಮೀ ಶರೀಅತ್‌ಅನ್ನು ತಿಳಿಯಲು ನ್ಯಾಯಾಲಯಕ್ಕೆ ಪ್ರಾಪ್ತವಿರುವ ಮಾಧ್ಯಮಗಳು ತೀರಾ ಸೀಮಿತವಾಗಿವೆ. ಆದ್ದರಿಂದ ಅದಕ್ಕೆ ಸಂಬಂಧಪಟ್ಟ ಸಮಸ್ಯೆಗಳ ಇತ್ಯರ್ಥದಿಂದ ಪಾರಾಗುವ ಯಾವ ವಿಧಾನವನ್ನು ಅನುಸರಿಸಲಿಕ್ಕೂ ನಾನು ಸಂತೋಷದಿಂದ ಸಿದ್ಧನಿರುವೆನು.*"

ಆದರೆ ಈ ಸೀಮಿತ ಮಾಹಿತಿಗಳನ್ನು ಹೊಂದಿರುತ್ತಲೇ ಇಸ್ಲಾಮೀ ಕಾನೂನಿನಲ್ಲಿ ಇಜ್ತಿಹಾದ್ ಮಾಡುವಂತಹ ಧೈರ್ಯವನ್ನು ಈ ನ್ಯಾಯಾಲಯಗಳು ತೋರಿವೆ. ಆ ಕಾನೂನಿನ ಸೀಮೆಗಳನ್ನು ಉಲ್ಲಂಘಿಸುವುದಕ್ಕೂ ಅವುಗಳಿಗೆ ಯಾವ ಸಂಕೋಚವೂ ಇರುವುದಿಲ್ಲ. ಏಕೆಂದರೆ ಆ ಕಾನೂನನ್ನು ಗೌರವಿಸಬೇಕೆಂಬುದು ಅವರ ವಿಶ್ವಾಸ ಶ್ರದ್ಧೆಯ ಭಾಗವಲ್ಲ, ಮಾತ್ರವಲ್ಲ ಪ್ರಚಲಿತ ಸರಕಾರದ ನ್ಯಾಯಾಂಗದ ವತಿಯಿಂದ, ಆ ಕಾನೂನಿನ ಮೇರೆಗಳನ್ನು ಮೀರಬಾರದೆಂಬ ಆದೇಶವೂ ಅವರಿಗೆ ಇಲ್ಲ. ಒಂದು ಮೊಕದ್ದಮೆಯ** ತೀರ್ಪಿನಲ್ಲಿ ಮುಖ್ಯ ನ್ಯಾಯಾಧೀಶರಾದ ಗಾರ್ಥ್ ಅವರು ಬರೆದಿರುವ ವಿಷಯಗಳು ಆ ನ್ಯಾಯಾಲಯಗಳ ಶರೀಅದ ನೆಲೆಯನ್ನು ಸ್ಪಷ್ಟಪಡಿಸಲು ಪರ್ಯಾಪ್ತವಾಗಿವೆ;

"ನಮ್ಮ ಗಮನಕ್ಕೆ ತರಲಾಗಿರುವ ಮತ್ತು ಹಳೆಯ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟಿರುವ ಇಸ್ಲಾಮೀ ಕಾನೂನು ಅನೇಕ ಶತಮಾನಗಳ ಹಿಂದೆ ಬಾಗ್ದಾದ್ ಮತ್ತಿತರ ಇಸ್ಲಾಮೀ ರಾಷ್ಟ್ರಗಳಲ್ಲಿ ಜಾರಿಯಲ್ಲಿತ್ತು. ಅಲ್ಲಿಯ ಶಾಸನಾತ್ಮಕ ಮತ್ತು ನಾಗರಿಕ ಪರಿಸ್ಥಿತಿಯು ಹಿಂದುಸ್ಥಾನದ ಪರಿಸ್ಥಿತಿಗಿಂತ ತೀರಾ ಭಿನ್ನವಾಗಿತ್ತು. ಮುಸಲ್ಮಾನರ ಮಧ್ಯೆ ಇರುವ ಮೊಕದ್ದಮೆಗಳನ್ನು ನಾವು ಸಾಧ್ಯವಿದ್ದಷ್ಟು ಇಸ್ಲಾಮೀ ಶರೀಅತ್‌ನ ವಿಧಿಗಳಂತೆ ಇತ್ಯರ್ಥಗೊಳಿಸಲು ಪ್ರಯತ್ನಿಸುತ್ತೇವೆ. ಆದರೆ ಪ್ರಥಮತಃ ಆ ವಿಧಿಗಳೇನೆಂಬುದನ್ನು ತಿಳಿಯುವುದೇ ನಮಗೆ ಕಷ್ಟಕರವಾಗಿದೆ. ದೊಡ್ಡ ದೊಡ್ಡ ಕರ್ಮಶಾಸ್ತ್ರಜ್ಞರಾದ ಇಮಾಮ್ ಅಬೂಹನೀಫ ಮತ್ತವರ ಶಿಷ್ಯರ ಮಧ್ಯೆ ಇರುವ ಅನೇಕ ಭಿನ್ನಾಭಿಪ್ರಾಯಗಳ ಬಗ್ಗೆ ಯಾವುದೇ ಒಂದು ತೀರ್ಮಾನಕ್ಕೆ ಬರುವುದು ನಮಗೆ ಕಷ್ಟ ಸಾಧ್ಯವಾಗಿದೆ. ಆದ್ದರಿಂದ ಸಾಧ್ಯವಿರುವಷ್ಟು ಮಟ್ಟಿಗೆ ಪ್ರತಿಯೊಂದು ವಿಧಿಯ ಹಿಂದಿರುವ

* ಖ್ವಾಜಾ ಹುಸೈನ್ V/S ಶಹಝಾದಿ ಬೇಗಮ್

** ಮಲಿಕ್ ಅಬ್ದುಲ್ ಗಫೂರ್ V/S ಮಲೀಕಾ

ತತ್ವಗಳನ್ನು ತಿಳಿಯುವ ಪ್ರಯತ್ನವನ್ನು ನಾವು ಮಾಡಬೇಕಾಗಿದೆ. ತರುವಾಯ ನಿಯಮಗಳು, ನ್ಯಾಯ, ಸದುದ್ದೇಶ ಹಾಗೂ ಇತರ ರಾಷ್ಟ್ರೀಯ ಕಾನೂನುಗಳು ಮತ್ತು ನಾಗರಿಕರ ಪರಿಸ್ಥಿತಿಗನುಗುಣವಾಗಿ ಅದನ್ನು ಜಾರಿಗೊಳಿಸಬೇಕಾಗಿದೆ.

ಈ ಉಲ್ಲೇಖದಿಂದ ವ್ಯಕ್ತವಾಗುವುದೇನೆಂದರೆ, ಓರ್ವ ನ್ಯಾಯಾಧೀಶರು ಇಸ್ಲಾಮೀ ಕಾನೂನಿನ ಬಗ್ಗೆ ತಮ್ಮ ಅಜ್ಞಾನವನ್ನು ಒಪ್ಪಿಕೊಂಡಿರುವುದು ಮಾತ್ರವಲ್ಲದೆ ಕರ್ಮಶಾಸ್ತ್ರ ಪಂಡಿತರ ಮಧ್ಯೆ ಇರುವ ಭಿನ್ನಾಭಿಪ್ರಾಯಗಳಲ್ಲಿ ಸಮನ್ವಯ ಏರ್ಪಡಿಸುವ ಬಗ್ಗೆ ತಮ್ಮ ಅನರ್ಹತೆಯನ್ನು ತೋರಿಕೊಂಡಿದ್ದಾರೆ. ಆದರೂ ಅವರು ಈ ತಮ್ಮ ಅಲ್ಪ ಜ್ಞಾನದೊಂದಿಗೆ ಇಸ್ಲಾಮೀ ಕಾನೂನಿನಲ್ಲಿ ಇಜ್ತಿಹಾದ್ ನಡೆಸುವುದನ್ನು ಸರಿಯೆಂದು ಬಹಿರಂಗವಾಗಿ ಸಾರುತ್ತಾರೆ. ಅಲ್ಲದೆ ಯಾವುದಾದರೂ ಮೊಕದ್ದಮೆಯಲ್ಲಿ ಮುಸಲ್ಮಾನರ ಮೇಲೆ ಇಸ್ಲಾಮೀ ಕಾನೂನನ್ನು ಜಾರಿಗೊಳಿಸುವ ಕೇವಲ ಆ ಕಾನೂನಿನ ಸೀಮೆಯೊಳಗೆ ಇರಬೇಕೆಂಬ ನಿರ್ಬಂಧವೇನೂ ತನ್ನ ಮೇಲಿಲ್ಲವೆಂದೂ ಇತರ ರಾಷ್ಟ್ರೀಯ ಕಾನೂನುಗಳು, ನಾಗರಿಕ ಪರಿಸ್ಥಿತಿ ಮತ್ತು ನ್ಯಾಯಾಶಾಸ್ತ್ರ ನಿಯಮಗಳ ಬಗ್ಗೆ ತಮ್ಮ ಸಿದ್ಧಾಂತಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾದುದು ಅವಶ್ಯಕವೆಂದು ಸಾರಲಿಕ್ಕೂ ಅವರು ಹಿಂಜರಿಯುವುದಿಲ್ಲ. ಈ ರೀತಿ ಸತ್ಯವಿಶ್ವಾಸ ಮತ್ತು ಜ್ಞಾನವಿಲ್ಲದೆ ಇಜ್ತಿಹಾದ್ ನಡೆಸಿದ್ದರ ಪರಿಣಾಮವಾಗಿಯೇ ಇಂದು ಅಪೂರ್ಣವೂ ಅಪಕ್ವವೂ ಆದ ಒಂದು ಕಾನೂನು 'ಮುಹಮ್ಮಡನ್ ಲಾ' ಎಂಬ ಹೆಸರಲ್ಲಿ ನಮ್ಮ ದೇಶದ ನ್ಯಾಯಾಲಯಗಳಲ್ಲಿ ರೂಢಿಯಲ್ಲಿದೆ. ಅದನ್ನು ಕೂಡಾ ನಮ್ಮ ಶರೀಅತ್ ವ್ಯವಹಾರಗಳಲ್ಲಿ ಸರಿಯಾಗಿ ಜಾರಿಗೊಳಿಸಲಾಗುವುದಿಲ್ಲ. ನ್ಯಾಯಾಲಯದ ತೀರ್ಪುಗಳಿಂದ ಅದರ ರೂಪವು ದಿನದಿಂದ ದಿನಕ್ಕೆ ವಿರೂಪಗೊಳ್ಳುತ್ತಿದೆ.

## ಸುಧಾರಣೆ ಪ್ರಥಮ ಹೆಜ್ಜೆ

ಸದ್ಯ ನಿಕಾಹ್, ತಲಾಕ್ ಮತ್ತಿತರ ಶರೀಅತ್ ವ್ಯವಹಾರಗಳಲ್ಲಿ ಸರಿಯಾದ ತೀರ್ಪುಗಳನ್ನು ಪಡೆಯಲು ಈಗ ಸಾಧ್ಯವಿರುವ ಕನಿಷ್ಠ ಉಪಾಯವೇನೆಂದರೆ, ಮುಸಲ್ಮಾನರಿಗೆ ಈ ದೇಶದಲ್ಲಿ ಸಾಂಸ್ಕೃತಿ ಸ್ವಾಯತ್ತತೆ (Cultural Autonomy) ಸಿಗಬೇಕು* ಮತ್ತು ಅದರ ಅಧೀನದಲ್ಲಿ ಮುಸಲ್ಮಾನರಿಗೆ ತಮ್ಮ ವಿವಾದಗಳ ಇತ್ಯರ್ಥಕ್ಕಾಗಿ ತಮ್ಮದೇ ಆದ ನ್ಯಾಯ ತೀರ್ಮಾನ ವ್ಯವಸ್ಥೆಯನ್ನು ಸ್ಥಾಪಿಸಲು ಅಧಿಕಾರವಿರಬೇಕು. ಆ ಇಲಾಖೆಯಲ್ಲಿ ಶರೀಅತ್ ಕಾನೂನಿನ ಬಗ್ಗೆ ಗಹನವಾದ ಜ್ಞಾನವಿರುವ ಧರ್ಮನಿಷ್ಠ ಉಲೆಮಾಗಳನ್ನು ಕಾಝಿ (ನ್ಯಾಯಾಧೀಶ) ಆಗಿ ನೇಮಕ ಮಾಡಬೇಕು. ಇದು ಮುಸಲ್ಮಾನರ ಪಾಲಿಗೆ ಎಂತಹ ಒಂದು ಅನಿವಾರ್ಯ ಅಗತ್ಯವಾಗಿದೆಯೆಂದರೆ, ಇದರ ಹೊರತು ಮುಸಲ್ಮಾನರಿಗೆ ಇಲ್ಲಿ ಮುಸಲ್ಮಾನರಾಗಿ ಜೀವ ಸಾಗಿಸುವುದೇ ಅಸಾಧ್ಯವಾದೀತು. ಈ ಸ್ವಾಯತ್ತತೆಯು ಮುಸಲ್ಮಾನರಿಗೆ ಲಭಿಸದೆ ಹೋದರೆ ಕೊನೆಯ ದರ್ಜೆಯಲ್ಲಿ ಅತ್ಯಂತ ನಿರ್ಬಂಧಿತ ಅವಸ್ಥೆಯಲ್ಲಿ ಅನುಸರಿಸಬಹುದಾದ ಕನಿಷ್ಠ

* ಈ ವಿಷಯದ ಬಗ್ಗೆ ವಿವರವಾದ ಚರ್ಚೆಯು 'ಮುಸಲ್ಮಾನ್ ಔರ್ ಮೌಜೂದ ಸಿಯಾಸಿ ಕಶ್‌ಮಕಶ್' ಎಂಬ ಪುಸ್ತಕದ ಎರಡನೆಯ ಭಾಗದಲ್ಲಿದೆ.

ವಿಧಾನ ಒಂದಿದೆ. ಅದು ಮಾಲಿಕೀ ಮದ್‌ಹಬ್‌ನ ಪ್ರಕಾರ ಪ್ರತಿಯೊಂದು ಜಿಲ್ಲೆ ಮೂವರು ಮುಸಲ್ಮಾನರನ್ನೊಳಗೊಂಡ ಒಂದು ಶರೀಅತ್ ಪಂಚಾಯತನ್ನು ರಚಿಸುವುದಾಗಿದೆ. ಈ ಮೂವರ ಮೇಲೆ ಜಿಲ್ಲೆಯ ಮುಸಲ್ಮಾನರಿಗೆ ಪೂರ್ಣ ವಿಶ್ವಾಸವಿರಬೇಕು. ಈ ಪೈಕಿ ಒಬ್ಬರಾದರೂ ಅಧಿಕೃತ ಸನದುಧಾರಿ ಧರ್ಮ ಪಂಡಿತರಾಗಿರಬೇಕು. ಮುಸಲ್ಮಾನರ ನಿಕಾಹ್, ತಲಾಕ್ ಮತ್ತಿತರ ವ್ಯವಾಹರಗಳಲ್ಲಿ ಈ ಪಂಚಾಯತ್‌ಗಳ ತೀರ್ಪನ್ನು ನ್ಯಾಯಾಲಯದ ತೀರ್ಮಾನದಂತೆ ಮಾನ್ಯ ಮಾಡುವಂತೆ ಪ್ರಸಕ್ತ ಸರಕಾರದ ಮೇಲೆ ಒತ್ತಡ ಹೇರಬೇಕು. ಬ್ರಿಟಿಷ್ ಕೋರ್ಟುಗಳಿಗೆ* ಈ ವಿಷಯದ ಬಗ್ಗೆ ವಿವರವಾದ ಚರ್ಚೆಯು 'ಮುಸಲ್ಮಾನ್ ಔರ್ ಮೌಜೂದ ಸಿಯಾಸಿ ಕಶ್‌ಮಕಶ್' ಎಂಬ ಪುಸ್ತಕ ಎರಡನೆಯ ಭಾಗದಲ್ಲಿದೆ. ಅವುಗಳ ವಿರುದ್ಧ ಅಪೀಲು ಸ್ವೀಕರಿಸುವ ಅಧಿಕಾರವಿರಬಾರದು. ಬ್ರಿಟಿಷ್ ಕೋರ್ಟುಗಳಿಗೆ ಬರುವ ಮುಸಲ್ಮಾನರ ನಿಕಾಹ್ ತಲಾಕ್ ಇತ್ಯಾದಿಗೆ ಸಂಬಂಧಿಸಿದ ಮೊಕದ್ದಮೆಗಳನ್ನು ಈ ಪಂಚಾಯತ್‌ಗಳಿಗೆ ವರ್ಗಾಯಿಸಬೇಕು.** ಬ್ರಿಟಿಷ್ ಇಂಡಿಯಾದಲ್ಲಿ ಮಾತ್ರವಲ್ಲದೆ ಇತರ ಮುಸ್ಲಿಮೇತರ ರಾಷ್ಟ್ರಗಳಲ್ಲಿ ಮತ್ತು ಬ್ರಿಟಿಷ್ ಸರಕಾರದ ಅನುಕರಣೆ ಮಾಡುತ್ತಾ ಶರೀಅತ್ ನ್ಯಾಯಾಲಯವನ್ನು ರದ್ದುಪಡಿಸಿ ಶರೀಅತ್ ವ್ಯವಹಾರಗಳನ್ನೂ ಸಾಮಾನ್ಯ ಸಿವಿಲ್ ನ್ಯಾಯಾಲಯದ ವ್ಯಾಪ್ತಿಗೆ ಒಳಪಡಿಸಿರುವ ಮುಸ್ಲಿಮ್ ರಾಷ್ಟ್ರಗಳಲ್ಲಿ ಸುಧಾರಣೆಯ ಪ್ರಥಮ ಹೆಜ್ಜೆಯ ರೂಪದಲ್ಲಿ ಒಂದೋ ಶರೀಅತ್ ನ್ಯಾಯಾಲಯವನ್ನು ಪುನಃ ಸ್ಥಾಪಿಸುವ ಅಥವಾ ಶರೀಅತ್ ಪಂಚಾಯತ್ ವ್ಯವಸ್ಥೆಯನ್ನು ಸ್ಥಾಪಿಸಿ ಈ ಪಂಚಾಯತ್‌ಗಳಿಗೆ ಆಯಾ ರಾಷ್ಟ್ರದ ಸರಕಾರಗಳ ಮನ್ನಣೆ ದೊರೆಯುವಂತೆಯೂ ಮಾಡಲು ಪ್ರಯತ್ನಿಸಬೇಕಾಗಿದೆ. ಇದು ಸಾಧ್ಯವಾಗದಿದ್ದರೆ ಕೇವಲ ಕಾನೂನು ರಚನಾ ಸಭೆಗಳಲ್ಲಿ ಯಾವುದಾದರೊಂದು ಕಾನೂನು ಮಂಡಿಸಿ ಮಂಜೂರು ಮಾಡಿಸುವುದು ಇಸ್ಲಾಮೀ ಉದ್ದೇಶಗಳಿಗೆ ಯಾವ ರೀತಿಯಿಂದಲೂ ಉಪಯುಕ್ತವಾಗಲಾರದು.

## ಕಾನೂನಿನ ಒಂದು ಹೊಸ ಸಂಗ್ರಹದ ಅಗತ್ಯ

ಶರೀಅತ್ ನ್ಯಾಯಾಲಯಗಳ ರಚನೆಯ ಜೊತೆಗೆ ಇನ್ನೊಂದು ವಿಷಯವೂ ಅತೀ ಅಗತ್ಯವಾಗಿದೆ. ಅದೇನೆಂದರೆ ಒಂದು ಹೊಸ ಕಾನೂನು ಗ್ರಂಥದ ಕ್ರೋಢೀಕರಣವಾಗಬೇಕು. ಅದರಲ್ಲಿ ಮುಸಲ್ಮಾನರ ಶರೀಅತ್ ವ್ಯವಹಾರಗಳ ಕುರಿತು ಕರ್ಮಶಾಸ್ತ್ರ ವಿಧಿಗಳನ್ನು ನಿಬಂಧನೆಗಳ ರೂಪದಲ್ಲಿ ವಿವರಣೆಯ ಸಹಿತ ಕ್ರೋಢೀಕರಿಸಿರಬೇಕು. ಇದರಿಂದ ಶರೀಅತ್ ನ್ಯಾಯಾಲಯಗಳಲ್ಲಿ

---

* ಈ ಗ್ರಂಥವನ್ನು ಸ್ವಾತಂತ್ರ್ಯಕ್ಕಿಂತ ಮುಂಚೆ ರಚಿಸಲಾಗಿತ್ತೆಂಬುದು ಗಮನಾರ್ಹ. - ಅನು.

** ಹನಫೀ ಕರ್ಮಶಾಸ್ತ್ರ ಪ್ರಕಾರ ಶರೀಅತ್ ಪಂಚಾಯತ್‌ಗಳ ತೀರ್ಪು 'ಖಾಝಿ'ಯ ತೀರ್ಮಾನಕ್ಕೆ ಪರ್ಯಾಯವೆನಿಸುವುದಿಲ್ಲ. ಆದರೆ ಪಂಚಾಯತ್‌ಗಳಿಗೆ ತಮ್ಮ ತೀರ್ಪುಗಳನ್ನು ಜಾರಿಗೆ ತರುವ ಅಧಿಕಾರವಿದ್ದರೆ ಹಾಗೂ ಅದರ ವಿಚಾರಣಾ ಅಧಿಕಾರವು ಕೇವಲ ಸಂಧಾನಕಾರನ ರೂಪದಲ್ಲಿರದೆ, ಅನುಷ್ಠಾನದ ಅಧಿಕಾರವುಳ್ಳ ಸ್ವರೂಪದ್ದಾಗಿದ್ದರೆ ಮಾತ್ರ ಹನಫೀ ಕರ್ಮಶಾಸ್ತ್ರ ಪ್ರಕಾರವೂ ಅದರ ತೀರ್ಪು ನ್ಯಾಯಾಲಯದ ತೀರ್ಪಿನಂತೆಯೇ ಎಂದು ಪರಿಗಣಿಸಲ್ಪಡುವುದು.

ಅಥವಾ ಶರೀಅತ್ ಪಂಚಾಯತ್‌ಗಳಲ್ಲಿ ಪ್ರಸಕ್ತ ಆಂಗ್ಲ ಭಾಷೆಯ ಮುಹಮ್ಮಡನ್ ಲಾದ ಸ್ಥಾನದಲ್ಲಿ ಅದನ್ನು ಜಾರಿಗೆ ತರಬಹುದು. ಈಜಿಪ್ಟ್‌ನಲ್ಲಿ ಸಮ್ಮಿಶ್ರ ಟ್ರಿಬ್ಯೂನಲ್‌ಗಳು ಸ್ಥಾಪನೆಗೊಂಡಾಗ ಅಲ್ಲಿಯೂ ಅತ್ಯಂತ ವಿಶ್ವಾಸಾರ್ಹವಾದ ಮೂಲಗಳಿಂದ ಎಲ್ಲ ಅವಶ್ಯಕ ಕಾನೂನುಗಳನ್ನು ಒಟ್ಟಾಗಿ ಕ್ರೋಢೀಕರಿಸಿದ ಇಂತಹ ಕಾನೂನಿನ ಸಂಗ್ರಹದ ಅಗತ್ಯ ತಲೆದೋರಿತ್ತು. ಅಂತೆಯೇ ಈಜಿಪ್ಟ್ ಸರಕಾರದ ಆಜ್ಞೆಯ ಮೇರೆಗೆ ಕದರಿ ಪಾಶಾರವರ ಅಧ್ಯಕ್ಷತೆಯಲ್ಲಿ ಅಝ್‌ಹರ್‌ನ ಉಲಮಾಗಳ ಒಂದು ತಂಡವು ಈ ಕಾರ್ಯವನ್ನು ನಿರ್ವಹಿಸಿತು. ಈ ತಂಡವು ರಚಿಸಿದ ಕಾನೂನು ಸಂಗ್ರಹವನ್ನು ಸರಕಾರೀ ಮಟ್ಟದಲ್ಲಿ ಅಂಗೀಕರಿಸಿ ನ್ಯಾಯಾಲಯಗಳಲ್ಲಿ ಜಾರಿಗೊಳಿಸಲಾಯಿತು.* ಭಾರತದಲ್ಲಿಯೂ ಇಂತಹ ಒಂದು ತಂಡವನ್ನು ನೇಮಿಸಬೇಕಾಗಿದೆ. ಅದರಲ್ಲಿ ಎಲ್ಲ ವಿಭಾಗಗಳಿಗೆ ಸೇರಿದ ಉನ್ನತ ಉಲೆಮಾಗಳು ಕೆಲವು ಕಾನೂನು ತಜ್ಞರ ಜೊತೆ ಸೇರಿ ಒಂದು ವಿವರವಾದ ಕಾನೂನು ಸಂಗ್ರಹವನ್ನು ಸೂಕ್ತ ವ್ಯಾಖ್ಯಾನಗಳೊಂದಿಗೆ ಕ್ರೋಢೀಕರಿಸಬೇಕು. ಆ ಗ್ರಂಥವನ್ನು ಮೊದಲು ಕರಡು ರೂಪದಲ್ಲಿ ಸಿದ್ಧಪಡಿಸಿ ಆ ಕುರಿತು ವಿಭಿನ್ನ ಗುಂಪುಗಳ ಉಲಮಾಗಳ ಅಭಿಪ್ರಾಯವನ್ನು ಸಂಗ್ರಹಿಸಬೇಕು ಮತ್ತು ಆ ಅಭಿಪ್ರಾಯಗಳನ್ನೂ ವಿಮರ್ಶೆಗಳನ್ನೂ ಸೂಕ್ತವಾಗಿ ಪರಿಗಣಿಸಿ ಅದನ್ನು ಪುನರ್ವಿಮರ್ಶಿಸಬೇಕು. ಈ ಕಾನೂನು ಸಂಗ್ರಹವು ಅಂತಿಮ ರೂಪದಲ್ಲಿ ಸಿದ್ಧಗೊಂಡಾಗ ಅದನ್ನು ಶರೀಅತ್ ಕಾನೂನಿನ ಅಂಗೀಕೃತ ಸಂಗ್ರಹವೆಂದು ಸಾರಬೇಕು. ಇನ್ನು ಮುಂದೆ ಮುಸಲ್ಮಾನರ ಶರೀಅತ್ ವ್ಯವಹಾರದಲ್ಲಿ ಈ ಸಂಗ್ರಹವನ್ನೇ ಅವಲಂಬಿಸಬೇಕೆಂದು ನಿರ್ಧರಿಸಬೇಕು. ಆಂಗ್ಲ ನ್ಯಾಯಾಲಯಗಳ ತೀರ್ಪುಗಳು ಮತ್ತು ಇಸ್ಲಾಮಿನ ಜ್ಞಾನ ವಾಗಲಿ ಅದರ ಮೇಲೆ ವಿಶ್ವಾಸವಾಗಲಿ ಇಲ್ಲದ ನ್ಯಾಯಾಧೀಶರುಗಳ ವಿವರಣೆ ಗಳನ್ನೊಳಗೊಂಡ 'ಮುಹಮ್ಮಡನ್ ಲಾ'ವನ್ನು ಅಸಿಂಧುವೆಂದು ಪರಿಗಣಿಸಬೇಕು.

ನಮ್ಮ ಕರ್ಮಶಾಸ್ತ್ರ ಗ್ರಂಥಗಳಲ್ಲಿ ಎಲ್ಲ ಸಮಸ್ಯೆಗಳ ಬಗ್ಗೆಯೂ ವಿವರವಾಗಿ ಪ್ರಸ್ತಾಪಿಸಲಾಗಿರುವಾಗ ಒಂದು ಹೊಸ ಕಾನೂನು ಸಂಗ್ರಹ ಗ್ರಂಥವನ್ನು ಕ್ರೋಢೀಕರಿಸುವ ಅಗತ್ಯವಾದರೂ ಏನು? ಎಂದು ಯಾರಾದರೂ ಆಕ್ಷೇಪಿಸಬಹುದು. ಇಂತಹ ಆಕ್ಷೇಪ ಉದ್ಭವಿಸಲು ಸಾಧ್ಯವಿದೆ ಮಾತ್ರವಲ್ಲ ಒಂದು ವರ್ಗದ ವಿಚಾರ ಸರಣಿಯನ್ನು ಮುಂದಿಟ್ಟು ನೋಡಿದವರಂತು ಈ ಪ್ರಸ್ತಾಪವನ್ನು ಖಚಿತವಾಗಿಯೂ ವಿರೋಧಿಸಲಾಗುವುದು ಎಂದು ಅನಿಸುತ್ತದೆ. ಆದ್ದರಿಂದ ನಾವಿಲ್ಲಿ ಸಂಕ್ಷಿಪ್ತವಾಗಿ ಯಾವ ಕಾರಣಗಳಿಂದ ಈ ಕಾರ್ಯವು ನಮ್ಮ ದೃಷ್ಟಿಯಲ್ಲಿ ಅವಶ್ಯಕವಾಗಿದೆ ಎಂಬುದನ್ನು ವಿವರಿಸುತ್ತೇವೆ.

ಯಾರಿಗಾದರೂ ಪ್ರಥಮ ನೋಟಕ್ಕೆ ತಿಳಿದು ಬಿಡುವಂತೆ ಕರ್ಮಶಾಸ್ತ್ರ ಗ್ರಂಥಗಳಲ್ಲಿ ವಿಷಯಗಳು ಚದರಿದಂತಿವೆ. ಅವು ಪುರಾತನ ಶೈಲಿಯಲ್ಲಿ ಬರೆಯಲ್ಪಟ್ಟಿದ್ದೂ ಅದೇ ಶೈಲಿಯಲ್ಲಿ ಕ್ರೋಢೀಕರಿಸಲ್ಪಟ್ಟಿವೆ. ಅವುಗಳ ಭಾಷೆಯು ತೀರಾ ಪುರಾತನವಾಗಿದೆ. ಅವುಗಳಲ್ಲಿ ಬಳಸಲಾಗಿರುವ ಪಾರಿಭಾಷಿಕಗಳ ಸೂಕ್ಷ್ಮ ಆಳವನ್ನು ಅರಿಯಲು ಈ ಕಾಲದಲ್ಲಿ ಅವುಗಳನ್ನು ಬೋಧಿಸುವವರೇ

* ಈ ಗ್ರಂಥದ ಫ್ರೆಂಚ್ ಅನುವಾದವು ಪ್ರಕಟಗೊಂಡಿದ್ದು ಈಜಿಪ್ಟ್ ಅಲ್ಲದ ಇತರ ದೇಶಗಳಲ್ಲಿ ಕೂಡಾ ಅದನ್ನು ನ್ಯಾಯಾಲಯಗಳು ಉಪಯೋಗಿಸುತ್ತಿವೆ.

ಅಸಮರ್ಥರಾಗಿದ್ದಾರೆ. ಇಂದು ಕಾನೂನಿನ ಗ್ರಂಥಗಳಲ್ಲಿ ವಿಧಿಗಳನ್ನು ನಿಬಂಧನೆಗಳ ರೂಪದಲ್ಲಿ ವಿವರಿಸಲಾಗುತ್ತದೆ. ಪ್ರತಿಯೊಂದು ನಿಬಂಧನೆಯ ಕೆಳಗೆ ಆ ನಿಬಂಧನೆಯ ಪ್ರಾಮುಖ್ಯ ಪದಗಳ ಅರ್ಥ ವಿವರಣೆ, ಅವುಗಳ ಉದ್ದೇಶದ ವಿವರಣೆ ಹಾಗೂ ಅವುಗಳ ಉಪನಿಬಂಧನೆಗಳ ವಿವರಣೆ ನೀಡಲಾಗುತ್ತದೆ. ಇದಲ್ಲದೆ ಆ ಕುರಿತು ಈ ಹಿಂದಿನ ನ್ಯಾಯಧೀಶರ ತೀರ್ಪುಗಳನ್ನೂ ವಿವಿಧ ಕಾನೂನು ತಜ್ಞರ ವ್ಯಾಖ್ಯಾನಗಳನ್ನೂ ಸಂದರ್ಭಾನುಸಾರ ನೀಡಲಾಗುತ್ತದೆ. ವಿಷಯಾನುಕ್ರಮಣಿಕೆ ಮತ್ತು ಇಂಡೆಕ್ಸ್‌ಗಳನ್ನು ನೀಡುವುದರ ಮೂಲಕ ಸಮಸ್ಯೆಗಳನ್ನು ತಿಳಿಯಲು ಅನೇಕ ಅನುಕೂಲತೆಗಳನ್ನು ಕಲ್ಪಿಸಲಾಗಿದೆ. ಇವುಗಳನ್ನೆಲ್ಲಾ ನೋಡಿದ ಯಾವ ವಿವೇಕಮತಿಯೂ ಮನುಷ್ಯ ಶ್ರಮದಿಂದಾಗಿ ಪ್ರಗತಿ ಹೊಂದಿದ ಈ ಹೊಸ ಕ್ರೋಢೀಕರಣ ಕ್ರಮವನ್ನು ಇಸ್ಲಾಮೀ ಕಾನೂನಿನ ಗ್ರಂಥ ರಚನೆಯಲ್ಲಿಯೂ ಬಳಸುವ ಅಗತ್ಯವನ್ನು ನಿರಾಕರಿಸಲಾರ. ಹಳೆಯ ಕ್ರೋಢೀಕರಣ ಶೈಲಿಯು ಕುರ್‌ಆನ್ ಮತ್ತು ಹದೀಸ್‌ಗಳಿಂದ ನಿರ್ದೇಶಿತ ವಿಧಾನದಲ್ಲೇನೂ ಇಲ್ಲ ತಾನೇ?ಹಾಗಿರುತ್ತಾ ಆ ಶೈಲಿಯನ್ನೇ ಅನುಸರಿಸಬೇಕಾದುದು ಕಡ್ಡಾಯವೆಂದಾಗಲಿ ಅದನ್ನು ಬಿಟ್ಟು ಹೊಸ ಶೈಲಿಯನ್ನು ಅಳವಡಿಸಿದರೆ ಅದು ಶರೀಅತ್ ವಿರೋಧಿ ಪಾಪವೆನಿಸುವುದೆಂದಾಗಲಿ ಹೇಳುವಂತಿಲ್ಲ.

ಇದಕ್ಕಿಂತಲೂ ಹೆಚ್ಚು ಪ್ರಮುಖ ಕಾರಣವೊಂದಿದೆ. ಪುರಾತನ ಕರ್ಮಶಾಸ್ತ್ರ ಗ್ರಂಥಗಳಲ್ಲಿ ವಿವರಿಸಲಾಗಿರುವ ಕಾನೂನುಗಳ ಪೈಕಿ ಹೆಚ್ಚಿನವುಗಳನ್ನು ಸಾಮಾನ್ಯ ಸಾಮಾಜಿಕ ಪರಿಸ್ಥಿತಿಗಳನ್ನು ಪರಿಗಣಿಸಿ ರಚಿಸಲಾಗಿದೆ. ಆದ್ದರಿಂದ ಆ ಕಾನೂನುಗಳನ್ನು ಪದಾನುಪದವಾಗಿ ಎಲ್ಲ ಕಡೆ ಮತ್ತು ಎಲ್ಲ ವ್ಯವಹಾರಗಳಲ್ಲಿ ಅನ್ವಯಗೊಳಿಸುವುದು ಸಮಂಜಸವಲ್ಲ. ಅವುಗಳನ್ನು ಸರಿಯಾಗಿ ಜಾರಿಗೊಳಿಸಬೇಕಿದ್ದರೆ:-

ಮೊದಲನೆಯದಾಗಿ ಯಾವ ಇಸ್ಲಾಮೀ ಸಮಾಜದಲ್ಲಿ ಅವುಗಳನ್ನು ಜಾರಿಗೊಳಿಸಲಾಗುತ್ತಿದೆಯೋ ಅದರ ನೈತಿಕ, ಸಾಂಸ್ಕೃತಿಕ, ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯನ್ನು ಪರಿಗಣಿಸಬೇಕು. ಅಲ್ಲಿಯ ಜನರ ಸಾಮೂಹಿಕ ಅಭ್ಯಾಸಗಳು ಮತ್ತು ಆಚಾರ ಸಂಪ್ರದಾಯಗಳು ಹೇಗಿವೆ? ಅವರು ಯಾವ ಪರಿಸರದಲ್ಲಿ ಇರುವರು? ಆ ಪರಿಸರ ಅವರ ಮೇಲೆ ಯಾವ ರೀತಿಯ ಪರಿಣಾಮವನ್ನು ಬೀರುತ್ತವೆ? ಅವರ ಚಾರಿತ್ರ್ಯ ಮತ್ತು ವ್ಯವಹಾರಗಳಲ್ಲಿ ಇಸ್ಲಾಮಿನ ಪ್ರಭಾವವು ಎಷ್ಟು ಬಲಿಷ್ಟ ಅಥವಾ ಬಲಹೀನವಾಗಿವೆ? ಬಾಹ್ಯ ಪ್ರಭಾವದಿಂದ ಅವರ ಇಸ್ಲಾಮೀ ವೈಶಿಷ್ಟ್ಯಗಳಲ್ಲಿ ಎಷ್ಟು ವ್ಯತ್ಯಾಸ ಆಗಿದೆ ಮತ್ತು ಸಾಮಾನ್ಯ ನಾಗರಿಕ ಪರಿಸ್ಥಿತಿಯಿಂದ ಅವರ ವ್ಯವಹಾರಗಳ ಕರ್ಮಶಾಸ್ತ್ರ ಪರ ನೆಲೆಯಲ್ಲಿ ಯಾವ ಮಾರ್ಪಾಟು ಉಂಟಾಗಿವೆ? ಎಂಬಿತ್ಯಾದಿಗಳನ್ನೂ ಪರಿಗಣಿಸಬೇಕು.

ಎರಡನೆಯದಾಗಿ ಪ್ರತಿಯೊಂದು ಮೊಕದ್ದಮೆಯ ಪ್ರತ್ಯೇಕ ವೈಯಕ್ತಿಕ ಪರಿಸ್ಥಿತಿಯನ್ನು ಗಮನದಲ್ಲಿರಿಸಿಕೊಳ್ಳಬೇಕು. ವಾದಿ ಪ್ರತಿವಾದಿಗಳ ಚಾರಿತ್ರ್ಯ, ಜ್ಞಾನ, ಶಿಕ್ಷಣ, ಶಾರೀರಿಕ ಸ್ಥಿತಿ, ಆರ್ಥಿಕ ಮತ್ತು ಸಾಮಾಜಿಕ ಸ್ಥಾನ, ಇತಿಹಾಸ, ಕುಟುಂಬದ ಪರಂಪರೆ ಮತ್ತು ಅವರ ವರ್ಗದ ಸಾಮಾನ್ಯ ಸ್ಥಿತಿ ಎಲ್ಲವನ್ನೂ ಗಮನದಲ್ಲಿಟ್ಟುಕೊಂಡು ಒಂದು ನಿರ್ದಿಷ್ಟ ಆಂಶಿಕ

ವ್ಯವಹಾರದಲ್ಲಿ ಕಾನೂನಿನ ಉದ್ದೇಶವು ಪೂರ್ತಿಯಾಗುವಂತೆ ಮತ್ತು ಕಾನೂನಿನ ತತ್ವಕ್ಕೆ ವಿರುದ್ಧವಾಗದಂತೆ ಅವರ ಮೇಲೆ ಕಾನೂನನ್ನು ಹೇಗೆ ಜಾರಿಗೊಳಿಸಬೇಕು ಎಂಬುದನ್ನು ನಿರ್ಣಯಿಸಬೇಕು.

ಯಾರಾದರೂ ಈ ಎರಡು ಅಂಶಗಳನ್ನು ಕಡೆಗಣಿಸಿ ಯಾವುದಾದರೂ ಕರ್ಮಶಾಸ್ತ್ರದ ಹಳೆಯ ಗ್ರಂಥದಿಂದ ಒಂದು ನಿಬಂಧನೆಯನ್ನು ಹೆಕ್ಕಿಕೊಂಡು ಕಣ್ಣು ಮುಚ್ಚಿ ಆ ನಿಬಂಧನೆಗೆ ಸಂಬಂಧಪಟ್ಟ ಎಲ್ಲ ಮೊಕದ್ದಮೆಗಳಲ್ಲೂ ಅದನ್ನು ಜಾರಿಗೊಳಿಸಿದರೆ ಅವನ ಉದಾಹರಣೆಯು ದೇಶದ ಹವಾಗುಣ, ಋತುಮಾನ, ರೋಗಿಗಳ ಸ್ವಭಾವ ಮತ್ತು ರೋಗಗಳ ವೈವಿಧ್ಯತೆಯನ್ನು ನಿರ್ಲಕ್ಷಿಸಿ ಬಕರಾತ್ ಮತ್ತು ಜಾಲನೋಸ್ (ಪ್ರಾಚೀನ ಗ್ರೀಕ್ ವೈದ್ಯರು) ರವರು ಸೂಚಿಸಿದ ಯಾವುದಾದರೊಂದು ಔಷಧಿಯನ್ನು ಎಲ್ಲ ರೋಗಿಗಳಿಗೂ ಸಾರಾಸಗಟಾಗಿ ಕೊಡುತ್ತಾ ಹೋಗುವ ವೈದ್ಯನಂತಾದೀತು. ಹಳೆಯ ಕಾಲದ ವೈದ್ಯರು ಸೂಚಿಸಿದ ಔಷಧಿಗಳು ಅತ್ಯಂತ ಉಪಯುಕ್ತವೆಂಬುದರಲ್ಲಿ ಎರಡು ಮಾತಿಲ್ಲ. ಆದರೆ ಅದು ಅಜ್ಞಾನಿ ವೈದ್ಯರಿಂದ ಬಳಸಲ್ಪಡಲಿಕ್ಕಾಗಿ ಸೂಚಿಸಲ್ಪಟ್ಟಿವೆಯೇ? ಅವುಗಳನ್ನು ಉಪಯೋಗಿಸುವುದಕ್ಕೂ ಜ್ಞಾನ, ಅನುಭವ, ಯುಕ್ತಿ ಮತ್ತು ಬುದ್ಧಿವಂತಿಕೆಯ ಅಗತ್ಯವಿಲ್ಲವೇ? ಇದೇ ರೀತಿ ಇಮಾಮರುಗಳು ಶರೀಅತ್ ನಿಬಂಧನೆಗಳಿಂದ ಹಾಗೂ ಮೂಲಭೂತ ವಿಧಿಗಳಿಂದ ಕಂಡು ಹಿಡಿದ ವಿಶದಾಂಶಗಳು ವಸ್ತುತಃ ಅತ್ಯಂತ ಸೂಕ್ತವಾಗಿವೆ. ಆದರೆ ಈ ಸಂಶೋಧನಾತ್ಮಕ ನಿಯಮಗಳನ್ನು ಯುಕ್ತಿರಹಿತ ಮತ್ತು ವಿವೇಕಹೀನವಾಗಿ ಅಂಚೆ ಕಚೇರಿಯ ಜವಾನನು ಕಾಗದಗಳಿಗೆ ಮೊಹರು ಒತ್ತುವಂತೆ ಎಲ್ಲ ವಿಷಯಗಳಲ್ಲೂ ವಿವೇಚನೆಯಿಲ್ಲದೆ ಜಾರಿಗೊಳಿಸಲಾದೀತು ಎಂದು ಆ ಮಹಾತ್ಮರು ಎಂದೂ ಊಹಿಸಿಯೇ ಇರಲಾರರು.

ಮೂಲತಃ ಇಸ್ಲಾಮೀ ಕಾನೂನನ್ನು ಎಂತಹ ಯುಕ್ತಿಪೂರ್ಣವಾದ ತತ್ವಗಳ ಆಧಾರದಲ್ಲಿ ರಚಿಸಲಾಗಿತ್ತೆಂದರೆ, ಅದರಲ್ಲಿ ಯಾವುದೇ ಸ್ತ್ರೀ ಅಥವಾ ಪುರುಷನಿಗೆ ಅನೈತಿಕತೆಯಲ್ಲಿ ತೊಡಗುವುದು ಅನಿವಾರ್ಯವಾಗಿ ಬಿಡುವಂತಹ ಅಥವಾ ಸಮಾಜದಲ್ಲಿ ಅವರು ಅನೈತಿಕತೆ ಮತ್ತಿತರ ಕೆಡುಕುಗಳ ಉದ್ಭವಕ್ಕೆ ಕಾರಣವಾಗಿ ಬಿಡುವ ಸಾಧ್ಯತೆಯೇ ಇರಲಿಲ್ಲ. ಇನ್ನು ಈ ಕಾನೂನಿನ ಯಾವುದಾದರೂ ಕಾಠಿಣ್ಯದಿಂದ ವಿವಶರಾಗಿ ಯಾರಾದರೊಬ್ಬ ಮುಸ್ಲಿಮ್ ಸ್ತ್ರೀ ಅಥವಾ ಪುರುಷರಿಗೆ ಧರ್ಮತ್ಯಾಗ ಮಾಡುವ ಪ್ರಸಂಗ ಬರುವುದಂತೂ ಅಸಂಭವನೀಯವೇ ಆಗಿತ್ತು. ಆದರೆ ಇಂದು ಮುಸಲ್ಮಾನರಲ್ಲಿ ಅನೇಕ ಕುಟುಂಬ ಕಲಹಗಳು, ಅನೈತಿಕತೆಗಳು ಮಾತ್ರವಲ್ಲ ಧರ್ಮತ್ಯಾಗದ ಘಟನೆಗಳು ಕೂಡಾ ನಡೆಯುತ್ತಿವೆ. ಏಕೆಂದರೆ ಹೆಚ್ಚಿನ ಮೊಕದ್ದಮೆಗಳಲ್ಲಿ ಇಸ್ಲಾಮೀ ಕಾನೂನಿನನ್ವಯ ಸರಿಯಾದ ಮತ್ತು ನ್ಯಾಯಸಮ್ಮತವಾದ ತೀರ್ಪು ಪಡೆಯುವುದು ಅಸಾಧ್ಯವಾಗಿ ಬಿಟ್ಟಿರುವುದೇ ಇದಕ್ಕೆ ಕಾರಣವಾಗಿದೆ. ಮುಫ್ತಿಗಳಲ್ಲಾಗಲೀ ನ್ಯಾಯಾಧೀಶರಲ್ಲಾಗಲೀ ಕರ್ಮಶಾಸ್ತ್ರದ ಸೂಕ್ಷ್ಮ ತಿಳುವಳಿಕೆ ಮತ್ತು ವಿವೇಕ ಇಲ್ಲವಾಗಿದೆ. ಅವರ ಪೈಕಿ ಯಾರೂ ತಾವು ಒಂದು ಸಾಮಾನ್ಯ ನಿಯಮವನ್ನು ಯಾವ ಸಮಾಜ ಮತ್ತು ಯಾವ ನಿರ್ದಿಷ್ಟ ಮೊಕದ್ದಮೆಯಲ್ಲಿ ಜಾರಿಗೊಳಿಸುತ್ತಿರುವೆವೋ ಅದರ ಯಾವ ಯಾವ ವೈಶಿಷ್ಟ್ಯಗಳನ್ನೂ ಗಣನೆಗೆ ತೆಗೆದುಕೊಂಡು,

ಶರೀಅತ್‌ನ ಯಾವ ಉದ್ದೇಶವೂ ಕಡೆಗಣಿಸಲ್ಪಡದಂತೆ ಮತ್ತು ಅದರ ಯಾವ ತತ್ವಕ್ಕೂ ಚ್ಯುತಿ ಬರದಂತೆ ಶರೀಅತ್‌ನ ಮೂಲ ತತ್ವಗಳಿಗೆ ಅಧೀನವಾಗಿ ಆ ಸಾಮಾನ್ಯ ನಿಯಮವನ್ನು ನಿರ್ದಿಷ್ಟ ಪರಿಸ್ಥಿತಿಗಳಿಗೆ ಅನ್ವಯಗೊಳಿಸಬೇಕೆಂದು ನೋಡುವುದಿಲ್ಲ. ನ್ಯಾಯಾಧೀಶರ ಮಿತಿಮೇರೆಗಳಂತೂ ಎಲ್ಲರಿಗೂ ತಿಳಿದ ವಿಷಯ. ಇನ್ನು ಉಲಮಾಗಳ ಕುರಿತು ಹೇಳುವುದಾದರೆ ಅವರ ಪೈಕಿ ಕೆಲವರಿಗೆ ಹಳೆಯ ಕರ್ಮಶಾಸ್ತ್ರ ಗ್ರಂಥಗಳಲ್ಲಿ ಉಲ್ಲೇಖಿಸಿರುವ ಕಾನೂನಿನ ವಾಕ್ಯಗಳನ್ನು ಹೆಕ್ಕಿಕೊಂಡು ಅದೇ ಒಕ್ಕಣೆಯೊಂದಿಗೆ ಯಥಾವತ್ತಾಗಿ ಮುಂದಿಡು ವುದಕ್ಕಿಂತ ಹೆಚ್ಚಿನ ಯಾವುದೇ ಸಾಮರ್ಥ್ಯವಿಲ್ಲ. ಇನ್ನು ಕೆಲವರಿಗೆ ಅಲ್ಲಾಹನು ವಿಶಾಲ ದೃಷ್ಟಿಕೋನ ಮತ್ತು ಧರ್ಮದ ಬಗ್ಗೆ ಅಪಾರ ಜ್ಞಾನವನ್ನು ದಯಪಾಲಿಸಿರುವನು. ಆದರೆ ವೈಯಕ್ತಿಕವಾಗಿ ಅವರ ಪೈಕಿ ಯಾರಲ್ಲೂ ಯಾವುದಾದರೂ ಸಮಸ್ಯೆಯ ಬಗ್ಗೆ ಸಂಶೋಧನೆ ನಡೆಸಿ ಯಾವುದಾದರೊಂದು ನಿಯಮ-ಉಪನಿಯಮದ ಬಗ್ಗೆ ಹಳೆಯ ಕರ್ಮಶಾಸ್ತ್ರ ಗ್ರಂಥಗಳಲ್ಲಿರುವ ಒಕ್ಕಣೆಯಿಂದ ಕಿಂಚಿತ್ತಾದರೂ ಭಿನ್ನವಾದ ಅಭಿಪ್ರಾಯ ತಾಳುವ ಧೈರ್ಯವಿಲ್ಲ. ಏಕೆಂದರೆ ಮೊದಲನೆಯದಾಗಿ ತಾವೆಲ್ಲಿ ತಪ್ಪಿ ಬೀಳುವೆವೋ ಎಂಬ ಭಯ ಅವರನ್ನು ಈ ಸಾಹಸದಿಂದ ತಡೆಯುತ್ತದೆ. ಎರಡನೆಯದಾಗಿ ಬೇರೆ ಉಲಮಾಗಳು ಅವರ ಮೇಲೆ ಸಂಪ್ರದಾಯ ವಿರೋಧಿ ಎಂಬ ಆರೋಪ ಹೊರಿಸುವರೆಂಬ ಭಯ ಆವರಿಸಿರುತ್ತದೆ. ಇದಕ್ಕಿರುವ ಪರಿಹಾರ ಕೇವಲ ಒಂದೇ. ಎಲ್ಲ ಪ್ರಾಂತ್ಯಗಳ ಅಗ್ರಮಾನ್ಯ ಮತ್ತು ಪ್ರಭಾವಶಾಲೀ ಉಲಮಾಗಳ ಒಂದು ತಂಡವು ಈ ಕಾರ್ಯವನ್ನು ತನ್ನ ಕೈಗೆತ್ತಿಕೊಳ್ಳಬೇಕು. ಸಾಮೂಹಿಕ ಶಕ್ತಿ ಮತ್ತು ಪ್ರಭಾವವನ್ನು ಬಳಸಿಕೊಂಡು ಶರೀಅತ್ ವ್ಯವಹಾರಗಳಿಗಾಗಿ ಒಂದು ಸಮಗ್ರ ಕಾನೂನನ್ನು ಕ್ರೋಢೀಕರಿಸಬೇಕು. ಅದು ಭಾರತೀಯ ಮುಸಲ್ಮಾನರ ಪ್ರಸಕ್ತ ನೈತಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಪರಿಸ್ಥಿತಿಗೆ ಸ್ಪಂದಿಸುವಂತಿರಬೇಕು. ವಿಶೇಷ ವೈಯಕ್ತಿಕ ಪರಿಸ್ಥಿತಿಗಳಲ್ಲಿ ಸಂದರ್ಭಾನುಸಾರ ಉಪನಿಯಮಗಳಲ್ಲಿ ಸೂಕ್ತ ಮಾರ್ಪಾಡು ಮಾಡಲು ಅದರಲ್ಲಿ ಅವಕಾಶವಿರಬೇಕು.

ಈ ಕ್ರಮವನ್ನು ಯಾರಾದರೂ ಈ ತಕ್ಲೀದ್ ವಿರೋಧಿ ಅಥವಾ 'ಸಂಪ್ರದಾಯ ವಿರೋಧಿ' ಎನ್ನುವುದಾದರೆ ಅವರು ತಪ್ಪಿಬಿದ್ದಿದ್ದಾರೆಂದು ನಾವು ಹೇಳುವೆವು. ಇಮಾಮರುಗಳ ಅನುಕರಣೆ ಮತ್ತು ಪ್ರವಾದಿಗಳ ಅನುಸರಣೆಯಲ್ಲಿ ಯಾವ ವ್ಯತ್ಯಾಸವಿರಬೇಕೆಂದು ಅವರು ತಿಳಿಯುವುದಿಲ್ಲ. ಓರ್ವ ಅಜ್ಞಾನಿ ಮಾಡುವ ಅನುಕರಣೆ ಮತ್ತು ಓರ್ವ ಸಂಶೋಧಕನಾದ ಆಲಿಮ್ (ಧರ್ಮಪಂಡಿತ) ಮಾಡುವ ಅನುಕರಣೆಯಲ್ಲಿ ಯಾವ ವ್ಯತ್ಯಾಸವಿರಬೇಕೆಂದು ಅವರಿಗೆ ತಿಳಿದಿಲ್ಲ. ಯಾವುದಾದರೊಂದು ಕರ್ಮಶಾಸ್ತ್ರ (ಮದ್‌ಹಬ್)ದ ಅನುಸರಣೆಯ ಅರ್ಥವೇನೆಂಬುದೂ ಅವರಿಗೆ ಗೊತ್ತಿಲ್ಲ. ಅವರು ಮದ್‌ಹಬ್‌ನ ಅನುಕರಣೆಯೆಂದರೆ ತಮ್ಮ ಕರ್ಮಶಾಸ್ತ್ರ ಪಂಥವನ್ನು ಧರ್ಮವೆಂದೂ ಆ ಪಂಥದ ಇಮಾಮರನ್ನು ಪ್ರವಾದಿಗೆ ಸಮಾನರೆಂದೂ ಅದರ ಸಿದ್ಧಾಂತಗಳನ್ನು ಕುರ್‌ಆನಿನ ಸೂಕ್ತಗಳಿಗೆ ಸಮಾನವೆಂದು ತಿಳಿಯಬೇಕೆಂದೂ ಭಾವಿಸಿರುವರು. ತನ್ನ ಮದ್‌ಹಬ್‌ನ ಯಾವುದಾದರೊಂದು ನಿಯಮದಲ್ಲಿ ಸುಧಾರಣೆ, ತಿದ್ದುಪಡಿ ಮತ್ತು ಸೇರ್ಪಡೆ ಮಾಡುವುದಂತಿರಲಿ ಅದರ ಬಗ್ಗೆ ವಿಮರ್ಶಾತ್ಮಕ ದೃಷ್ಟಿ ಬೀರುವುದು ಕೂಡಾ ಮಹಾ ಪಾಪವೆಂಬ ಭಾವನೆ ಮೂಲಭೂತ ಧರ್ಮವಿಶ್ವಾಸದಂತೆ ಮನಸ್ಸಿನಲ್ಲಿ ಮನಮಾಡಿಕೊಂಡಿರಬೇಕು ಎಂಬುದು ಇವರ

ಗ್ರಹಿಕೆಯಾಗಿದೆ. ಯಾವುದಾದರೊಂದು ವಿಷಯದಲ್ಲಿ ಮದ್‌ಹಬ್‌ನ ಯಾವುದಾದರೊಂದು ಉಪನಿಯಮವನ್ನು ಬಿಟ್ಟು ಇತರ ಮದ್‌ಹಬ್‌ನ ಉಪನಿಯಮವನ್ನು ಸ್ವೀಕರಿಸುವುದು 'ಇಜ್ತಿಹಾದ್‌ನ ಕಾಲ' ಅರ್ಥಾತ್ ಹಿಜರಿ ನಾಲ್ಕನೇ ಶತಮಾನದವರೆಗೆ ಹಲಾಲ್ ಆಗಿತ್ತು. ಆದರೆ ಆ ಬಳಿಕ ಅದು ಹರಾಮ್ ಆಗಿ ಬಿಟ್ಟಿದೆ ಎಂಬುದು ಅವರ ನಿಲುಮೆಯಾಗಿದೆ. ಆದರೆ ಈ ರೀತಿಯ ಅನುಸರಣೆ ಪೂರ್ವಕಾಲ ಪಂಡಿತರಲ್ಲಿ ಗೋಚರಿಸುವುದಿಲ್ಲ. ಮಾತ್ರವಲ್ಲ ಅದಕ್ಕೆ ಶರೀಅತ್‌ನಿಂದ ಯಾವುದೇ ಆಧಾರವನ್ನು ನೀಡಲು ಸಾಧ್ಯವಿಲ್ಲ. ಇಮಾಮ್ ಅಬೂಹನೀಫ ಅವರ ಶಿಷ್ಯರು ನೂರಾರು ವಿಷಯಗಳಲ್ಲಿ ತಮ್ಮ ಇಮಾಮರೊಂದಿಗೆ ಭಿನ್ನಾಭಿಪ್ರಾಯ ಹೊಂದಿದ್ದರು. ಆದರೆ ಅವರು 'ಹನಫಿ'ಯಿಂದ ಹೊರ ಹಾಕಲ್ಪಡಲಿಲ್ಲ. ಹನಫೀ ಆಲಿಮ್‌ಗಳು ಇಮಾಮ್ ಅಬೂಹನೀಫ ಮತ್ತವರ ಶಿಷ್ಯರ ಭಿನ್ನಾಭಿಪ್ರಾಯವಿದ್ದ ವಿಷಯಗಳಲ್ಲಿ ಕೆಲವು ಅಭಿಪ್ರಾಯಗಳಿಗೆ ಪ್ರಾಶಸ್ತ್ಯ ನೀಡಿ ಇನ್ನು ಕೆಲವನ್ನು ತಿರಸ್ಕರಿಸಿದರು. ಆದರೆ ಈ ರೀತಿಯ ವಿಮರ್ಶೆಯ ಹೊರತಾಗಿಯೂ ಅವರನ್ನು ಯಾರೂ ತಕ್ಲೀದ್ ಮಾಡದ ಸಂಪ್ರದಾಯ ವಿರೋಧಿ ಎನ್ನಲಿಲ್ಲ. ನಾಲ್ಕನೇ ಹಿಜರಿ ಶಕೆಯಿಂದ ಎಂಟನೇ ಮತ್ತು ಒಂಭತ್ತನೇ ಶಕೆಯ ತನಕ ಹನಫೀ ಉಲಮಾಗಳು ತಮ್ಮ ಪೂರ್ವಜರ ಸಂಶೋಧನಾತ್ಮಕ (ಇಜ್ತಿಹಾದ್) ವಿಧಿಗಳಲ್ಲಿ ಕಾಲದ ಬೇಡಿಕೆಗಳಿಗೆ ತಕ್ಕಂತೆ ಬದಲಾವಣೆಗಳನ್ನು ಮಾಡುತ್ತಿದ್ದರು ಮತ್ತು ಅಗತ್ಯ ಬಿದ್ದಾಗಲೆಲ್ಲಾ ಇತರ ಇಮಾಮರುಗಳ ಮದ್‌ಹಬ್‌ಗಳಿಂದ ನಿಯಮಗಳನ್ನು ಗ್ರಹಿಸಿ ಅವುಗಳನುಸಾರ ವಿಧಿ ನೀಡುತ್ತಿದ್ದರು. ಆದರೆ ಯಾರೂ ಈ ರೀತಿ ಇಜ್ತಿಹಾದ್ ಮಾಡಿದ್ದಕ್ಕಾಗಿ ಅವರನ್ನು ಸಂಪ್ರದಾಯ ವಿರೋಧಿ ಎನ್ನಲಿಲ್ಲ. ಅಬುಲ್ಲೈಸ್ ಸಮರ್‌ಕಂದಿ, ಸರ್‌ಖಸಿ, ಹಿದಾಯಾದ ಗ್ರಂಥಕರ್ತರು, ಕಾಝಿ ಖಾನ್, ಅಲ್ಲಾಮಾ ಷಾಮೀ ಮತ್ತಿತರ ಉಲಮಾಗಳು ಹನಫೀ ಮದ್‌ಹಬ್‌ನ ನಿಯಮಗಳಲ್ಲಿ ತಮ್ಮ ಕಾಲದ ಪರಿಸ್ಥಿತಿ ಮತ್ತು ಬೇಡಿಕೆಗಳಿಗನುಸಾರ ಅಲ್ಪ ಸ್ವಲ್ಪ ಬದಲಾವಣೆಗೆ ಅವಕಾಶ ಕಲ್ಪಿಸಿಕೊಂಡರು ಮತ್ತು ತಮ್ಮ ಮದ್‌ಹಬ್‌ನ ನಿಯಮಗಳ ಪೈಕಿ ನಷ್ಟದಾಯಕವೆಂದು ಕಂಡು ಬಂದ ಅಥವಾ ಸಾಮಾನ್ಯ ಪರಿಸ್ಥಿತಿಯ ದೃಷ್ಟಿಯಿಂದ ವ್ಯಾವಹಾರಿಕವಲ್ಲವೆಂದು ಕಂಡು ಬಂದ ನಿಯಮಗಳನ್ನು ಕೈ ಬಿಟ್ಟು ಬೇರೆ ಮದ್‌ಹಬ್‌ಗಳ ನಿಯಮದಂತೆ ತೀರ್ಪು ವಿಧಿಸಿದರು. ಮಾತ್ರವಲ್ಲ ಅಗತ್ಯ ಬಂದಾಗ ಬೇರೆ ಮದ್‌ಹಬ್‌ಗಳ ನಿಯಮದಂತೆ ವಿಧಿ ನೀಡುವುದು ಧರ್ಮಸಮ್ಮತ ಆದರೆ ಅದು ಸ್ವೇಚ್ಛೆಯ ಅನುಸರಣೆಯಾಗಬಾರದು ಎಂಬ ತತ್ವವನ್ನು ಹನಫೀ ಮದ್‌ಹಬ್ ಸಿದ್ಧಾಂತಗಳಲ್ಲಿ ಸೇರಿಸಿದರು. ಹೀಗಿದ್ದೂ ಯಾರೂ ಅವರನ್ನು ಸಂಪ್ರದಾಯ ವಿರೋಧಿ ಎನ್ನಲಿಲ್ಲ.

ಜನರು ತಾವಾಗಿಯೇ ತಮ್ಮ ಅಗತ್ಯಕ್ಕೆ ತಕ್ಕಂತೆ ಇತರ ಮದ್‌ಹಬ್‌ಗಳಂತೆ ನಡೆಯ ತೊಡಗಿದರೆ, ತಮ್ಮ ತಮ್ಮ ಮದ್‌ಹಬ್‌ಗಳಲ್ಲಿರುವ ಬಿಡುವುಗಳಿಂದ ಪ್ರಯೋಜನ ಪಡೆಯುವಲ್ಲಿ ಸ್ವತಂತ್ರರಾದರೆ ಅದರಲ್ಲಿ ಸ್ವೇಚ್ಛೆಯ ಅನುಸರಣೆಯ ಸಂಭವವಿದೆ. ಇದರಿಂದ ಬೇರೆ ಬೇರೆ ಮದ್‌ಹಬ್‌ಗಳು ತಂತಮ್ಮ ದೃಷ್ಟಿಕೋನದಂತೆ ವಿಶೇಷ ಪರಿಸ್ಥಿತಿಗಳಲ್ಲಿ ನೀಡಿರುವ ಬಿಡುವುಗಳಿಂದ ಅಕ್ರಮ ಪ್ರಯೋಜನ ಪಡೆಯುವ ಪ್ರವೃತ್ತಿ ಬೆಳೆದೀತು. ಇದರಿಂದ ಧರ್ಮದೊಂದಿಗೆ ಚೆಲ್ಲಾಟ ಆಡುವ ಸಾಧ್ಯತೆ ಹೆಚ್ಚಾಗಿ ವ್ಯವಹಾರಗಳಲ್ಲಿ ಅಧೋಗತಿ

ಉಂಟಾದೀತು. ಆದರೆ ಉಲಮಾಗಳು ಧರ್ಮನಿಷ್ಠೆ ಮತ್ತು ಸದುದ್ದೇಶದಿಂದ ಪರಸ್ಪರ ಸಮಾಲೋಚನೆ ನಡೆಸಿ ಮುಸಲ್ಮಾನರ ಅಗತ್ಯಗಳನ್ನೂ ಅವರ ಪರಿಸ್ಥಿತಿಗಳನ್ನೂ ಪರಿಗಣಿಸಿ ಹೀಗೆ ಮಾಡಿದರೆ ಆದರಿಂದ ಯಾವುದೇ ಧಾರ್ಮಿಕ ಅಥವಾ ಲೌಕಿಕ ನಷ್ಟದ ಸಂಭವವಿಲ್ಲ. ಒಂದು ವೇಳೆ ಯಾವುದಾದರೊಂದು ವಿಷಯದಲ್ಲಿ ತಪ್ಪು ಸಂಭವಿಸಿದರೂ ಅಲ್ಲಾಹನು ಅದನ್ನು ಕ್ಷಮಿಸುವನು ಮಾತ್ರವಲ್ಲ ಅವರ ಸದುದ್ದೇಶದ ಸತ್ಫಲವನ್ನೂ ಅವರಿಗೆ ನೀಡುವನು ಎಂಬುದಕ್ಕೆ ಸ್ಪಷ್ಟ ಪುರಾವೆಗಳಿವೆ. ಈ ಮಾರ್ಗವನ್ನು ಅನುಸರಿಸುವುದರಿಂದ ಹೆಚ್ಚೆಂದರೆ ಒಂದು ಜಮಾಅತ್ ಅವರನ್ನು ವಿರೋಧಿಸುವುದು ಎಂಬ ಅಪಾಯವಿದೆ. ಜೊತೆಗೆ ಅವರ ಅನುಯಾಯಿಗಳ ಪೈಕಿ ಕೆಲವರು ಅವರ ಬಗ್ಗೆ ಅಸಮಾಧಾನ ತಾಳುವರೆಂಬ ಭಯವೂ ಇದೆ. ಆದರೆ ಈ ಮಾರ್ಗವನ್ನು ಅವಲಂಬಿಸದೆ ಹೋದರೆ ಇದಕ್ಕಿಂತ ದೊಡ್ಡ ಅಪಾಯ ಇದೆ. ಮುಸಲ್ಮಾನರು ತಮ್ಮ ಬೇಡಿಕೆಗಳ ಒತ್ತಡದಿಂದಾಗಿ ಇಸ್ಲಾಮೀ ಕಾನೂನನ್ನು ಬಿಟ್ಟು ಸ್ವೇಚ್ಛೆಯ ಅನುಸರಣೆ ಮಾಡಲಾರಂಭಿಸಿದರೆ ಮತ್ತು ಅವರ ಮಧ್ಯೆ ಧರ್ಮವನ್ನು ಅಪಹಾಸ್ಯ ಮಾಡುವ ಪ್ರವೃತ್ತಿ ಬೆಳೆದರೆ, ದೇವಸೀಮೋಲ್ಲಂಘನೆ, ಧರ್ಮ ಮತ್ತು ನೈತಿಕತೆಯ ಅವನತಿ, ಸತ್ಯನಿಷೇಧ ಮತ್ತು ಕೆಡುಕುಗಳು ಸಾರ್ವತ್ರಿಕವಾಗುವುವು. ಕ್ರೈಸ್ತ ಜನಾಂಗಗಳಂತೆ ಅವರೂ ತಮ್ಮ ಧಾರ್ಮಿಕ ಕಾನೂನುಗಳನ್ನು ಕೈಬಿಟ್ಟು ಮಾನವ ನಿರ್ಮಿತ ಕಾನೂನುಗಳನ್ನು ಸ್ವೀಕರಿಸುವರು. ಒಂದು ವೇಳೆ ಹೀಗಾದರೆ ಪುನರುತ್ಥಾನ ದಿನದಂದು ಆ ಅಪರಾಧಿಗಳ ಜೊತೆಗೆ ಅವರ ಧಾರ್ಮಿಕ ನೇತಾರರೂ ಅಲ್ಲಾಹನ ಮುಂದೆ ಕರೆಯಲ್ಪಡುವರು. ಅಲ್ಲಾಹನು ಅವರೊಡನೆ 'ನಾನು ನಿಮಗೆ ಜ್ಞಾನವನ್ನೂ ವಿವೇಕವನ್ನೂ ದಯಪಾಲಿಸಿದುದು ನೀವು ಅದನ್ನು ಉಪಯೋಗಿಸದೆ ಇರಲಿಕ್ಕಾಗಿಯೇ?' ನನ್ನ ಗ್ರಂಥ ಮತ್ತು ಪ್ರವಾದಿಯ ಚರ್ಯೆ ನಿಮ್ಮ ಬಳಿ ಇದ್ದುದು ನೀವು ಅವುಗಳನ್ನು ಪಡೆದು ಸುಮ್ಮನಿದ್ದು ಬಿಡಬೇಕು ಮತ್ತು ಅದೇ ವೇಳೆ ಮುಸಲ್ಮಾನರು ದುರ್ಮಾರ್ಗಗಳಲ್ಲಿ ಅಲೆಯುತ್ತಿರಬೇಕು ಎಂಬುದಕ್ಕಾಗಿತ್ತೇ? ನಾವು ನಮ್ಮ ಧರ್ಮವನ್ನು ಸರಳಗೊಳಿಸಿದ್ದೆವು. ನಿಮಗೆ ಅದನ್ನು ಕಠಿಣಗೊಳಿಸುವ ಹಕ್ಕು ಎಲ್ಲಿಂದ ಬಂತು? ನಾವು ನಿಮಗೆ ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ಅನುಸರಣೆಯನ್ನು ಆಜ್ಞಾಪಿಸಿದ್ದೆವು. ಅವೆರಡಕ್ಕೂ ಅಧಿಕವಾಗಿ ನಿಮ್ಮ ಪೂರ್ವಿಕರ ಅನುಸರಣೆ ಮಾಡುವುದನ್ನು ನಿಮಗೆ ಯಾರು ಕಡ್ಡಾಯಗೊಳಿಸಿದರು? ನಾವು ಎಲ್ಲ ಕಷ್ಟಗಳ ಪರಿಹಾರವನ್ನು ಕುರ್‌ಆನ್‌ನಲ್ಲಿ ಇರಿಸಿದ್ದೆವು ನೀವು ಅದನ್ನು ಸ್ಪರ್ಶಿಸದೆ ಮನುಷ್ಯ ನಿರ್ಮಿತ ಗ್ರಂಥಗಳು ನಮಗೆ ಸಾಕೆಂದು ಬಗೆಯಲು ನಿಮಗಾರು ಹೇಳಿದರು? ಎಂದು ಅಲ್ಲಾಹನು ಪ್ರಶ್ನಿಸುವನು. ಈ ವಿಚಾರಣೆಯ ಉತ್ತರವಾಗಿ ಯಾವನೇ ಧರ್ಮ ಪಂಡಿತನಿಗೆ ಕನ್‌ಝುದ್ದಕಾಯಿಕ್, ಹಿದಾಯಃ ಮತ್ತು ಆಲಮ್‌ಗೀರಿ ಗ್ರಂಥಗಳನ್ನು ಬರೆದವರ ಬಳಿ ಆಶ್ರಯ ಲಭಿಸುವ ಯಾವ ನಿರೀಕ್ಷೆಯೂ ಇಲ್ಲ.

ಈ ಉಪವಿಷಯಗಳು ಪ್ರಾಮುಖ್ಯವಾಗಿದ್ದು ಅವುಗಳ ಸವಿಸ್ತಾರ ವಿವರಣೆ ಅತ್ಯಗತ್ಯವಾಗಿತ್ತು. ಆದ್ದರಿಂದ ಅದಕ್ಕೆ ಇಷ್ಟು ಸ್ಥಳ ನೀಡಬೇಕಾಯಿತು. ಇನ್ನು ನಾವು ನಮ್ಮ ಮೂಲ ವಿಷಯದ ಕಡೆಗೆ ಮರಳುತ್ತೇವೆ.

# ಮೂಲಭೂತ ಆದೇಶಗಳು

ಪವಿತ್ರ ಕುರ್‌ಆನ್ ಒಂದು ತಾತ್ವಿಕ ಗ್ರಂಥ. ಆದ್ದರಿಂದ ವೈವಾಹಿಕ ಸಂಬಂಧದ ಕುರಿತು ಆಂಶಿಕ ವಿಷಯಗಳನ್ನು ವಿವರವಾಗಿ ಉಲ್ಲೇಖಿಸಲಾಗಿಲ್ಲ. ಆದರೆ ಅದರಲ್ಲಿ ಕೆಲವು ವಿಶಾಲ ತತ್ವಗಳು ವಿವರಿಸಲ್ಪಟ್ಟಿವೆ. ಅವು ಎಲ್ಲ ಆಂಶಿಕ ವಿಷಯಗಳನ್ನು ಒಳಗೊಳ್ಳುವಷ್ಟು ಸಮಗ್ರವಾಗಿವೆ. ಆಂಶಿಕ ವಿಷಯಗಳಲ್ಲಿ ಸರಿಯಾದ ತೀರ್ಮಾನವನ್ನು ತಲುಪಲು ಅವು ಅತ್ಯುತ್ತಮ ಮಾರ್ಗದರ್ಶನ ನೀಡುತ್ತವೆ. ಆದ್ದರಿಂದ ಕಾನೂನಿನ ವಿವರಗಳನ್ನು ನೋಡುವುದಕ್ಕಿಂತ ಮೊದಲು ಕುರ್‌ಆನಿನಲ್ಲಿ ವಿವರಿಸಲಾಗಿರುವ ತತ್ವಗಳನ್ನೂ ನಿಯಮಗಳನ್ನೂ ಚೆನ್ನಾಗಿ ಗ್ರಹಿಸುವುದು ಅಗತ್ಯವಾಗಿದೆ.

1. "ಬಹುದೇವವಿಶ್ವಾಸಿನಿಯರು ಸತ್ಯವಿಶ್ವಾಸವನ್ನು ಸ್ವೀಕರಿಸುವವರೆಗೂ ನೀವು ಅವರನ್ನು ವಿವಾಹವಾಗಬಾರದು..." (ಅಲ್‌ಬಕರಃ : 221)

"...ಬಹುದೇವ ವಿಶ್ವಾಸಿ ಪುರುಷರು ಸತ್ಯವಿಶ್ವಾಸವನ್ನು ಸ್ವೀಕರಿಸುವವರೆಗೂ ನಿಮ್ಮ ಸ್ತ್ರೀಯರನ್ನು ಅವರಿಗೆ ವಿವಾಹ ಮಾಡಿಕೊಡಬಾರದು..." (ಅಲ್‌ಬಕರಃ : 221)

"...ಸುಶೀಲ ಸ್ತ್ರೀಯರು - ಅವರು ಸತ್ಯವಿಶ್ವಾಸಿ ವರ್ಗದವರಿರಲಿ ಅಥವಾ ನಿಮಗಿಂತ ಮುಂಚೆ ಗ್ರಂಥ ನೀಡಲ್ಪಟ್ಟ ವರ್ಗದವರಿರಲಿ..." (ಅಲ್‌ಮಾಇದ : 5)

ಮುಸ್ಲಿಮ್ ಪುರುಷರ ನಿಕಾಹ್ ಬಹುದೇವಾರಾಧಕ ಸ್ತ್ರೀಯರ ಜೊತೆ ಆಗಲು ಸಾಧ್ಯವಿಲ್ಲ. ಆದರೆ, ಗ್ರಂಥದವರ ಸ್ತ್ರೀಯರು ಅವರಿಗೆ ಹಲಾಲ್ ಆಗಿರುವರು. ಆದರೆ ಮುಸ್ಲಿಮ್ ಸ್ತ್ರೀಯರ ವಿವಾಹ ಬಹುದೇವ ವಿಶ್ವಾಸಿಗಳೊಂದಿಗಾಗಲಿ ಗ್ರಂಥದವರೊಂದಿಗಾಗಲಿ ನಡೆಯಲು ಸಾಧ್ಯವಿಲ್ಲ - ಎಂಬ ನಿಯಮವನ್ನು ಈ ಸೂಕ್ತಗಳಲ್ಲಿ ವಿವರಿಸಲಾಗಿದೆ.

2. "ಬಹುದೇವವಿಶ್ವಾಸಿನಿಯರು ಸತ್ಯವಿಶ್ವಾಸವನ್ನು ಸ್ವೀಕರಿಸುವವರೆಗೂ ನೀವು ಅವರನ್ನು ವಿವಾಹವಾಗಬಾರದು... ಮತ್ತು ಬಹುದೇವ ವಿಶ್ವಾಸಿ ಪುರುಷರು ಸತ್ಯವಿಶ್ವಾಸವನ್ನು ಸ್ವೀಕರಿಸುವವರೆಗೂ ನಿಮ್ಮ ಸ್ತ್ರೀಯರನ್ನು ಅವರಿಗೆ ವಿವಾಹ ಮಾಡಿಕೊಡಬಾರದು..." (ಅಲ್‌ಬಕರಃ : 221)

ಪುರುಷನಿಗೆ ತನ್ನ ವಿವಾಹನವನ್ನು ತಾನೇ ಮಾಡಿಕೊಳ್ಳುವ ಅಧಿಕಾರವಿದೆ. ಆದರೆ ಸ್ತ್ರೀಯು ಈ ವಿಷಯದಲ್ಲಿ ಪೂರ್ಣ ಸ್ವತಂತ್ರಳಲ್ಲ. ಅವಳನ್ನು ನಿಕಾಹ್ ಮಾಡಿಕೊಡುವುದು ಅವಳ ರಕ್ಷಕರ ಕೆಲಸವಾಗಿದೆ ಎಂಬ ನಿಯಮವೂ ಈ ಸೂಕ್ತದಿಂದ ತಿಳಿದು ಬರುತ್ತದೆ."ವಿವಾಹಾನುಭವವುಳ್ಳ ಸ್ತ್ರೀಗೆ ತನ್ನ ವಿಷಯದಲ್ಲಿ ತನ್ನ ರಕ್ಷಕರಿಗಿಂತ ಅಧಿಕ ಹಕ್ಕು

ಇದೆ" ಮತ್ತು "ಕನ್ಯೆಯಿಂದ ಅನುಮತಿ ಪಡೆಯದೆ ಅವಳ ವಿವಾಹ ಮಾಡಿಸಬೇಡಿ" ಎಂಬ ಹದೀಸ್‌ಗಳ ಪ್ರಕಾರ ನಿಕಾಹ್‌ಗೆ ಸ್ತ್ರೀಯ ಒಪ್ಪಿಗೆ ಅಗತ್ಯವೆಂಬುದರಲ್ಲಿ ಸಂಶಯವಿಲ್ಲ. ಯಾರಿಗೂ ಆಕೆಯ ಇಚ್ಛೆಗೆ ವಿರುದ್ಧವಾಗಿ ಆಕೆಯನ್ನು ಮದುವೆ ಮಾಡಿಕೊಡುವ ಅಧಿಕಾರವಿಲ್ಲ. ಆದರೆ ಸ್ತ್ರೀಯ ವಿವಾಹವು ಕುಟುಂಬದ ಹಿತಾಸಕ್ತಿಯೊಂದಿಗೆ ಗಾಢ ಸಂಬಂಧವಿರುವ ವಿಷಯವಾದ್ದರಿಂದ ವಿವಾಹದ ವಿಷಯದಲ್ಲಿ ಕೇವಲ ಸ್ತ್ರೀಯ ಒಪ್ಪಿಗೆ ಮತ್ತು ಆಕೆಯ ಬಯಕೆ ಸಾಲದು. ಆಕೆಯ ಸಂರಕ್ಷಕರಾದ ಪುರುಷರ ಅಭಿಪ್ರಾಯಕ್ಕೂ ಅದರಲ್ಲಿ ಪಾತ್ರವಿರಬೇಕು ಎಂದು ಪವಿತ್ರ ಕುರ್‌ಆನ್ ಅಪೇಕ್ಷಿಸುತ್ತದೆ.

3. ನೀವು ಅವರಿಂದ ಪಡೆದ ಪ್ರಯೋಜನಕ್ಕೆ ಪ್ರತಿಯಾಗಿ ಅವರಿಗೆ ಅವರ ಮಹ್‌ರನ್ನು ಒಂದು ಕರ್ತವ್ಯವೆಂಬ ನೆಲೆಯಲ್ಲಿ ನೀಡಿರಿ.

**"ನೀವು ಪರಸ್ಪರ ರಸಾನಂದವನ್ನು ಸವಿದ ಬಳಿಕ ಹಾಗೂ ಅವರು ನಿಮ್ಮಿಂದ ಒಂದು ಪ್ರಬಲ ಕರಾರನ್ನು ಪಡೆದುಕೊಂಡ ಬಳಿಕ ನೀವು ಅದನ್ನು ಹಿಂದಕ್ಕೆ ಪಡೆಯುವುದಾದರೂ ಹೇಗೆ?" (ಅನ್ನಿಸಾ : 21)**

**"ಅವರನ್ನು ಸ್ಪರ್ಶಿಸುವುದಕ್ಕಿಂತ ಮುಂಚೆ ತಲಾಕ್ ಕೊಟ್ಟರೆ, 'ವಿವಾಹಧನ' (ಮಹರ್) ನಿಶ್ಚಯಿಸಲ್ಪಟ್ಟಿದ್ದರೆ, ಅರ್ಧಾಂಶ ವಿವಾಹಧನ ಕೊಡಬೇಕು..."**

**(ಅಲ್‌ಬಕರಃ : 237)**

ಮಹರ್ ಎಂಬುದು ಪತಿಯು ತನ್ನ ಪತ್ನಿಯ ಸಾನಿಧ್ಯದಿಂದ ಪಡೆಯುವ ಪ್ರಯೋಜನಕ್ಕೆ ಪ್ರತಿಫಲವಾಗಿದೆ ಎಂದು ಈ ಸೂಕ್ತಗಳಿಂದ ತಿಳಿದುಬರುತ್ತದೆ. ಆದ್ದರಿಂದ ಸಂಸರ್ಗದ ಬಳಿಕವೇ ಪೂರ್ಣ ಮಹ್‌ರ್ ಕಡ್ಡಾಯವಾಗುತ್ತದೆ. ಆ ಬಳಿಕ ಯಾವ ಕಾರಣಕ್ಕೂ ಅದು ರದ್ದಾಗುವುದಿಲ್ಲ. ಸ್ತ್ರೀಯ ಸ್ವಇಚ್ಛೆಯಿಂದ ಪೂರ್ಣ ಮಹ್‌ರ್ ಅಥವಾ ಅದರ ಒಂದಂಶವನ್ನು ಕ್ಷಮಿಸಿಬಿಟ್ಟರೆ ಆ ಮಾತು ಬೇರೆ. ಅಂತೆಯೇ ಖುಲಾದ ಪರಿಹಾರದ ರೂಪದಲ್ಲಿ ಆಕೆ ಅದನ್ನು ಪತಿಗೆ ಮರುಪಾವತಿ ಮಾಡಲೂಬಹುದು.

4. **"...ನೀವು (ಮೊದಲ ಪತ್ನಿಗೆ) ಸಂಪತ್ತಿನ ರಾಶಿಯನ್ನೇ ಕೊಟ್ಟಿದ್ದರೂ ಅದರಿಂದ ಲೇಶ ಮಾತ್ರವನ್ನೂ ಹಿಂದಕ್ಕೆ ಪಡೆಯಬಾರದು..." (ಅನ್ನಿಸಾ : 20)**

ಶರೀಅತ್‌ನಲ್ಲಿ ಮಹ್‌ರ್‌ಗೆ ಯಾವುದೇ ಮಿತಿಯನ್ನು ಹೇರಲಾಗಿಲ್ಲ ಎಂಬುದಕ್ಕೆ ಈ ಆಯತ್ ಪುರಾವೆಯಾಗಿದೆ. ಆದ್ದರಿಂದ ಕಾನೂನಿನ ಮೂಲಕ ಮಹ್‌ರನ್ನು ನಿಯಂತ್ರಿಸಲಾಗದು.

5. **"ಪುರುಷರು ಸ್ತ್ರೀಯರ ಮೇಲೆ 'ಮೇಲ್ವಿಚಾರಕ' ಆಗಿರುತ್ತಾರೆ. ಇದು ಅಲ್ಲಾಹನು ಕೆಲವರಿಗೆ ಕೆಲವರ ಮೇಲೆ ಶ್ರೇಷ್ಠತೆ ಪ್ರದಾನ ಮಾಡಿದುದರಿಂದ ಮತ್ತು ಪುರುಷರು ತಮ್ಮ ಸಂಪತ್ತನ್ನು ಖರ್ಚು ಮಾಡುವುದರಿಂದ." (ಅನ್ನಿಸಾ : 34)**

ಈ ಸೂಕ್ತದ ಪ್ರಕಾರ ಜೀವನವೆಚ್ಚವು ಪುರುಷನ ಮೇಲೆ ಕಡ್ಡಾಯವಾಗಿರುವ ಸ್ತ್ರೀಯ ಹಕ್ಕಾಗಿದೆ. ಇದು ಪತಿಯು ಪತ್ನಿಯ ಮೇಲೆ ಗಳಿಸುವ ದಾಂಪತ್ಯ ಹಕ್ಕುಗಳ ಪ್ರತಿಫಲವಾಗಿದೆ.

ಸ್ತ್ರೀಯ ಈ ಹಕ್ಕು ಯಾವ ಪರಿಸ್ಥಿತಿಯಲ್ಲೂ ರದ್ದಾಗುವುದಿಲ್ಲ. ಆಕೆ ಸ್ವಯಂ ತನ್ನ ಆ ಹಕ್ಕನ್ನು ಬಿಟ್ಟು ಕೊಟ್ಟರೆ ಅಥವಾ ಆಕೆ ಬಂಡಾಯ ಎಸಗಿದರೆ ಮಾತ್ರ ಆ ಹಕ್ಕು ರದ್ದಾಗುತ್ತದೆ.

6. "ಸ್ಥಿತಿವಂತನು ತನ್ನ ಸ್ಥಿತಿವಂತಿಕೆಗೆ ತಕ್ಕಂತೆ ಜೀವನ ವೆಚ್ಚ ನೀಡಬೇಕು ಮತ್ತು ಯಾರ ಜೀವನಾಧಾರವು ಸೀಮಿತವಿದೆಯೋ ಅವನು ಅಲ್ಲಾಹನು ಅವನಿಗೆ ನೀಡಿದುದಕ್ಕೆ ಅನುಸಾರವಾಗಿ ಜೀವನವೆಚ್ಚ ನೀಡಬೇಕು." (ಅತ್ತಲಾಕ್: 7)

ಇಲ್ಲಿ ಜೀವನ ವೆಚ್ಚದ ನಿರ್ಣಯಕ್ಕೆ ಪತಿಯ ಆರ್ಥಿಕ ಸ್ಥಿತಿಯನ್ನು ಪರಿಗಣಿಸಬೇಕೆಂಬ ನಿಯಮವಿದೆ. ಶ್ರೀಮಂತನ ಮೇಲೆ ಅವನ ಶಕ್ತ್ಯಾನುಸಾರ ಜೀವನವೆಚ್ಚ ನೀಡುವುದು ಕಡ್ಡಾಯವಾಗುತ್ತದೆ. ಅಂತೆಯೇ ಬಡವನ ಮೇಲೆ ಅವನ ಶಕ್ತ್ಯಾನುಸಾರ ಜೀವನ ವೆಚ್ಚಕಡ್ಡಾಯವಾಗುತ್ತದೆ.

7. "ನಿಮ್ಮ ಸ್ತ್ರೀಯರಿಂದ ಆಜ್ಞೋಲ್ಲಂಘನೆಯ ಆಶಂಕೆ ನಿಮಗಿದ್ದರೆ ಅವರಿಗೆ ನೀವು ಉಪದೇಶ ನೀಡಿರಿ. ಮಲಗುವಲ್ಲಿಂದ ಅವರಿಂದ ದೂರವಿರಿ ಮತ್ತು ಅವರಿಗೆ ಹೊಡೆಯಿರಿ. ಅನಂತರ ಅವರು ನಿಮಗೆ ವಿಧೇಯರಾಗಿ ನಡೆದರೆ, ಅವರ ಮೇಲೆ ಕೈಯೆತ್ತಲು ಬೇಕು ಬೇಕೆಂದೇ ನೆವನ ಹುಡುಕಬೇಡಿರಿ." (ಅನ್ನಿಸಾ: 34)

ಈ ಸೂಕ್ತದ ಮೇರೆಗೆ ಪತಿಗೆ ಶಿಕ್ಷೆ ನೀಡುವ ಅಧಿಕಾರವು ಕೇವಲ ಅವಿಧೇಯತೆ ಮತ್ತು ಬಂಡಾಯದ ಸಂದರ್ಭದಲ್ಲಿ ಮಾತ್ರ ಇದೆ. ಆಗಲೂ ಶಿಕ್ಷೆ ನೀಡುವ ಕೇವಲ ಎರಡೇ ವಿಧಾನಗಳನ್ನು ನಿಶ್ಚಯಿಸಲಾಗಿದೆ. ಒಂದನೆಯದು ಶಯ್ಯಾಗಾರದಲ್ಲಿ ಆಕೆಯನ್ನು ದೂರವಿಸಿರುವುದು, ಎರಡನೆಯದು (ಗಾಯವಾಗದ ರೀತಿಯ) ಹಗುರವಾದ ಹೊಡೆತ. ಅದೂ ಕೇವಲ ಮಿತಿ ಮೀರಿದ ಬಂಡಾಯದ ವೇಳೆ ಮಾತ್ರ ಅನುಮತಿಸಲ್ಪಟ್ಟಿದೆ. ಈ ಮಿತಿಯನ್ನು ಉಲ್ಲಂಘಿಸುವುದು ಅಂದರೆ ಬಂಡಾಯವಿಲ್ಲದೆಯೇ ಶಿಕ್ಷೆ ನೀಡುವುದು ಅಥವಾ ಸಣ್ಣ ಸ್ವರೂಪದ ಆಜ್ಞೋಲ್ಲಂಘನೆಗೆ ಉಗ್ರ ರೂಪದ ಶಿಕ್ಷೆ ನೀಡುವುದು ಅಥವಾ ಗಾಯವಾಗುವಂತೆ ಹೊಡೆಯುವುದು ಅನ್ಯಾಯವೆನಿಸುತ್ತದೆ.

8. "ಪತಿ - ಪತ್ನಿಯರ ಸಂಬಂಧ ಕೆಡುವುದೆಂಬುದು ನಿಮಗೆ ಆತಂಕವಾದಾಗ ಒಬ್ಬ ಮಧ್ಯಸ್ತನನ್ನು ಪುರುಷನ ಕಡೆಯವರಿಂದಲೂ ಒಬ್ಬನನ್ನು ಸ್ತ್ರೀಯ ಕಡೆಯವರಿಂದಲೂ ನಿಯುಕ್ತಗೊಳಿಸಿರಿ. ಅವರಿಬ್ಬರೂ ಸುಧಾರಿಸಲು ಬಯಸಿದರೆ, ಅಲ್ಲಾಹನು ಅವರ ನಡುವೆ ಸಾಮರಸ್ಯದ ಹಾದಿಯನ್ನು ತೆರೆಯುವನು..."

(ಅನ್ನಿಸಾ : 35)

ಪತಿ-ಪತ್ನಿಯರಲ್ಲಿ ಜಗಳ ಉಂಟಾಗಿ ಅವರು ಪರಸ್ಪರ ಒಪ್ಪಂದಕ್ಕೆ ಬಾರದೆ ಹೋದರೆ ಅವರ ಜಗಳವನ್ನು ನ್ಯಾಯಾಲಯಕ್ಕೆ ತರುವುದಕ್ಕೆ ಮುಂಚಿತವಾಗಿ ಪತಿಯ ಕಡೆಯಿಂದ ಒಬ್ಬರನ್ನು ಮತ್ತು ಪತ್ನಿಯ ಕಡೆಯಿಂದ ಒಬ್ಬರನ್ನು ಮಧ್ಯಸ್ಥಿಕೆಗಾರರಾಗಿ ನೇಮಿಸಬೇಕು. ಅವರಿಬ್ಬರೂ ಸೇರಿ ಪತಿ -ಪತ್ನಿಯರ ಜಗಳವನ್ನು ಇತ್ಯರ್ಥಗೊಳಿಸಲು ಪ್ರಯತ್ನಿಸಬೇಕು ಎಂಬ ನಿಯಮವನ್ನು ಈ ಸೂಕ್ತದ ಮೂಲಕ ನಿಶ್ಚಯಿಸಲಾಗಿದೆ.

'ವ ಇನ್ ಖಿಫ್ತುಮ್' (ಭೀತಿ ನಿಮಗೆ ಇದ್ದರೆ) 'ಫಬ್‌ಅಸೂ' (ನೇಮಿಸಿರಿ) ಎಂಬ ಕುರ್‌ಆನಿನ ಆದೇಶಗಳನ್ನು ಮುಸಲ್ಮಾನರ ನಾಯಕರನ್ನುದ್ದೇಶಿಸಿ ನೀಡಲಾಗಿದೆ. ಆದ್ದರಿಂದ ಪಂಚರನ್ನು ನೇಮಿಸುವುದು ಅವರ ಕೆಲಸ. ಪಂಚರಿಗೆ ಯಾವುದೇ ತೀರ್ಮಾನ ಮಾಡಲಾಗದಿದ್ದರೆ, ಕೊನೆಗೆ ಸಮಸ್ಯೆಯ ಇತ್ಯರ್ಥದ ಅಧಿಕಾರವೂ ಈ ನಾಯಕರಿಗೇ ಇದೆ.

9. "...ಅವರಿಬ್ಬರೂ ಅಲ್ಲಾಹನ ಮೇರೆಗಳಲ್ಲೇ ನೆಲೆನಿಲ್ಲಲಾರರೆಂದು ನಿಮಗೆ ಶಂಕೆಯುಂಟಾದಾಗ ಸ್ತ್ರೀಯು ತನ್ನ ಪುರುಷನಿಗೆ (ಪತಿಗೆ) ಏನಾದರೂ ಪರಿಹಾರ ಕೊಟ್ಟು ಬಿಡುಗಡೆ ಹೊಂದುವುದರಲ್ಲಿ ದೋಷವಿಲ್ಲ..." (ಅಲ್‌ಬಕರಃ : 229)

ನ್ಯಾಯಾಧೀಶನು ಪತಿ-ಪತ್ನಿಯರ ಜಗಳವನ್ನು ತೀರ್ಮಾನಿಸುವಾಗ ಪತಿ-ಪತ್ನಿಯರು ದೇವನ ಸೀಮೆಗಳನ್ನು ಪಾಲಿಸಲು ಶಕ್ತರೇ ಅಲ್ಲವೇ ಎಂಬ ವಿಷಯದ ಬಗ್ಗೆ ಅತ್ಯಧಿಕ ಗಮನ ಹರಿಸಬೇಕು. ದೇವ ಸೀಮೆಯ ಉಲ್ಲಂಘನೆಯಾಗುವುದೆಂಬ ಬಲವಾದ ಆಶಂಕೆ ಇದ್ದರೆ ಬೇರೆ ಯಾವ ಕಾರಣಕ್ಕಾಗಿಯೂ ಪತಿ-ಪತ್ನಿಯರನ್ನು ಬೇರ್ಪಡಿಸದೆ ಇರಬಾರದು. ಏಕೆಂದರೆ ದೇವ ಸೀಮೋಲ್ಲಂಘನೆಯ ಭಯವಿದ್ದರೆ ಬೇರಾವ ಕಾರಣವೂ ಅವರನ್ನು ಪರಸ್ಪರ ಜೋಡಿಸಿಡುವುದನ್ನು ಧರ್ಮಬದ್ಧಗೊಳಿಸುವಷ್ಟು ಬಲಿಷ್ಠವಾಗುವುದಿಲ್ಲ. ಎಲ್ಲಕ್ಕಿಂತಲೂ ಮಿಗಿಲಾದ ವಸ್ತು ದೇವ ಸೀಮೆಯ ಸಂರಕ್ಷಣೆಯಾಗಿದೆ. ಅದಕ್ಕಾಗಿ ಅಗತ್ಯ ಬಂದರೆ ಯಾವ ವಸ್ತುವನ್ನೂ ತ್ಯಾಗ ಮಾಡಬಹುದಾಗಿದೆ.

"ಅಲ್ಲಾಹನ ಮೇರೆಗಳನ್ನು ಯಾರಾದರೂ ಮೀರಿದರೆ ಅವರೇ ಅಕ್ರಮಿಗಳು..."
(ಅಲ್ ಬಕರಃ : 229)

10. "...ಕೇವಲ ಸತಾಯಿಸಲಿಕ್ಕಾಗಿ ಅವರನ್ನು ತಡೆದಿರಿಸಿಕೊಂಡರೆ ಅದು ಅತಿಕ್ರಮವಾಗುವುದು..." (ಅಲ್‌ಬಕರಃ : 231)

ಈ ಸೂಕ್ತದಲ್ಲಿ ಇಸ್ಲಾಮೀ ಕಾನೂನಿನ ಇನ್ನೊಂದು ಪ್ರಮುಖ ನಿಯಮದ ಕಡೆಗೆ ಸೂಚನೆ ನೀಡಲಾಗಿದೆ. ಯಾವ ಸ್ತ್ರೀಯೂ ಆಕೆಯ ಮೇಲೆ ಅತಿರೇಕವಾಗುವ ಮತ್ತು ಆಕೆಗೆ ಹಕ್ಕುಚ್ಯುತಿ ಉಂಟಾಗುವ ರೀತಿಯಲ್ಲಿ ಪುರುಷನ ವಿವಾಹ ಬಂಧನದಲ್ಲಿ ತಡೆದಿರಿಸಲ್ಪಡಬಾರದು ಎಂಬುದೇ ಆ ನಿಯಮವಾಗಿದೆ.ಸಹಬಾಳ್ವೆ ನಡೆಸುವುದಾದರೆ ಉತ್ತಮ ರೀತಿಯಲ್ಲಿ ನಡೆಸಬೇಕು. ಅವರನ್ನು ವಿಹಾಹ ಬಂಧನದಲ್ಲಿ ಇಟ್ಟುಕೊಳ್ಳುವುದಾದರೆ ಉತ್ತಮ ರೀತಿಯಲ್ಲಿ ಇಟ್ಟುಕೊಳ್ಳಬೇಕು. ಆದರೆ ಎಲ್ಲಿ ಇಂತಹ ಸಾಧ್ಯತೆಯೇ ಇಲ್ಲವೋ ಮತ್ತು ಅದಕ್ಕೆ ಬದಲಾಗಿ ಕಿರುಕುಳ ಮತ್ತು ಹಕ್ಕುಚ್ಯುತಿಯ ಭಯವಿದೆಯೋ ಅಲ್ಲಿ ಉತ್ತಮ ರೀತಿಯಲ್ಲಿ ಬೇರ್ಪಡುವುದೇ ಸೂಕ್ತವಾಗಿದೆ. ಏಕೆಂದರೆ ಪ್ರವಾದಿ(ಸ)ರವರ ಆದೇಶದ ಮೇರೆಗೆ ಇಸ್ಲಾಮೀ ಕಾನೂನಿನಲ್ಲಿ ಕಿರುಕುಳ ಕ ಡುವಂತಹ ಯಾವ ವಸ್ತುವೂ ಇಲ್ಲ ಮತ್ತು ಯಾರನ್ನಾದರೂ ಉಪದ್ರವಿಸುವ ಅನುಮತಿಯನ್ನೂ ಅದು ನೀಡುವುದಿಲ್ಲ.

11. "...ಒಬ್ಬ ಪತ್ನಿಯು ಅತ್ತ ಜೋತಾಡಿ ಕೊಂಡಿರುವಂತೆ ಬಿಟ್ಟು ಇನ್ನೊಬ್ಬಳ ಕಡೆಗೇ ವಾಲಿಬಿಡಬೇಡಿರಿ..." (ಅನ್ನಿಸಾ : 129)

ಈ ಸೂಕ್ತವು ಒಂದು ವಿಶೇಷ ಪ್ರಸಂಗದಲ್ಲಿ ಅವತೀರ್ಣಗೊಂಡಿತ್ತು. ಆದರೆ ಅದರ ಕೊನೆಯ ಭಾಗದಲ್ಲಿ ಒಂದು ಸಾಮಾನ್ಯ ನಿಯಮವನ್ನು ಬೋಧಿಸಲಾಗಿದೆ. ಯಾವ ಸ್ತ್ರೀಯನ್ನೂ ಆಕೆ ಒಬ್ಬ ಪುರುಷನ ವಿವಾಹ ಬಂಧನದಲ್ಲಿದ್ದು ತ್ರಿಶಂಕು ಸ್ಥಿತಿಯಲ್ಲಿ ಸಿಲುಕಿಕೊಂಡಿರಲು ಅಂದರೆ, ಪತಿಯ ಒಡನಾಟ ಮತ್ತು ಸಹಬಾಳ್ವೆಯೂ ಲಭಿಸದೆ ಇನ್ನೊಂದೆಡೆ ಹಾಗೂ ಬೇರೆಯವರೊಂದಿಗೆ ವಿವಾಹ ಮಾಡಿಕೊಳ್ಳುವ ಸ್ವಾತಂತ್ರ್ಯವೂ ಲಭಿಸದೆ ಇರುವ ಸ್ಥಿತಿಯಲ್ಲಿ ಸಿಲುಕಿರಲು ಬಿಡಬಾರದು ಎಂಬುದೇ ಆ ನಿಯಮ.

12. "ತಮ್ಮ ಪತ್ನಿಯರನ್ನು ಸಮೀಪಿಸಲಾರೆವೆಂದು ಶಪಥ ಮಾಡಿ ಕೊಂಡವರಿಗೆ ನಾಲ್ಕು ತಿಂಗಳುಗಳ ಕಾಲಾವಧಿ ಇದೆ." (ಅಲ್ ಬಕರ : 226)

ಈ ಸೂಕ್ತದಲ್ಲಿ ಮಹಿಳೆಯ ಸಾಮಾನ್ಯ ಸ್ಥೈರಣಾಶಕ್ತಿಯ ಕಡೆಗೆ ಸೂಚನೆ ನೀಡಲಾಗಿದೆ.ಅರ್ಥಾತ್ ನಾಲ್ಕು ತಿಂಗಳ ತನಕ ಆಕೆ ಕಷ್ಟವಿಲ್ಲದೆ ಹಾಗೂ ದೇವಸೀಮೆಯ ಭಯವಿಲ್ಲದೆ ಪತಿಯ ಸಹವಾಸದಿಂದ ವಿಹರಿತಳಾಗಿ ಇರಬಲ್ಲಳು.* ಆ ಬಳಿಕ ಈ ಎರಡರ ಪೈಕಿ ಯಾವುದಾದರೊಂದು ಸಂಭವಿಸುವ ಭಯವಿರುತ್ತದೆ. ಈ ಸೂಕ್ತಕ್ಕೂ ಒಂದು ವಿಶಿಷ್ಟ ಹಿನ್ನೆಲೆ ಇದೆ. ಆದರೆ ಇದು ಅಂತಹ ಹಿನ್ನೆಲೆಯ ಇತರ ವ್ಯವಹಾರಗಳಲ್ಲೂ ಮಾರ್ಗದರ್ಶನ ನೀಡುತ್ತದೆ.

13. ತಮ್ಮ ಪತ್ನಿಯರ ಮೇಲೆ ಆರೋಪ ಹೊರಿಸುವವರ ಬಳಿ ತಮ್ಮ ಹೊರತು ಬೇರೆ ಸಾಕ್ಷಿ ಇಲ್ಲದೆ ಹೋದಾಗ ಅವರ ಪೈಕಿ ಒಬ್ಬನ ಸಾಕ್ಷ್ಯ ಈ ರೀತಿ ಇರಲಿ: (ತನ್ನ ಆರೋಪದಲ್ಲಿ) ತಾನು ಸತ್ಯವಂತನೆಂದು ನಾಲ್ಕು ಸಲ ಅಲ್ಲಾಹನ ಆಣೆ ಹಾಕಿ ಹೇಳಬೇಕು ಮತ್ತು ಐದನೇ ಸಲ (ತನ್ನ ಆರೋಪ) ಸುಳ್ಳಾಗಿದ್ದರೆ ತನ್ನ ಮೇಲೆ ಅಲ್ಲಾಹನ ಶಾಪವಿರಲಿ. (ಎಂದು ಹೇಳಬೇಕು) (ಅನ್ನೂರ್ : 6)

ಈ ಸೂಕ್ತದಲ್ಲಿ 'ಲಿಆನ್' ಕಾನೂನು ಇದೆ. ಪತಿಯು ಪತ್ನಿಯ ಮೇಲೆ ವ್ಯಭಿಚಾರದ ಆರೋಪ ಹೊರಿಸಿದರೆ ಹಾಗೂ ಅದಕ್ಕೆ ಸಾಕ್ಷ್ಯ ಒದಗಿಸಲು ಅವನಿಗೆ ಸಾಧ್ಯವಾಗದಿದ್ದರೆ ಅವನಿಂದ ನಾಲ್ಕು ಬಾರಿ 'ನಾನು ಹೊರಿಸಿದ ಆರೋಪವು ಸತ್ಯವೆಂದು ಅಲ್ಲಾಹನ ಆಣೆ ಹಾಕಿ ಹೇಳುತ್ತೇನೆ' ಎಂದು ಆಣೆ ಹಾಕಿಸಲಾಗುವುದು. ಐದನೇ ಸಲ 'ನಾನು ಸುಳ್ಳನಾಗಿದ್ದರೆ ನನ್ನ ಮೇಲೆ ಅಲ್ಲಾಹನ ಶಾಪವಿರಲಿ' ಎಂದು ಹೇಳಿಸಲಾಗುವುದು. ತರುವಾಯ ಪತ್ನಿಯು ವ್ಯಭಿಚಾರದ ಶಿಕ್ಷೆಯಿಂದ ರಕ್ಷಣೆ ಹೊಂದಬೇಕಾದರೆ ಆಕೆಯೂ ನಾಲ್ಕು ಬಾರಿ ಅಲ್ಲಾಹನ ಆಣೆ ಹಾಕಿ 'ನನ್ನ ಪತಿಯ ಆರೋಪವು ಸುಳ್ಳು' ಎಂದು ಹೇಳಿ ಐದನೇ ಬಾರಿ 'ನನ್ನ ಪತಿಯ ಆರೋಪ ನಿಜವಾದರೆ ನನ್ನ ಮೇಲೆ ಅಲ್ಲಾಹನ ಶಾಪವಿರಲಿ' ಎಂದು ಹೇಳಬೇಕು. ಈ ರೀತಿಯ ಅಭಿಶಪನದ ಬಳಿಕ ದಂಪತಿಗಳನ್ನು ಬೇರ್ಪಡಿಸಲಾಗುವುದು.

---

* ಈ ನಿಯಮದ ಪ್ರಕಾರವೇ ಹ. ಉಮರ್(ರ)ರವರು ಯಾವುದೇ ವಿವಾಹಿತ ವ್ಯಕ್ತಿಯನ್ನು ಸೇನಾ ಕಾರ್ಯಕ್ಕಾಗಿ ನಾಲ್ಕು ತಿಂಗಳುಗಳಿಗಿಂತ ಅಧಿಕ ಕಾಲ ನಿರಂತರವಾಗಿ ಮನೆಯಿಂದ ದೂರವಿರಿಸಬಾರದೆಂದು ಆಜ್ಞಾಪಿಸಿದ್ದರು.

14. "...ಸ್ತ್ರೀಯು ಮೃದು ನೀತಿಯನ್ನನುಸರಿಸಿದರೆ (ಮತ್ತು ವಿವಾಹಧನ ಬಿಟ್ಟುಕೊಟ್ಟರೆ) ಅಥವಾ ವಿವಾಹ ಸಂಬಂಧವನ್ನು ಕೈಯಲ್ಲಿರಿಸಿ ಕೊಂಡಿರುವ ಪುರುಷನು ಮೃದು ನೀತಿಯನ್ನನುಸರಿಸಿದರೆ (ಮತ್ತು ಪೂರ್ಣ ವಿವಾಹಧನ ಕೊಟ್ಟು ಬಿಟ್ಟರೆ) ಅದು ಬೇರೆ ವಿಷಯ..." (ಅಲ್‌ಬಕರಃ : 237)

ಈ ಸೂಕ್ತದ ಕೊನೆಯ ಭಾಗದಲ್ಲಿ ನಿಕಾಹ್ ಬಂಧನವು ಪುರುಷನ ಕೈಯಲ್ಲಿದೆ. ಅವನೇ ಅದನ್ನು ಬಂಧಿಸಿಡುವ ಅಥವಾ ಮುರಿದು ಬಿಡುವ ಅಧಿಕಾರವನ್ನು ಹೊಂದಿದ್ದಾನೆ ಎಂಬ ನಿಯಮವು ವಿವರಿಸಲ್ಪಟ್ಟಿದೆ. ಪವಿತ್ರ ಕುರ್‌ಆನಿನಲ್ಲಿ ತಲಾಕ್‌ನ ಪ್ರಸ್ತಾಪ ಬಂದಲ್ಲೆಲ್ಲಾ ಸಂಬ ೀಧನೆಯು ಪುಲ್ಲಿಂಗದಲ್ಲಿ ಬಂದಿದೆ. ತಲಾಕ್‌ನ ಕಾರ್ಯವನ್ನು ಪುರುಷನ ಕಡೆಗೇ ಸೂಚಿಸಲಾಗಿದೆ. ಪತಿಯು ಪತಿಯೆಂಬ ನೆಲೆಯಲ್ಲಿ ತಲಾಕ್ ನೀಡುವ ಅಥವಾ ನೀಡದಿರುವ ಪೂರ್ಣ ಅಧಿಕಾರವನ್ನು ಹೊಂದಿದ್ದಾನೆ ಮತ್ತು ಅವನ ಈ ಹಕ್ಕನ್ನು ಕಸಿದುಕೊಳ್ಳುವ ಯಾವುದೇ ಕಾನೂನನ್ನು ನಿರ್ಮಿಸುವಂತಿಲ್ಲ ಎಂಬುದಕ್ಕೆ ಇದು ಪುರಾವೆಯಾಗಿದೆ.

ಆದರೆ ಇಸ್ಲಾಮಿನಲ್ಲಿ ಎಲ್ಲಾ ಹಕ್ಕುಗಳಿಗೂ ಒಂದು ಶರತ್ತು ಇದ್ದೇ ಇದೆ. ಯಾವುದೇ ಹಕ್ಕನ್ನು ಚಲಾಯಿಸುವಾಗ ಅನ್ಯಾಯವೆಸಗಬಾರದು ಮತ್ತು ಅಲ್ಲಾಹನ ಮೇರೆಗಳನ್ನು ಮೀರಬಾರದು ಎಂಬುದೇ ಆ ಶರತ್ತು.

"...ಅಲ್ಲಾಹನ ಮೇರೆಗಳನ್ನು ಮೀರುವವನು ತನ್ನ ಮೇಲೆ ತಾನೇ ಅಕ್ರಮವೆಸಗುವನು..." (ಅತ್ತಲಾಕ್ : 1)

"...ನೀವು ಅಕ್ರಮವೆಸಗಲೂ ಬಾರದು. ನಿಮ್ಮ ಮೇಲೆ ಅಕ್ರಮವಾಗಲೂ ಬಾರದು." (ಅಲ್ ಬಕರಃ : 279)

ಇದೊಂದು ಸಾಮಾನ್ಯ ನಿಯಮ. ಇಸ್ಲಾಮೀ ಕಾನೂನಿನ ಎಲ್ಲ ವಿಭಾಗಗಳಿಗೂ ಮತ್ತು ಎಲ್ಲ ವಿಷಯಗಳಿಗೂ ಇದು ಅನ್ವಯಿಸುತ್ತದೆ. ಪುರುಷನ ತಲಾಕ್‌ನ ಹಕ್ಕು ಕೂಡಾ ಇದರಿಂದ ಹೊರತಲ್ಲ. ಓರ್ವ ಮಹಿಳೆ ತನ್ನ ಪತಿ ತನ್ನ ಮೇಲೆ ಅನ್ಯಾಯ ಮಾಡುತ್ತಾನೆಂದು ಆರೋಪಿಸಿದರೆ 'ನಿಮ್ಮೊಳಗೆ ಯಾವುದಾದರೂ ವಿಷಯದಲ್ಲಿ ಭಿನ್ನಾಭಿಪ್ರಾಯ ಉಂಟಾದರೆ ಅದನ್ನು ಅಲ್ಲಾಹನ ಮತ್ತು ಆತನ ಪ್ರವಾದಿಯ ಕಡೆಗೆ ಮರಳಿಸಿರಿ' ಎಂಬ ನಿಯಮದಂತೆ ಆಕೆಯ ಆರೋಪವು ಸರಿಯೆಂದು ಸಾಬೀತಾದರೆ ಕಾನೂನನ್ನು ಜಾರಿಗೊಳಿಸುವವರಿಗೆ ಅರ್ಥಾತ್ ಸಮುದಾಯದ ನಾಯಕರಿಗೆ ಆ ಪತಿಯನ್ನು ತಲಾಕ್‌ನ ಹಕ್ಕಿನಿಂದ ವಂಚಿತಗೊಳಿಸಿ ಆ ಹಕ್ಕನ್ನು ತಾವೇ ಬಳಸುವ ಅಧಿಕಾರವಿರುವುದು. ಕಾಝಿ (ನ್ಯಾಯಾಧೀಶ)ಗೆ ನೀಡಲಾಗಿರುವ ಫಸ್ಖ್,* ತಫ್ರೀಕ್** ಮತ್ತು ತತ್‌ಲೀಕ್‌ನ*** ಅಧಿಕಾರಗಳನ್ನು ಶರೀಅತ್‌ನಲ್ಲಿ ಈ ನಿಯಮದ ಪ್ರಕಾರವೇ ನೀಡಲಾಗಿದೆ. ಕರ್ಮಶಾಸ್ತ್ರ ಪಂಡಿತರ ಒಂದು ವಿಭಾಗವು 'ವಿವಾಹ ಬಂಧನವು ಯಾರ

---

* ವಿವಾಹವನ್ನು ಅನೂರ್ಜಿತಗೊಳಿಸುವುದು.

** ಪತಿ-ಪತ್ನಿಯರನ್ನು ಬೇರ್ಪಡಿಸುವುದು.

*** ಪತಿಯಿಂದ 'ತಲಾಕ್'ನ ಹಕ್ಕನ್ನು ಕಸಿದುಕೊಂಡು ಕಾಝಿಯವರು ತಮ್ಮ ಸ್ವಂತ ಅಧಿಕಾರದಿಂದ ತಲಾಕ್ ನೀಡುವುದು.

ಕೈಯಲ್ಲಿದೆಯೋ' ಎಂಬ ಸೂಕ್ತದ ಆಧಾರದಲ್ಲಿ ಪುರುಷನಿಗೆ ನೀಡಲ್ಪಟ್ಟಿರುವ ತಲಾಕ್‌ನ ಹಕ್ಕು ನಿಶ್ಶರ್ತವಾಗಿದೆ ಮತ್ತು ಈ ನಿಯಮದಲ್ಲಿ ಯಾವುದೇ ಅಪವಾದ (Exception) ಇಲ್ಲ. ಪುರುಷನು ತಲಾಕ್ ಕೊಡಲು ಸಿದ್ಧನಿಲ್ಲದಿದ್ದರೆ ಯಾವ ಪರಿಸ್ಥಿತಿಯಲ್ಲೂ ತಲಾಕ್‌ನ ಹಕ್ಕನ್ನು ಅವನಿಂದ ಕಸಿದು ಸ್ವಯಂ ತಲಾಕ್‌ನ ಹಕ್ಕನ್ನು ಉಪಯೋಗಿಸುವ ಅಧಿಕಾರ ಕಾಝಿಗೆ ಇಲ್ಲವೆಂದು ವಾದಿಸುತ್ತದೆ.

ಆದರೆ ಪವಿತ್ರ ಕುರ್‌ಆನ್ ಈ ಅಭಿಪ್ರಾಯವನ್ನು ಸಮರ್ಥಿಸುವುದಿಲ್ಲ. ಪವಿತ್ರ ಕುರ್‌ಆನಿನ ಪ್ರಕಾರ ಮನುಷ್ಯನ ಜೀವಿಸುವ ಹಕ್ಕು ಕೂಡಾ ಶರ್ತಬದ್ಧವಾಗಿದೆ. ಹಾಗಿರುವಾಗ ಆತನ ತಲಾಕ್‌ನ ಹಕ್ಕನ್ನು ನಿಶ್ಶರ್ತವೆಂದು ಪರಿಗಣಿಸುವುದಾದರೂ ಹೇಗೆ? ಅವನು ಅನ್ಯಾಯವೆಸಗಿದರೆ, ಅಲ್ಲಾಹನ ಎಲ್ಲ ಮೇರೆಗಳನ್ನೂ ಮೀರಿ ನಡೆದರೆ ಮತ್ತು ಪತ್ನಿಯ ಎಲ್ಲ ಹಕ್ಕುಗಳನ್ನೂ ಉಲ್ಲಂಘಿಸಿದರೆ ಆಗಲೂ ಅವನ ಆ ಹಕ್ಕು ಅಬಾಧಿತವಾಗಿ ಉಳಿಯಲು ಹೇಗೆ ತಾನೇ ಸಾಧ್ಯ?

15. **"ತಲಾಕ್ (ವಿವಾಹ ವಿಚ್ಛೇದನ) ಎರಡು ಸಲ. ಅನಂತರ ನ್ಯಾಯೋಚಿತವಾಗಿ ಸ್ತ್ರೀಯನ್ನು ತಡೆದಿರಿಸಿಕೊಳ್ಳಬೇಕು ಅಥವಾ ಯೋಗ್ಯ ರೀತಿಯಿಂದ ಅವಳನ್ನು ಬಿಡುಗಡೆಗೊಳಿಸಬೇಕು...ಮತ್ತು (ಪತಿಯು ಎರಡು ಬಾರಿ ತಲಾಕ್ ಕೊಟ್ಟ ಬಳಿಕ ಮೂರನೇ ಬಾರಿಯೂ) ತಲಾಕ್ ಕೊಟ್ಟು ಬಿಟ್ಟರೆ ಆ ಸ್ತ್ರೀಯ ನಿಕಾಹ್ ಇನ್ನೊಬ್ಬನೊಂದಿಗೆ ಆಗಿ ಅವನು ತಲಾಕ್ ಕೊಡುವ ಹೊರತು ಅವಳು ಪುನಃ ಅವನಿಗೆ (ಮೊದಲಿನ ಪತಿಗೆ) ಹಲಾಲ್ ಆಗಲಾರಳು..." (ಅಲ್ ಬಕರಃ : 229-230)**

ಈ ಸೂಕ್ತದಲ್ಲಿ ತಲಾಕ್‌ನ ಎಣಿಕೆಯನ್ನು ತಿಳಿಸಲಾಗಿದೆ. ಎರಡು ಸಲದ ತಲಾಕ್ ಮಾತ್ರ ರಜಈ (ಸಂಬಂಧ ಪುನಸ್ಥಾಪನೆಗೆ ಅವಕಾಶವಿರುವ ತಲಾಕ್) ಆಗಿದ್ದು ಮೂರನೇ ಸಲದ ತಲಾಕ್ 'ಮುಗಲ್ಲಝಃ' (ಅಂತಿಮವಾಗಿ ಬೇರ್ಪಡಿಸಿ ಬಿಡುವ ತಲಾಕ್) ಎನಿಸುತ್ತದೆ.

# ಇತರ ನಿಯಮಗಳು

ಹಿಂದಿನ ಅಧ್ಯಾಯದಲ್ಲಿ ಮೂಲಭೂತ ಆದೇಶಗಳನ್ನು ವಿವರಿಸಿರುವಂತಹ ಕ್ರಮದಲ್ಲೇ ಇಲ್ಲಿ ನಾವು ಆ ಪೈಕಿ ಒಂದೊಂದೇ ಆದೇಶಕ್ಕೆ ಸಂಬಂಧಿಸಿದ ಆಂಶಿಕ ವಿಷಯಗಳನ್ನೂ ವಿವರಿಸುವೆವು. ಇಲ್ಲಿ ನಾವು ಎಲ್ಲ ಆಂಶಿಕ ವಿಷಯಗಳ ಕುರಿತು ಚರ್ಚಿಸ ಬಯಸುವುದಿಲ್ಲ. ಕಾಲದ ಪರಿಸ್ಥಿತಿ ಮತ್ತು ಬೇಡಿಕೆಗಳಿಗನುಸಾರವಾಗಿ ಕರ್ಮಶಾಸ್ತ್ರ ವಿಧಿಗಳಲ್ಲಿ ಪುನರವಲೋಕನ ನಡೆಸುವ ಅಗತ್ಯ ಇರುವಂತಹ ವಿಶೇಷ ವಿಷಯಗಳ ಮಾತ್ರ ವಿಶದೀಕರಿಸ ಬಯಸುತ್ತೇವೆ.

## 1. ದಂಪತಿಗಳ ಪೈಕಿ ಒಬ್ಬರ ಧರ್ಮಭ್ರಷ್ಟತೆ

ಪ್ರಸಕ್ತ ಕಾಲದಲ್ಲಿ ಧರ್ಮಭ್ರಷ್ಟತೆಯ ಸಮಸ್ಯೆಯು ಬಹಳ ಮಹತ್ವ ಪಡೆದಿದೆ. ಪುರುಷನ ಧರ್ಮಭ್ರಷ್ಟತೆಯನ್ನು ಕುರಿತು ಹೇಳುವುದಾದರೆ ಅದರಲ್ಲಿ ಯಾವುದೇ ಕ್ಲಿಷ್ಟತೆ ಇಲ್ಲ. ಏಕೆಂದರೆ ಓರ್ವ ಮುಸ್ಲಿಮ್ ಸ್ತ್ರೀಯು ಯಾವನೇ ಮುಸ್ಲಿಮೇತರನ ವಿವಾಹ ಬಂಧನದಲ್ಲಿ ಇರಲು ಸಾಧ್ಯವಿಲ್ಲವೆಂಬುದು ಸರ್ವಸಮ್ಮತ ವಿಷಯ. ಆದರೆ ಪತ್ನಿಯ ಧರ್ಮಭ್ರಷ್ಟತೆಯ ವಿಷಯದಲ್ಲಿ ಕ್ಲಿಷ್ಟತೆ ಉಂಟಾಗಿದೆ. ಅನೇಕ ಸ್ತ್ರೀಯರು ತಮಗಿಷ್ಟವಿಲ್ಲದ ಅಥವಾ ತಮಗೆ ಕಿರುಕುಳ ಕೊಡುವ ಪತಿಯಂದಿರಿಂದ ಬೇರ್ಪಡುವ ಸಲುವಾಗಿಯೇ ಧರ್ಮತ್ಯಾಗ ಮಾಡಿದ್ದಾರೆ. ಈ ವಿಷಯದಲ್ಲಿ ಆಂಗ್ಲ ನ್ಯಾಯಾಲಯಗಳು 'ಹಿದಾಯಃ'ದಲ್ಲಿರುವ ಇಮಾಮ್ ಅಬೂ ಹನೀಫರಿಂದ ಉಲ್ಲೇಖಿತವಾಗಿರುವ 'ದಂಪತಿಗಳ ಪೈಕಿ ಯಾರಾದರೊಬ್ಬರು ಧರ್ಮತ್ಯಾಗ ಮಾಡಿದರೆ ತಲಾಕ್ ಇಲ್ಲದೆಯೇ ಬೇರ್ಪಡೆ ಆಗಿ ಬಿಡುತ್ತದೆ'* ಎಂಬ ಮಾತಿನ ಪ್ರತ್ಯಕ್ಷ ಅರ್ಥದ ಪ್ರಕಾರವೇ ತೀರ್ಮಾನ ಮಾಡುತ್ತವೆ. ಆದರೆ ಭಾರತೀಯ ಉಲೆಮಾಗಳು ಇಂತಹ ಧರ್ಮತ್ಯಾಗದ ಪಿಡುಗನ್ನು ನಿವಾರಿಸುವ ಸಲುವಾಗಿ ಬಲ್ಖ್, ಸಮರ್‌ಕಂದ್ ಹಾಗೂ ಬುಖರಾದ ಕೆಲವು ಧರ್ಮ ಪಂಡಿತರ ಧರ್ಮ ವಿಧಿಯನ್ನು ಅನುಸರಿಸ ಬಯಸುತ್ತಾರೆ. ಅವರ ಧರ್ಮ ವಿಧಿಯಂತೆ ಧರ್ಮ ತ್ಯಾಗದಿಂದ ಸ್ತ್ರೀಯ ವಿವಾಹವು ಅಸಿಂಧುವಾಗುವುದಿಲ್ಲ. ಆಕೆ ತನ್ನ ಮುಸ್ಲಿಮ್ ಪತಿಯ ವಿವಾಹ ಬಂಧನದಲ್ಲೇ ಮುಂದುವರಿಯುತ್ತಾಳೆ. ಈ ಧರ್ಮ ವಿಧಿಗೆ ಆಧಾರವೇನೆಂದರೆ ಕೇವಲ ವಿವಾಹ ಬಂಧನದಿಂದ ಮುಕ್ತಿ ಪಡೆಯುವ ಸಲುವಾಗಿ ಪತ್ನಿಯು ಧರ್ಮತ್ಯಾಗ ಮಾಡುತ್ತಿರುವುದರಿಂದ ಇಂತಹ ಧರ್ಮ ತ್ಯಾಗದಿಂದ ವಿವಾಹ ಬಂಧನದ ಮೇಲೆ ಯಾವುದೇ ರೀತಿಯ ಪರಿಣಾಮ ಬೀಳುತ್ತದೆಂಬುದನ್ನು

* ತಾತ್ಪರ್ಯವೇನೆಂದರೆ ಸ್ತ್ರೀಯು ತನ್ನ ಮುಸ್ಲಿಮ್ ಪತಿಯ ಮಟ್ಟಿಗೆ ಧರ್ಮಬಾಹಿರಳಾಗಿ ಬಿಡುತ್ತಾಳೆ. ಆದರೆ ಈ ಬೇರ್ಪಡೆಯಿಂದ ಆಕೆಗೆ ಬೇರೆ ವಿವಾಹವಾಗುವ ಹಕ್ಕು ಲಭಿಸುವುದಿಲ್ಲ.

ನಿರಾಕರಿಸುವುದೇ ಈ ನೆಪವನ್ನು ತಡೆಯುವ ಮಾರ್ಗೋಪಾಯವಾಗಿದೆ. ಆದರೆ ಈ ದರ್ಮ ವಿಧಿಯನ್ನು ಸ್ವೀಕರಿಸಲು ಕೆಲವು ತೊಡಕುಗಳಿವೆ. ಪ್ರಾಯಶಃ ಅವುಗಳ ಕಡೆಗೆ ಆ ಧರ್ಮ ಪಂಡಿತರ ಗಮನ ಹರಿದಿರಲಿಕ್ಕಿಲ್ಲ.

1. ಇಸ್ಲಾಮ್ ಮತ್ತು ಕುಫ್ರ್‌ನ ವಿಷಯದಲ್ಲಿ ರಾಷ್ಟ್ರದ ಕಾನೂನು ಮತ್ತು ಇಸ್ಲಾಮೀ ಶರೀಅತ್‌ಗಳೆರಡೂ ಕೇವಲ ಬಾಯಿ ಮಾತಿನ ಮೇಲೆ ಭರವಸೆ ಇಡುತ್ತವೆ ಓರ್ವ ಮಹಿಳೆ ಮನಸಾರೆ ಧರ್ಮತ್ಯಾಗ ಮಾಡಲಿಲ್ಲ, ಕೇವಲ ತನ್ನ ಪತಿಯಿಂದ ಬೇರ್ಪಡುವ ಸಲುವಾಗಿ ಧರ್ಮತ್ಯಾಗ ಮಾಡಿದ್ದಾಳೆ ಎಂದು ಸಾಬೀತುಗೊಳಿಸುವ ಯಾವ ಮಾಧ್ಯಮವೂ ನಮ್ಮ ಬಳಿ ಇಲ್ಲ.

2. ಮಹಿಳೆಯು ಗ್ರಂಥದವರ ಪೈಕಿ ಯಾವುದಾದರೂ ಧರ್ಮವನ್ನು ಸ್ವೀಕರಿಸಿದ್ದರೆ 'ಗ್ರಂಥದವರ ಪೈಕಿ ಸುರಕ್ಷಿತ ಮಹಿಳೆಯರು' ಎಂಬ ಕುರ್‌ಆನಿನ ಅನುಮತಿಯಿಂದ ಪ್ರಯೋಜನ ಪಡೆಯಬಹುದಾಗಿದೆ. ಆದರೆ ಮಹಿಳೆಯು ಹಿಂದೂ ಅಥವಾ ಫಾರ್ಸಿ ಧರ್ಮಸ್ವೀಕಾರ ಮಾಡಿದರೆ ಅಥವಾ ಇನ್ನಿತರ ಗ್ರಂಥದವರಲ್ಲದ ಜನರ ಧರ್ಮ ಸ್ವೀಕಾರ ಮಾಡಿದ್ದರೆ ಆಕೆ ಓರ್ವ ಮುಸ್ಲಿಮ್ ಪತಿಯ ವಿವಾಹ ಬಂಧನದಲ್ಲಿರುವುದು ಪವಿತ್ರ ಕುರ್‌ಆನಿನ ಸ್ಪಷ್ಟ ಆದೇಶಕ್ಕೆ ವಿರುದ್ಧವಾಗಿದೆ.

3. ಓರ್ವ ಮಹಿಳೆ ಇಸ್ಲಾಮ್ ಧರ್ಮವನ್ನು ತ್ಯಜಿಸಿ ಇತರ ಧರ್ಮ ಸ್ವೀಕರಿಸಿದ ಬಳಿಕ ಆಕೆಯ ಮೇಲೆ ಇಸ್ಲಾಮೀ ಕಾನೂನು ಜಾರಿಯಾಗಲು ಹೇಗೆ ಸಾಧ್ಯ? ನಾವು ಒಂದು ಇಸ್ಲಾಮೇತರ ಸರಕಾರದ ಅಧೀನದಲ್ಲಿದ್ದೇವೆ. ಈ ಸರಕಾರದ ದೃಷ್ಟಿಯಲ್ಲಿ ಮುಸ್ಲಿಮ್, ಹಿಂದೂ, ಸಿಖ್ಖ್ ಎಲ್ಲರೂ ಸಮಾನರು. ಇಂತಹ ಸರಕಾರವು ಓರ್ವ ಮಹಿಳೆ ಇಸ್ಲಾಮ್ ತೊರೆದು ಸಿಖ್ಖ್ ಅಥವಾ ಹಿಂದೂ ಧರ್ಮ ಸ್ವೀಕರಿಸಿದ ಬಳಿಕ ಆಕೆಯನ್ನು ಆಕೆಯ ಇಚ್ಛೆಗೆ ವಿರುದ್ಧವಾಗಿ ಈ ಹಿಂದೆ ಇಸ್ಲಾಮೀ ಕಾನೂನಿನ ಪ್ರಕಾರ ನಡೆದ ಆಕೆಯ ಪೂರ್ವ ವಿವಾಹದಲ್ಲೇ ಸ್ಥಿರವಾಗಿರುವಂತೆ ನಿರ್ಬಂಧಿಸುವುದೆಂದು ನಿರೀಕ್ಷಿಸಲು ಹೇಗೆ ಸಾಧ್ಯ?

ಈ ಕಾರಣಗಳಿಂದಾಗಿ ಬಲ್ಖ್ ಮತ್ತು ಸಮರ್‌ಕಂದ್‌ನ ಉಲೆಮಾಗಳ ಧರ್ಮ ವಿಧಿಯಿಂದ ಭಾರತದ ಮುಸ್ಲಿಮ್ ಉಲೆಮಾಗಳು ಪ್ರಯೋಜನ ಪಡೆಯಲು ಸಾಧ್ಯವಿಲ್ಲವೆಂದು ನಮ್ಮ ಅಭಿಪ್ರಾಯ. ವಾಸ್ತವದಲ್ಲಿ ಮಹಿಳೆಯರು ಧರ್ಮತ್ಯಾಗ ಏಕೆ ಮಾಡುತ್ತಾರೆ ಎಂಬುದನ್ನು ನೋಡಬೇಕಾಗಿದೆ. ಅವರ ಪೈಕಿ ಹೆಚ್ಚೆಂದರೆ ಕೇವಲ ಮೂರು ನಾಲ್ಕು ಶೇಕಡಾ ಮಂದಿ ಮಾತ್ರ ವಿಶ್ವಾಸದ ಮಾರ್ಪಾಟಿನಿಂದಾಗಿ ಧರ್ಮತ್ಯಾಗ ಮಾಡುತ್ತಾರೆಂದು ಖಾತ್ರಿಯಾಗಿ ಹೇಳಬಹುದು. ವಾಸ್ತವದಲ್ಲಿ ಅಕ್ರಮ ಅನ್ಯಾಯಗಳ ಅನೇಕ ಸನ್ನಿವೇಶಗಳಲ್ಲಿ ಪ್ರಸಕ್ತ ಜಾರಿಯಲ್ಲಿರುವ ಕಾನೂನಿನ ಪ್ರಕಾರ ಮಹಿಳೆಯರಿಗೆ ನ್ಯಾಯ ದೊರಕಿಸುವ ಯಾವ ಮಾರ್ಗವೂ ಇಲ್ಲದೆ ಇರುವುದೇ ಅವರನ್ನು ಧರ್ಮತ್ಯಾಗಕ್ಕೆ ಪ್ರೇರೇಪಿಸುವ ಅಂಶವಾಗಿದೆ. ಪತಿಯು ಅತ್ಯುಗ್ರವಾದ ಅನ್ಯಾಯಗಳನ್ನೆಸಗುತ್ತಾನೆ. ಆದರೆ ಪತ್ನಿಯು ಆತನಿಂದ ಖುಲಾ ಪಡೆಯುವಂತಿಲ್ಲ. ಪತಿಯು ನಿರುಪಯುಕ್ತನಾಗಿದ್ದಾನೆ, ಬುದ್ಧಿ ಭ್ರಮಣಕ್ಕೊಳಗಾಗಿದ್ದಾನೆ, ಮಾರಕ ಅಥವಾ ಅಸಹ್ಯ ರೋಗಗಳಿಗೆ ತುತ್ತಾಗಿದ್ದಾನೆ ಅಥವಾ ಅತ್ಯಂತ ಕೆಟ್ಟ ಚಾಳಿಗಳನ್ನು ಬೆಳೆಸಿಕೊಂಡಿದ್ದಾನೆ. ಪತ್ನಿಗೆ ಆತನ ಹೆಸರೆತ್ತಿದರೆ ಜಿಗುಪ್ಸೆಯಾಗುತ್ತದೆ. ಪರಸ್ಪರ ಸಂಬಂಧವು ಕಡಿದು ಹೋಗಿದೆ. ಆದರೆ ವಿವಾಹ ಬಂಧನದಿಂದ

ವಿಮೋಚನೆ ಪಡೆಯುವ ಯಾವ ಉಪಾಯವೂ ಇಲ್ಲ. ಪತಿ ನಾಪತ್ತೆಯಾಗಿದ್ದಾನೆ. ಅನೇಕ ವರ್ಷಗಳಿಂದ ಅವನ ಸುಳಿವೇ ಇಲ್ಲ. ಪತ್ನಿಗೆ ಜೀವನದ ಬಗೆಗೇ ಜಿಗುಪ್ಸೆ ಹುಟ್ಟಿದೆ. ಆದರೆ ಈ ಸಂಕಷ್ಟದಿಂದ ಹೊರಬರುವ ಯಾವ ಮಾರ್ಗವೂ ಗೋಚರಿಸುವುದಿಲ್ಲ. ಇಂತಹ ಪರಿಸ್ಥಿತಿಗಳೇ ಪತ್ನಿಯರನ್ನು ಇಸ್ಲಾಮ್ ಧರ್ಮವನ್ನು ತ್ಯಜಿಸಿ ಕುಫ್ರ್‌ನ ಆಶ್ರಯ ಪಡೆಯಲು ನಿರ್ಬಂಧಿಸುತ್ತವೆ. ಅಲ್ಲಿಂದ ಕೆಲವು ಕರ್ಮಶಾಸ್ತ್ರದ ವಿಧಿಗಳನ್ನು ಹುಡುಕಿ ತಂದು ಆ ಮೂಲಕ ಆ ಬಡಪಾಯಿ ಅಬಲೆಯರಿಗೆ ಕುಫ್ರ್‌ನ ಆಶ್ರಯವೂ ಉಳಿಯದಂತೆ ಮಾಡುವುದು ಮತ್ತು ಅವರನ್ನು ಧರ್ಮತ್ಯಾಗದ ಬದಲು ಪ್ರಾಣ ತ್ಯಾಗಕ್ಕೆ ನಿರ್ಬಂಧಿಸುವುದು ಈ ಸಮಸ್ಯೆಯ ಸರಿಯಾದ ಪರಿಹಾರವಲ್ಲ. ಇದಕ್ಕಿರುವ ಏಕೈಕ ಪರಿಹಾರವೆಂದರೆ ನಾವು ನಮ್ಮ ಕಾನೂನನ್ನೊಮ್ಮೆ ಪರಿಶೀಲಿಸಬೇಕು. ಸಂಶೋಧನಾತ್ಮಕ (ಇಜ್ತಿಹಾದ್ ಆಧಾರಿತ)ವಿಧಿಗಳಲ್ಲಿ ಪರಿಸ್ಥಿತಿಯ ಬೇಡಿಕೆಗಳಿಗನು ಸಾರವಾಗಿ ತಿದ್ದುಪಡಿ ಮತ್ತು ಸುಧಾರಣೆ ಮಾಡಬೇಕು. ಅವುಗಳ ಕಾಠಿಣ್ಯದಿಂದಾಗಿಯೇ ನಮ್ಮ ಸಹ ೀದರಿಯರು ಮತ್ತು ಮಕ್ಕಳು ಇಸ್ಲಾಮ್ ತೊರೆದು ಇತರ ಧರ್ಮಗಳತ್ತ ಹೋಗಲು ನಿರ್ಬಂಧಿತರಾಗಿದ್ದಾರೆ. ಅಲ್ಲಾಹ್ ಮತ್ತು ಪ್ರವಾದಿವರ್ಯರಿಂದ(ಸ) ಬಂದ ಸ್ಪಷ್ಟ ವಿಧಿಗಳಲ್ಲಂತೂ ಅಂತಹ ಯಾವುದೇ ನ್ಯೂನತೆ ಇಲ್ಲ. ಅವುಗಳಲ್ಲಿ ಮಹಿಳೆಯರನ್ನು ಅಸಹಾಯಕರಾಗಿ ಮಾಡುವ ಅವರಿಗೆ ಕಂಟಕ ನೀಡುವ ಅಥವಾ ಧರ್ಮತ್ಯಾಗ ಮಾಡುವಂತೆ ಅವರನ್ನು ನಿರ್ಬಂಧಿಸುವಂತಹ ಯಾವುದೆ ಸಂಕುಚಿತತೆಯೂ ಇಲ್ಲ. ಈ ನ್ಯೂನತೆ ಇರುವುದು ಕೇವಲ ಕೆಲವು ಸಂಶೋಧನಾತ್ಮಕ (ಇಜ್ತಿಹಾದ್ ಆಧಾರಿತ) ವಿಧಿಗಳಲ್ಲಿ ಮಾತ್ರ. ಅವುಗಳನ್ನು ಬದಲಿಸಿ ಇತರ ಸೂಕ್ತ 'ಇಜ್ತಿಹಾದ್' ಆಧಾರಿತ ವಿಧಿಗಳನ್ನು ಜಾರಿಗೊಳಿಸುವ ಮೂಲಕ ಮಹಿಳೆಯರ ಧರ್ಮ ತ್ಯಾಗದ ದ್ವಾರವನ್ನು ಶಾಶ್ವತವಾಗಿ ಮುಚ್ಚಿ ಬಿಡಲು ಸಾಧ್ಯವಿದೆ.

## 2. ಆಯ್ಕೆಯ ಹಕ್ಕು

ಮಹಿಳೆಯ ವಿವಾಹದಲ್ಲಿ ಆಕೆಯ ಸಂರಕ್ಷಕರ ಅಭಿಪ್ರಾಯವನ್ನೂ ಗಣನೆಗೆ ತೆಗೆದುಕೊಳ್ಳಬೇಕೆಂಬ ನಿಯಮವು ಪವಿತ್ರ ಕುರ್‌ಆನಿನಲ್ಲಿದೆ. ಆದರೆ ಪ್ರವಾದಿ ಮುಹಮ್ಮದ್(ಸ) ತಮ್ಮ ನಡೆ-ನುಡಿಗಳಿಂದ ಈ ನಿಯಮಕ್ಕೆ ನೀಡಿರುವ ವ್ಯಾಖ್ಯಾನವನ್ನು ಗಮನಿಸಿದರೆ ಸಂರಕ್ಷಕರ ಅಭಿಪ್ರಾಯ ಪರಿಗಣಿಸುವುದರ ಅರ್ಥ ಮಹಿಳೆಗೆ ತನ್ನ ಜೀವನದ ಈ ಪ್ರಾಮುಖ್ಯ ವಿಷಯದಲ್ಲಿ ಯಾವ ಅಧಿಕಾರವೂ ಇಲ್ಲವೆಂದಲ್ಲ ಎಂಬುದು ಸ್ಪಷ್ಟವಾಗುತ್ತದೆ. ವಿವಾಹದ ವಿಷಯದಲ್ಲಿ ಮಹಿಳೆಯಿಂದ ಆಕೆಯ ಸಮ್ಮತಿಯನ್ನು ಪಡೆಯಬೇಕೆಂಬುದು ಪ್ರವಾದಿವರ್ಯರು(ಸ) ಆಕೆಗೆ ನೀಡಿರುವ ಹಕ್ಕಾಗಿದೆ. ಅಬೂದಾವೂದ್, ನಸಾಈ ಇಬ್ನು ಮಾಜಃ ಮತ್ತು ಮುಸ್ನದ್ ಅಹ್ಮದ್ ಎಂಬ ಹದೀಸ್ ಗ್ರಂಥಗಳಲ್ಲಿ ಹ. ಇಬ್ನು ಅಬ್ಬಾಸ್(ರ) ಅವರಿಂದ ಉಲ್ಲೇಖಿತವಾಗಿರುವ ಈ ಹದೀಸ್ ವರದಿಯ ಪ್ರಕಾರ ಒಮ್ಮೆ 'ನನ್ನ ತಂದೆಯು ನನ್ನ ಇಚ್ಛೆಗೆ ವಿರುದ್ಧವಾಗಿ ನನ್ನ ಮದುವೆ ಮಾಡಿರುವರು' ಎಂದು ಓರ್ವ ಹೆಣ್ಣು ಪ್ರವಾದಿಯರವರ(ಸ) ಬಳಿ ದೂರು ಸಲ್ಲಿಸಿದಳು. ಆಗ ಪ್ರವಾದಿವರ್ಯರು(ಸ) 'ನಿನಗೆ ಅದನ್ನು ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕು ಇದೆ' ಎಂದು ಹೇಳಿದಳರು. ನಸಾಈಯಲ್ಲಿ ಖನ್‌ಸಾ ಬಿಂತು ಹಿಝಾಮ್‌ರವರಿಂದ ಒಂದು

ವರದಿ ಉಲ್ಲೇಖಿಸಲ್ಪಟ್ಟಿದೆ. ಅದರ ಪ್ರಕಾರ, ಅವರ ತಂದೆಯು ಅವರ ಇಚ್ಛೆಗೆ ವಿರುದ್ಧವಾಗಿ ಅವರ ವಿವಾಹ ಮಾಡಿಕೊಟ್ಟರು. ಪ್ರವಾದಿವರ್ಯರು(ಸ) ಅವರಿಗೆ ಕೂಡಾ ಅದೇ ಹಕ್ಕನ್ನು ನೀಡಿದರು. ದಾರುಕುತ್‌ನಿಯಲ್ಲಿ ಹ. ಜಾಬಿರ್(ರ)ರವರ ವರದಿ ಪ್ರಕಾರ ಇಂತಹದೇ ಒಂದು ಮೊಕದ್ದಮೆಯಲ್ಲಿ ಹೆಣ್ಣಿನ ಒಪ್ಪಿಗೆ ಇಲ್ಲದೆ ವಿವಾಹ ನಡೆದಿದೆ ಎಂಬ ಕಾರಣಕ್ಕಾಗಿ ಪ್ರವಾದಿವರ್ಯರು(ಸ) ಆ ವಿವಾಹವನ್ನು ಅಸಿಂಧುಗೊಳಿಸಿ ಪತಿ-ಪತ್ನಿಯರನ್ನು ಬೇರ್ಪಡಿಸಿದರು. ನಸಾಈಯಲ್ಲಿ. ಹ. ಆಯಿಷ(ರ)ರವರಿಂದ ಈ ರೀತಿ ವರದಿಯಾಗಿದೆ; "ಓರ್ವ ಹೆಣ್ಣು ಪ್ರವಾದಿ(ಸ)ರಲ್ಲಿ ಈ ರೀತಿ ದೂರು ಸಲ್ಲಿಸಿದಳು. ನನ್ನ ತಂದೆಯವರು ನನ್ನ ಇಚ್ಛೆಗೆ ವಿರುದ್ಧವಾಗಿ ಅವರ ಭ್ರಾತೃಜನೊಂದಿಗೆ ನನ್ನ ವಿವಾಹ ಮಾಡಿಸಿದರು. ಪ್ರವಾದಿ(ಸ) ಆಕೆಗೆ ಆ ವಿವಾಹವನ್ನು ಬೇಕಿದ್ದರೆ ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ನೀಡಿದರು. ಆಗ ಆ ಯುವತಿ ಈ ರೀತಿ ಹೇಳಿದಳು: ಪ್ರವಾದಿವರ್ಯರೇ! ನನ್ನ ತಂದೆಯವರು ಮಾಡಿರುವುದನ್ನು ನಾನು ಅಂಗೀಕರಿಸುತ್ತೇನೆ. ತಂದೆಯವರು ಈ ವಿಷಯದಲ್ಲಿ ಪೂರ್ಣಾಧಿಕಾರ ಉಳ್ಳವರಲ್ಲ ಎಂದು ಮಹಿಳೆಯರಿಗೆ ತಿಳಿಸುವುದೇ ನನ್ನ ಉದ್ದೇಶವಾಗಿತ್ತು.'

ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ನಸಾಈ ಮತ್ತು ಮುವತ್ತಾದಲ್ಲಿ ವರದಿಯಾಗಿರುವಂತೆ ಪ್ರವಾದಿ(ಸ) ಹೀಗೆ ಹೇಳಿರುವರು:

"ವಿಧವೆ ಅಥವಾ ವಿಚ್ಛೇದಿತ ಮಹಿಳೆಗೆ ತನ್ನ ವಿಷಯದಲ್ಲಿ ತೀರ್ಮಾನ ಮಾಡಲು ತನ್ನ ರಕ್ಷಕರಿಗಿಂತ ಹೆಚ್ಚು ಹಕ್ಕಿದೆ. ಕನ್ಯೆಯಿಂದ ಆಕೆಯ (ವಿವಾಹದ) ಬಗ್ಗೆ ಸಮ್ಮತಿ ಪಡೆಯಬೇಕು."

ಪ್ರವಾದಿ(ಸ) ಈ ರೀತಿ ಹೇಳಿರುವುದಾಗಿ ಹ. ಅಬೂ ಹುರೈರಾ(ರ) ಅವರು, ವರದಿ ಮಾಡಿರುವರು;

"ವಿಧವೆ ಅಥವಾ ವಿಚ್ಛೇದಿತ ಮಹಿಳೆಯ ವಿವಾಹವನ್ನು ಆಕೆಯ ಅನುಮತಿ ಪಡೆಯದೆ ಮಾಡಬಾರದು. ಕನ್ಯೆಯ ವಿವಾಹವನ್ನೂ ಆಕೆಯ ಅನುಮತಿ ಪಡೆಯದೆ ಮಾಡಿಸಬಾರದು."

## 3. ಅಪ್ರಾಪ್ತ ವಯಸ್ಕಳ ವಿವಾಹ ಮತ್ತು ಸಂರಕ್ಷಕರ ನಿರಂಕುಶಾಧಿಕಾರ

ವಿವಾಹಕ್ಕೆ ಮಹಿಳೆಯ ಒಪ್ಪಿಗೆ ಅಗತ್ಯ. ಇದು ಇಸ್ಲಾಮೀ ಶರೀಅತ್‌ನ ಆದೇಶಗಳ ಪೈಕಿ ಒಂದು ಆದೇಶವಾಗಿದೆ, ಈ ವಿಷಯ ಹಿಂದೆ ವಿವರಿಸಲಾದ ಹದೀಸ್‌ಗಳಿಂದ ಸಾಬೀತಾಗುತ್ತದೆ. ಆದರೆ ಅಪ್ರಾಪ್ತ ವಯಸ್ಕಳಾದ ಬಾಲಕಿಯನ್ನು ಆಕೆಯ ತಂದೆ ಅಥವಾ ಇನ್ನಿತರ ರಕ್ಷಕರು ವಿವಾಹ ಮಾಡಿಸಿಕೊಟ್ಟರೆ ಆಕೆಗೆ ತನ್ನ ಬಗ್ಗೆ ಇರುವ ಆಯ್ಕೆಯ ಹಕ್ಕು ಅನೂರ್ಜಿತಗೊಳ್ಳುವುದೇ ಎಂಬುದು ಈಗ ನಮ್ಮ ಮುಂದಿರುವ ಪ್ರಶ್ನೆ. ಈ ವಿಷಯದಲ್ಲಿ ನಮ್ಮ ಕರ್ಮಶಾಸ್ತ್ರಜ್ಞರ ಧರ್ಮ ವಿಧಿಯಂತೆ ಪ್ರೌಢಳಲ್ಲದ ಹುಡುಗಿಯ ವಿವಾಹವನ್ನು ಆಕೆಯ ತಂದೆ ಅಥವಾ ತಾತನ ಹೊರತು ಬೇರೆ ಯಾರಾದರೂ ಮಾಡಿಸಿ ಕೊಟ್ಟಿದ್ದರೆ ಪ್ರೌಢೆಯಾದ ಬಳಿಕ ಆಕೆಗೆ ಆ ವಿವಾಹವನ್ನು

ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಇದೆ. ತಂದೆ ಅಥವಾ ತಾತನು ಆಕೆಗೆ ವಿವಾಹ ಮಾಡಿಸಿದ್ದರೆ ಆಕೆಗೆ ಈ ಹಕ್ಕು ಇರುವುದಿಲ್ಲ. ಆದರೆ ತಂದೆ ತಾತಂದಿರು ನಿರ್ಧಾರ ಸಾಮರ್ಥ್ಯವಿಲ್ಲದವರಾಗಿದ್ದರೆ ಈ ನಿಯಮ ಅನ್ವಯಿಸುವುದಿಲ್ಲ. ಉದಾ: ಅವರು ಕರ್ಮಭ್ರಷ್ಟರೂ ನಿರ್ಲಜ್ಜರೂ ಆಗಿದ್ದರೆ ಅಥವಾ ತಮ್ಮ ವ್ಯವಹಾರಗಳಲ್ಲಿ ಯುಕ್ತಿ ಹೀನತೆಗೆ ಮತ್ತು ದೂರದೃಷ್ಟಿರಾಹಿತ್ಯಕ್ಕೆ ಕುಪ್ರಸಿದ್ಧರಾಗಿದ್ದರೆ ಈ ನಿಯಮ ಅನ್ವಯಿಸುವುದಿಲ್ಲ.

ತಂದೆ ತಾತಂದಿರಿಗೆ ಬಾಲಕಿಯ ಮೇಲೆ ನಿರಂಕುಶಾಧಿಕಾರವಿದೆ ಮತ್ತು ಅವರು ಮಾಡಿದ ವಿವಾಹವನ್ನು ಆಕೆ ವಯಸ್ಕಳಾದ ಬಳಿಕವೂ ತಿರಸ್ಕರಿಸುವಂತಿಲ್ಲ ಎಂಬುದು ಪವಿತ್ರ ಕುರ್‌ಆನ್‌ನ ಯಾವುದೇ ಸೂಕ್ತದಿಂದ ಅಥವಾ ಪ್ರವಾದಿವರ್ಯರ ಯಾವುದೇ ಹದೀಸ್‌ನಿಂದ ಸಾಬೀತಾಗುವುದಿಲ್ಲ.* ಈ ವಾದವು ತಂದೆ ತಾತಂದಿರು ತಮ್ಮ ಮಗಳಿಗೆ ಕೇಡು ಬಗೆಯಲು

* 'ಮಬ್ಸೂತ್'ನಲ್ಲಿ ಇಮಾಮ್ ಸರ್ಖಸಿಯವರು ಕೇವಲ ಒಂದು 'ಪ್ರಮಾಣ'ವನ್ನು ಉಲ್ಲೇಖಿಸಿರುವರು. ಹ. ಅಬೂಬಕರ್ ಸಿದ್ದೀಕ್(ರ)ರವರು ಹ. ಆಯಿಶಾ(ರ) ಅವರ ವಿವಾಹವನ್ನು ಬಾಲ್ಯದಲ್ಲೇ ಪ್ರವಾದಿವರ್ಯ(ಸ)ರೊಂದಿಗೆ ಮಾಡಿಸಿದ್ದರು. ಹ. ಆಯಿಶಾ(ರ) ಅವರು ವಯಸ್ಕರಾದ ಬಳಿಕ ಪ್ರವಾದಿವರ್ಯರು ಅವರಿಗೆ 'ನಿಮಗೆ ಈ ವಿವಾಹವನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಇದೆ' ಎಂದು ಹೇಳಿರಲಿಲ್ಲ. ಒಂದು ವೇಳೆ ಅಪ್ರಾಪ್ತ ವಯಸ್ಕ ಹೆಣ್ಣಿಗೆ ಈ ಆಯ್ಕೆಯ ಹಕ್ಕು ಇರುತ್ತಿದ್ದರೆ ಪವಿತ್ರ ಕುರ್‌ಆನಿನಲ್ಲಿ'ತಖ್‌ಯೀರ್'ನ ಸೂಕ್ತ ಅವತೀರ್ಣಗೊಂಡಾಗ ಪ್ರವಾದಿ ವರ್ಯರು(ಸ) ಅವರಿಗೆ ಆಯ್ಕೆಯ ಹಕ್ಕು ನೀಡಿದಂತೆ ಈ ವಿಷಯದಲ್ಲಿಯೂ ಖಂಡಿತ ಆಯ್ಕೆಯ ಹಕ್ಕು ನೀಡುತ್ತಿದ್ದರು. (ಅಲ್‌ಮಬ್ಸೂತ್ ಭಾಗ- 4 ಪುಟ 213) 'ವಿಲಾಯತ್ ಇಜ್ಬಾರ್'ನ (ಸಂರಕ್ಷಕರ ನಿರಂಕುಶಾಧಿಕಾರದ) ಪರವಾಗಿ, ಸಾಕಷ್ಟು ಹುಡುಕಾಟ ನಡೆಸಿದ ಬಳಿಕವೂ ಕುರ್‌ಆನ್ ಮತ್ತು ಹದೀಸ್‌ಗಳಿಂದ ಪ್ರಸ್ತುತ ಕ್ಷೀಣ ಪುರಾವೆಯ ಹೊರತು ಬೇರಾವ ಪ್ರಮಾಣವನ್ನೂ ತರಲು ಸಾಧ್ಯವಾಗಿಲ್ಲ ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಇನ್ನೂ, ಈ ಪುರಾವೆ ಕೂಡಾ ಎಷ್ಟೊಂದು ದುರ್ಬಲವಾಗಿದೆಯೆಂದರೆ ಕೇವಲ ಇದರ ಆಧಾರದಲ್ಲಿ ಸರ್ಖಸಿ(ರ) ಅವರಂತಹ ಮಹಾನ್ ವಿದ್ವಾಂಸರು, ಅಸಂಖ್ಯ ಮಹಿಳೆಯರಿಂದ ಅವರ ಹಕ್ಕೊಂದನ್ನು ಶಾಶ್ವತವಾಗಿ ಕಿತ್ತುಕೊಳ್ಳುವುದಕ್ಕೆ ಕಾರಣವಾಗಬಲ್ಲಂತಹ ಅಷ್ಟು ದೊಡ್ಡ ಹಾಗೂ ಪ್ರಮುಖ ತೀರ್ಮಾನವನ್ನು ಕೈಗೊಂಡುದು ಆಶ್ಚರ್ಯಕರವಾಗಿದೆ. ಒಂದು ವೇಳೆ ಹಝ್ರತ್ ಆಯಿಶಾ(ರ) ಅವರು ವಯಸ್ಕರಾದ ಬಳಿಕ, ತಮ್ಮ ತಂದೆ ಮಾಡಿಸಿದ್ದ ವಿವಾಹವನ್ನು ತಿರಸ್ಕರಿಸಿದ್ದರೆ ಅಥವಾ ಅದಕ್ಕೆ ವಿರುದ್ಧವಾಗಿ ವಯಸ್ಕರಾದ ಬಳಿಕದ ತಮ್ಮ ಆಯ್ಕೆಯ ಹಕ್ಕನ್ನು ಬಳಸುವ ಅಧಿಕಾರ ಕೇಳಿದ್ದರೆ ಮತ್ತು ಇದಕ್ಕುತ್ತರವಾಗಿ ಪ್ರವಾದಿವರ್ಯರು(ಸ) "ಇಲ್ಲ, ನೀವು ಅಪ್ರಾಪ್ತ ವಯಸ್ಕರಾಗಿದ್ದಾಗ ನಿಮ್ಮ ತಂದೆಯೇ ನಿಮಗೆ ವಿವಾಹ ಮಾಡಿಸಿದ್ದರಿಂದ ಈಗ ನಿಮಗೆ ಅಂತಹ ಹಕ್ಕು ಉಳಿಯುವುದಿಲ್ಲ" ಎಂದು ಹೇಳಿದ್ದರೆ, ಹದೀಸ್‌ನ ಪ್ರಕಾರ ತಂದೆ ಮಾಡಿಸಿದ ವಿವಾಹದಲ್ಲಿ ವಯಸ್ಕ ಹೆಣ್ಣಿಗೆ ಆಯ್ಕೆಯ ಹಕ್ಕು ಇರುವುದಿಲ್ಲ ಎಂದು ವಾದಿಸಬಹುದಿತ್ತು. ಆದರೆ ಅಂತಹ ಯಾವ ವಿಷಯವೂ ಯಾವುದೇ ಹದೀಸ್‌ನಲ್ಲಿಲ್ಲ. ಹದೀಸ್‌ನಲ್ಲಂತೂ ಪ್ರವಾದಿವರ್ಯರು(ಸ) ಈ ವಿಷಯದಲ್ಲಿ ತಮಗೆ ಯಾವುದೇ ಅಧಿಕಾರ ನೀಡಲಿಲ್ಲ ಎಂದು ಹಝ್ರತ್ ಆಯಿಶಾ(ರ) ಹೇಳಿದ್ದಾಗಿಯೂ ಎಲ್ಲೂ ವರದಿಯಾಗಿಲ್ಲ. ವಾದದ ಇಡೀ ಸೌಧವನ್ನು ಕೇವಲ, ಪ್ರವಾದಿವರ್ಯರು(ಸ) ಆಯಿಶಾ(ರ)ರಿಗೆ ಆಯ್ಕೆಯ ಹಕ್ಕು ನೀಡಿದ್ದರೆಂದು ಯಾವುದೇ ಹದೀಸ್ ವರದಿಯಲ್ಲಿ ತಿಳಿಸಲಾಗಿಲ್ಲ ಎಂಬುದರ ತಳಹದಿಯಲ್ಲೇ ನಿರ್ಮಿಸಲಾಗಿದೆ. ಇದರ ಆಧಾರದಲ್ಲಿ, ಪ್ರವಾದಿ(ಸ) ಆಯಿಶಾ(ರ)ರಿಗೆ ಆಯ್ಕೆಯ ಹಕ್ಕನ್ನು ನೀಡಲಿಲ್ಲವೆಂದು ತೀರ್ಮಾನಿಸಲಾಗಿದೆ ಮತ್ತು ಪ್ರವಾದಿವರ್ಯರು(ಸ)

ಸಾಧ್ಯವಿಲ್ಲ. ಆದ್ದರಿಂದ ಅವರು ಮಾಡಿಸಿದ ವಿವಾಹವನ್ನು ಪಾಲಿಸುವುದು ಹೆಣ್ಣಿನ ಮೇಲೆ ಕಡ್ಡಾಯವಾಗಿದೆ ಎಂಬ ಕರ್ಮಶಾಸ್ತ್ರ ಪಂಡಿತರ ಊಹೆಯ ಮೇಲೆ ಮಾತ್ರ ಈ ವಾದವು ಆಧಾರಿತವಾಗಿದೆ.

ಆದ್ದರಿಂದ ಹಿದಾಯಃದಲ್ಲಿ ಈ ರೀತಿ ಬಂದಿದೆ:

(ಬಾಲ್ಯದಲ್ಲಿ ತಂದೆ-ತಾತಂದಿರು ವಿವಾಹ ಮಾಡಿಸಿದ) ಬಾಲಕ-ಬಾಲಕಿಯರಿಗೆ ವಯಸ್ಕರಾದ ಬಳಿಕ ಆಯ್ಕೆಯ ಹಕ್ಕು ಇಲ್ಲ. ಏಕೆಂದರೆ ಅವರಿಬ್ಬರೂ ಅತ್ಯಂತ ಪ್ರಬುದ್ಧರೂ ಅತ್ಯಂತ ವಾತ್ಸಲ್ಯಮಯಿಗಳೂ ಆಗಿದ್ದಾರೆ. ಆದ್ದರಿಂದ ಅವರ (ಬಾಲಕಿಯರ)ಮೇಲೆ ತಂದೆ - ತಾತಂದಿರು ಮಾಡಿದ ವಿವಾಹವನ್ನು ಪಾಲಿಸುವುದು ಅವರು ವಯಸ್ಕರಾದ ಬಳಿಕ ಅವರ ಒಪ್ಪಿಗೆಯ ಮೇರೆಗೆ ಮಾಡಿದ ವಿವಾಹದಂತೆ ಕಡ್ಡಾಯವಾಗಿದೆ.

ಆದರೆ ಇದು ಕೇವಲ ಊಹೆಯ ಮೇಲೆ ಆಧಾರಿತವಾದ ಒಂದು ಅಭಿಪ್ರಾಯವಾಗಿದೆ. ಇದು ಅಲ್ಲಾಹನ ಮತ್ತು ಪ್ರವಾದಿವರ್ಯರ(ಸ) ಆದೇಶಗಳಂತೆ ನಿಖರವಲ್ಲ. ಆಗಲು ಸಾಧ್ಯವೂ

---

ಅಂತಹ ಹಕ್ಕನ್ನು ನೀಡಿರಲಿಲ್ಲವಾದ್ದರಿಂದ ಅಂತಹ ಹೆಣ್ಣಿಗೆ ಆಯ್ಕೆಯ ಹಕ್ಕು ಇಲ್ಲವೆಂದು ತೀರ್ಮಾನಿಸಿ ಬಿಡಲಾಗಿದೆ. ಈ ವಾದ ಸರಣಿಯನ್ನು ಮುಂದಿಡುವಾಗ ಇಮಾಮ್ ಸರ್ಖಸೀ(ರ) ಅವರಿಗೆ ಪ್ರಾಯಶಃ ಒಂದು ವಿಷಯ ನೆನಪೇ ಇರಲಿಲ್ಲ. ಅದೇನೆಂದರೆ ಒಂದು ಘಟನೆಯ ಬಗ್ಗೆ ಹದೀಸ್ ಗ್ರಂಥಗಳಲ್ಲಿ ಉಲ್ಲೇಖ ಇಲ್ಲದಿರುವುದು ಆ ಘಟನೆ ನಡೆದೇ ಇಲ್ಲ ಎಂಬುದಕ್ಕೆ ಆಧಾರವಾಗಲು ಸಾಧ್ಯವಿಲ್ಲ. ಪ್ರೌಢೆಯಾದ ಬಳಿಕ ತಂದೆಯ ತೀರ್ಮಾನದ ಬಗ್ಗೆ ಸಂತೃಪ್ತಳಾಗಿದ್ದ ಮತ್ತು ಯಾವ ವಿಧದಲ್ಲೂ ತನ್ನ ಅತೃಪ್ತಿಯನ್ನು ಪ್ರಕಟಿಸದೇ ಇದ್ದ ಹಾಗೂ ತಂದೆಯ ತೀರ್ಮಾನದ ವಿರುದ್ಧ ತನಗೆ ಆಯ್ಕೆಯ ಹಕ್ಕು ಉಪಯೋಗಿಸುವ ಸ್ವಾತಂತ್ರ್ಯ ಕೊಡಬೇಕೆಂದು ಅಪೇಕ್ಷಿಸಿಯೇ ಇಲ್ಲದಿದ್ದ ಓರ್ವ ಬಾಲಕಿಗೆ ಆಯ್ಕೆಯ ಹಕ್ಕು ನೀಡದಿರುವುದು ಬಾಲಕಿಗೆ ಪ್ರೌಢೆಯಾದ ಬಳಿಕ ಆಯ್ಕೆಯ ಹಕ್ಕು ಇಲ್ಲವೇ ಇಲ್ಲ ಎಂಬುದಕ್ಕೆ ಆಧಾರವಾಗುವುದಾದರೂ ಹೇಗೆ? ಎಂಬ ಆಲೋಚನೆಯೂ ಅವರಲ್ಲಿ ಮೂಡಲಿಲ್ಲ. ಒಂದು ವೇಳೆ ಇಂತಹ ಆಧಾರಗಳ ಬುನಾದಿಯಲ್ಲಿ ಹಕ್ಕುಗಳು ಕಸಿಯಲ್ಪಡ ತೊಡಗಿದರೆ ಒಬ್ಬ ವ್ಯಕ್ತಿ ನೀರು ಕೇಳಿಯೇ ಇರದ ಸಂದರ್ಭದಲ್ಲಿ ಅವನಿಗೆ ನೀರು ಕೊಡಲಾಗಿಲ್ಲ. ಆದ್ದರಿಂದ ಯಾರಿಗೂ ನೀರು ಕೊಡಲೇಬಾರದು ಎಂದು ಕೂಡಾ ಜನರು ವಾದಿಸಲಾರಂಭಿಸಬಹುದು.

ಇಮಾಮ್ ಸರ್ಖಸೀ(ರ)ಯವರ ಇನ್ನೊಂದು ವಾದವು ಇದಕ್ಕಿಂತಲೂ ವಿಚಿತ್ರವಾದುದು. ಬಾಲಕಿಗೆ ಪ್ರೌಢೆಯಾದ ಬಳಿಕ ಆಯ್ಕೆಯ ಹಕ್ಕು ಇರುತ್ತಿದ್ದರೆ ಪ್ರವಾದಿವರ್ಯರು(ಸ) ಹ.ಆಯಿಷಾ(ರ)ರಿಗೆ ಅವರು ಕೇಳದೆಯೇ ಅದನ್ನು(ಆಯ್ಕೆಯ ಹಕ್ಕನ್ನು) ಕೊಟ್ಟು ಬಿಡುತ್ತಿದ್ದರು. ಏಕೆಂದರೆ 'ತಕ್‌ಯೀರ್' ಬಗ್ಗೆ ಪವಿತ್ರ ಕುರ್‌ಆನ್‌ನಲ್ಲಿ ಆಯತ್ ಅವತೀರ್ಣಗೊಂಡಾಗ ಪ್ರವಾದಿ(ಸ) ತಮ್ಮ ಪತ್ನಿಯರಿಗೆ ಆ ಹಕ್ಕನ್ನು ನೀಡಿದ್ದರು ಎಂದು ಅವರು ವಾದಿಸಿದ್ದಾರೆ. ಬೇರೆ ಮಾತಿನಲ್ಲಿ ಹೇಳುವುದಾದರೆ ಒಂದು ವಿಷಯದಲ್ಲಿ ಅಲ್ಲಾಹನ ಸ್ಪಷ್ಟ ಆಜ್ಞೆ ಬಂದ ಬಳಿಕ ಪ್ರವಾದಿವರ್ಯರು(ಸ) ಮಾಡಿದ ಕಾರ್ಯವನ್ನು ಆಜ್ಞೆ ಬಂದ ಬಳಿಕ ಪ್ರವಾದಿವರು(ಸ) ಮಾಡಿದ ಕಾರ್ಯವನ್ನು ಅಂತಹ ಸ್ಪಷ್ಟ ಆದೇಶವಿಲ್ಲದ ಇನ್ನೊಂದು ವಿಷಯದಲ್ಲೂ ಪ್ರವಾದಿವರ್ಯರು(ಸ) ಖಂಡಿತ ಮಾಡುತ್ತಿದ್ದರು ಎಂಬುದೇ ಇಮಾಮ್ ಸರ್ಖಸಿ(ರ) ಅವರ ವಾದದ ತಾತ್ಪರ್ಯ. ಮಾನ್ಯ ಉಲಮಾ ಶಿರೋಮಣಿಗಳು (ಧರ್ಮ ವಿದ್ವಾಂಸರು) ಇಷ್ಟು ಬಲಹೀನವಾದ ವಿಷಯವನ್ನು ಕೂಡಾ ಕಣ್ಣುಮುಚ್ಚಿ ಒಪ್ಪಿಕೊಳ್ಳುತ್ತಾರೆ. ಏಕೆಂದರೆ ಹಾಗೆ ಮಾಡದಿದ್ದರೆ ಅವರನ್ನು 'ಗೈರ್‌ಮುಕಲ್ಲಿದ್' (ಯಾವುದೇ ಮದ್‌ಹಬ್ ಅರ್ಥಾತ್ ಕರ್ಮಶಾಸ್ತ್ರವನ್ನು ಒಪ್ಪದವ) ಎಂದು ಮೂದಲಿಸಲಾದೀತು ಎಂದು ಅವರು ಭಯಪಡುತ್ತಾರೆ.

ಅಲ್ಲ. ವೈಚಾರಿಕವಾಗಿಯೂ ವ್ಯಾವಹಾರಿಕವಾಗಿಯೂ ಅನೇಕ ವಿಧವಾಗಿ ಇದನ್ನು ಆಕ್ಷೇಪಿಸಬಹುದಾಗಿದೆ.

1. ಹ. ಹಮ್ಝಾ(ರ) ಅವರ ಪುತ್ರಿಯ ವಿವಾಹವನ್ನು ಪ್ರವಾದಿವರ್ಯರು(ಸ) ಬಾಲ್ಯದಲ್ಲೇ ಉಮರ್ ಬಿನ್ ಅಬೀ ಮುಸ್ಲಿಮಃ(ರ) ಅವರೊಂದಿಗೆ ಮಾಡಿಸಿದ್ದರು ಮತ್ತು ಪ್ರೌಢೆಯಾದ ಬಳಿಕ ಅದನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಅವರಿಗಿದೆ ಎಂದು ಹೇಳಿದ್ದರು. ಈ ವಿಷಯ ಸಹೀಹ್ (ನಂಬಲರ್ಹ) ಹದೀಸ್‌ನಲ್ಲಿ ವರದಿಯಾಗಿದೆ. ಇದರಿಂದ, ಬಾಲ್ಯದಲ್ಲಿ ವಿವಾಹವಾದ ಹೆಣ್ಣಿಗೆ ಅನಂತರ ಆಯ್ಕೆಯ ಹಕ್ಕು ಇದೆಯೆಂಬುದು ನಿಖರವಾಗಿ ಸಾಬೀತಾಗುತ್ತದೆ. ಏಕೆಂದರೆ ಇಲ್ಲಿ ಪ್ರವಾದಿ(ಸ) 'ನಾನು ಹುಡುಗಿಯ ತಂದೆಯಲ್ಲ, ಕೇವಲ ತಂದೆಯ ಸೋದರ ಪುತ್ರ. ಆದ್ದರಿಂದ ನಾನು ಮಾಡಿಸಿದ ವಿವಾಹ ಆಕೆಯ ಮೇಲೆ ಕಡ್ಡಾಯವಲ್ಲ' ಎಂದು ಸ್ಪಷ್ಟಪಡಿಸಿಲ್ಲ.

2. ಹುಡುಗಿ ಪ್ರೌಢೆಯಾಗಿದ್ದರೆ ತಂದೆ ಅಥವಾ ತಾತನ ತೀರ್ಮಾನದ ವಿರುದ್ಧ ಆಕೆಗೆ ತನ್ನ ಸ್ವಂತ ಅಭಿಪ್ರಾಯವನ್ನು ಉಪಯೋಗಿಸುವ ಹಕ್ಕು ಇದೆ. ಆದರೆ ಅದೇ ಹುಡುಗಿ ಅಪ್ರಾಪ್ತ ವಯಸ್ಕಳಾಗಿದ್ದರೆ ಆಕೆಯಿಂದ ಈ ಹಕ್ಕನ್ನು ಪೂರ್ಣ ಕಸಿಯಬೇಕೆನ್ನುವುದು ಇದೆಂತಹ ವಿಚಿತ್ರ ನ್ಯಾಯ. ವಸ್ತುತಃ ಶರೀಅತ್ ಕರ್ತೃ ವಿವಾಹದ ವಿಷಯದಲ್ಲಿ ಮಹಿಳೆಯ ಯಾವ ಪ್ರಾಮುಖ್ಯತೆಯನ್ನು ಪರಿಗಣಿಸಿ ಆಕೆಗೆ ಈ ಹಕ್ಕು ನೀಡಿರುವನೋ ಅದು ಎರಡೂ ಪರಿಸ್ಥಿತಿಗಳಲ್ಲಿ ಸಮಾನವಾಗಿದೆ. ಒಬ್ಬರು ಅತ್ಯಂತ ಪ್ರಬುದ್ಧರು ಮತ್ತು ಅತ್ಯಂತ ವಾತ್ಸಲ್ಯಮಯಿ ಎಂಬ ಕಾರಣಕ್ಕೆ ಅವರಿಗೆ ಹೆಣ್ಣಿನ ಮೇಲೆ ನಿರಂಕುಶ ಅಧಿಕಾರ ಪ್ರಾಪ್ತವಾಗುವುದಾದರೆ ಅದು ಬಾಲ್ಯದಲ್ಲಿ ಪ್ರಾಪ್ತವಾದಂತೆ ಪ್ರೌಢಾವಸ್ಥೆಯಲ್ಲೂ ಪ್ರಾಪ್ತವಾಗಬೇಕಿತ್ತು. ಆದರೆ ಪ್ರೌಢೆಯಾದ ಹೆಣ್ಣಿನ ಮೇಲೆ ಯಾರಿಗೂ ನಿರಂಕುಶ ಅಧಿಕಾರ ಪ್ರಾಪ್ತವಿಲ್ಲ ಎಂದ ಮೇಲೆ ಆ ಅಧಿಕಾರ ಬಾಲಕಿಯ ಹೆತ್ತವರಿಗೆ ಏಕೆ ಪ್ರಾಪ್ತವಾಗಬೇಕು?

3. ತಂದೆ-ತಾತಂದಿರು ಅತ್ಯಂತ ವಾತ್ಸಲ್ಯಮಯಿಗಳು ಮತ್ತು ಅತ್ಯಂತ ಪ್ರಬುದ್ಧರು ಎಂಬುದು ಒಂದು ಖಚಿತ ಅಥವಾ ಸಾಬೀತುಗೊಂಡ ವಿಷಯವೇನೂ ಅಲ್ಲ. ಕೇವಲ ಸಾಮಾನ್ಯ ಸ್ಥಿತಿಯನ್ನು ಪರಿಗಣಿಸಿ ಒಂದು ತೀರ್ಮಾನಕ್ಕೆ ಬರಲಾಗಿದೆ. ಆದರೆ ಈ ಅಭಿಪ್ರಾಯದ ವಿರುದ್ಧವೂ ಅನೇಕ ಘಟನೆಗಳು ನಡೆದಿವೆ. ಈಗಲೂ ನಡೆಯುತ್ತಿವೆ. ಅವುಗಳಲ್ಲಿ ವಾತ್ಸಲ್ಯದ ಪುರಾವೆಯು ವಿರಳ ಮತ್ತು ಪ್ರಬುದ್ಧತೆಯ ಪುರಾವೆಯು ಇನ್ನಷ್ಟು ವಿರಳವಾಗಿ ಕಾಣುತ್ತವೆ.

4. ಒಂದು ವೇಳೆ ಊಹೆಯು ಸರಿಯಾಗಿದ್ದರೆ ಕೂಡಾ ತಂದೆ-ತಾತಂದಿರು ಸಾಕಷ್ಟು ವಾತ್ಸಲ್ಯ ಮತ್ತು ಸಾಕಷ್ಟು ಪ್ರಬುದ್ಧತೆಯ ಹೊರತಾಗಿಯೂ ಓರ್ವ ಬಾಲಕಿಯ ವಿವಾಹವನ್ನು ಓರ್ವ ಎಳೆಯ ಹುಡುಗನೊಂದಿಗೆ ಮಾಡಿಸಬಹುದು ಆದರೆ ಆ ಬಾಲಕ ದೊಡ್ಡವನಾದಾಗ ಅವರ ಆಕಾಂಕ್ಷೆಗಳಿಗೆ ತದ್ವಿರುದ್ಧವಾಗಿ ತೀರಾ ಅಯೋಗ್ಯನೆಂದು ಸಾಬೀತಾಗಬಹುದು. ವಿಶೇಷವಾಗಿ ಇಂದಿನ ಕಾಲದಲ್ಲಿ ಇದರ ಸಂಭವ ಹೆಚ್ಚು. ಏಕೆಂದರೆ ಇಸ್ಲಾಮೀ ತರಬೇತಿಯ ವ್ಯವಸ್ಥೆಯು ಅಸ್ತವ್ಯಸ್ತಗೊಂಡಿದೆ. ಶಿಕ್ಷಣ ತರಬೇತಿಯ ಕೆಡುಕುಗಳಿಂದಾಗಿ ಅತ್ಯಂತ ಕೆಟ್ಟ ಚಾರಿತ್ರ್ಯವು ಬೆಳೆದು ಬರುತ್ತಿದೆ. ಮುಸ್ಲಿಮರ ಪರಿಸರದಲ್ಲಿ ವಾತಾವರಣವು ಬಹಳಷ್ಟು ಕೆಟ್ಟಿದ್ದು,

ಇದರ ದುಷ್ಪರಿಣಾಮ ಹುಡುಗರ ಚಾರಿತ್ರ್ಯ ಮತ್ತು ನಡವಳಿಕೆಯ ಮೇಲೆ ಬೀಳುತ್ತಿದೆ. ಈ ಪರಿಸ್ಥಿತಿಯಲ್ಲಿ ಎಳೆಯ ವಯಸ್ಸಿನ ವಿವಾಹವನ್ನು ತಡೆಗಟ್ಟುವುದು ಬಹಳ ಅಗತ್ಯ. ಕನಿಷ್ಟ ಪಕ್ಷ ಇಂತಹ ವಿವಾಹಗಳನ್ನು ಕಡ್ಡಾಯವೆನ್ನಬಾರದು. ಏಕೆಂದರೆ ಮೊದಲು ಒಳ್ಳೆಯ ಆಶಾಭಾವನೆಯನ್ನು ಕುದುರಿಸುವ ಅನೇಕ ಹುಡುಗರು ಮುಂದೆ ಅನೈತಿಕತೆ, ಕೆಟ್ಟ ಚಾಳಿ ಮತ್ತು ಭ್ರಷ್ಟ ನಂಬಿಕೆಗಳಿಗೆ ಬಲಿಯಾಗುವ ಸಾಧ್ಯತೆ ಇದೆ. ಇಂತಹ ಸನ್ನಿವೇಶಗಳಲ್ಲಿ ತಂದೆ-ತಾತಂದಿರ ನಿರಂಕುಶಾಧಿಕಾರವು ಸ್ವತಃ ಅವರ ಮಟ್ಟಿಗೇ ಒಂದು ಶಾಪವಾಗಿ ಮಾರ್ಪಡುತ್ತದೆ.

5. ಒಂದು ವೇಳೆ ತಂದೆ ಅಥವಾ ತಾತ ವಿವೇಚನೆ ಇಲ್ಲದವರಾಗಿದ್ದರೆ ಹುಡುಗಿಗೆ ಅವರ ವಿರುದ್ಧ ಆಯ್ಕೆಯ ಹಕ್ಕನ್ನು ಉಪಯೋಗಿಸುವುದು ಕಷ್ಟ ಸಾಧ್ಯ. ಏಕೆಂದರೆ ಇಂತಹ ಸಂದರ್ಭದಲ್ಲಿ ಆಕೆ ತನ್ನ ತಂದೆ ಅಥವಾ ತಾತನ ವಿರುದ್ಧ ದುರುದ್ದೇಶ, ಕರ್ಮಭ್ರಷ್ಟತೆ, ನಿರ್ಲಜ್ಜೆ, ಅವಿವೇಕ ಮತ್ತು ಮೂರ್ಖತನದ ಪುರಾವೆಗಳನ್ನು ನ್ಯಾಯಾಲಯದಲ್ಲಿ ಮುಂದಿಡಬೇಕಾಗುವುದು ಇದು ಆಕೆಗೆ ಕಷ್ಟ. ಮಾತ್ರವಲ್ಲ ಅತ್ಯಂತ ನಾಚಿಕೆಗೇಡಿನ ವಿಷಯ ಕೂಡಾ ಆಗಿರುತ್ತದೆ.

ಈ ಕಾರಣಗಳಿಂದಾಗಿ ಕರ್ಮಶಾಸ್ತ್ರದ ಈ ಉಪನಿಯಮದ ಬಗ್ಗೆ ಪುನರ್ವಿಮರ್ಶೆಯ ಅಗತ್ಯವಿದೆ. ಇದೊಂದು 'ಇಜ್ತಿಹಾದ್' ಆಧಾರಿತ ವಿಷಯ. ಇದರಲ್ಲಿ ಬದಲಾವಣೆ ಮಾಡಿ ಅಪ್ರಾಪ್ತ ವಯಸ್ಸಿನ ಬಾಲಕ-ಬಾಲಕಿಯರು ಪ್ರಾಪ್ತ ವಯಸ್ಕರಾದ ಬಳಿಕ ಅವರಿಗೆ ಆಯ್ಕೆಯ ಹಕ್ಕನ್ನು ನೀಡಬೇಕು.*

## 4. ಆಯ್ಕೆಯ ಹಕ್ಕಿನ ಶರ್ತಗಳು

ಈ ಬಗ್ಗೆ ಕರ್ಮಶಾಸ್ತ್ರಜ್ಞರ ಇನ್ನೊಂದು ಇಜ್ತಿಹಾದ್ ಆಧಾರಿತ ತೀರ್ಪು ಕೂಡಾ ಈ ಸಂದರ್ಭದಲ್ಲಿ ಪ್ರಸ್ತಾಪಾರ್ಹವಾಗಿದೆ. ತಂದೆ-ತಾತಂದಿರನ್ನು ಬಿಟ್ಟು ಉಳಿದ ಸಂರಕ್ಷಕರು ಬಾಲಕಿಯ ವಿವಾಹ ಮಾಡಿಕೊಟ್ಟಿದ್ದರೆ ಆಕೆ ಪ್ರೌಢೆಯಾದ ಬಳಿಕ ಆಯ್ಕೆಯ ಹಕ್ಕನ್ನು ಉಪಯೋಗಿಸಬಹುದು ಎಂಬುದು ಅವರ ಫತ್ವಾ (ಧರ್ಮವಿಧಿ) ಆಗಿದೆ. ಆದರೆ ಇದಕ್ಕೊಂದು ಶರ್ತವಿದೆ. ಆಕೆ ಋತುಮತಿಯಾದ ಕೂಡಲೇ ತಡಮಾಡದೆ ತನ್ನ ಅಸಮ್ಮತಿಯನ್ನು ಪ್ರಕಟಿಸಬೇಕು. ಒಂದು ವೇಳೆ ಆಕೆ ಮುಟ್ಟಿನ ಪ್ರಥಮ ರಕ್ತ ಹೊರಬಂದ ಕೂಡಲೇ ತನ್ನ ಅಸಮ್ಮತಿಯನ್ನು ಪ್ರಕಟಿಸದಿದ್ದರೆ ಮತ್ತೆ ಆಕೆಗೆ ಆಯ್ಕೆಯ ಹಕ್ಕು ಉಳಿಯುವುದಿಲ್ಲ. ಸ್ವಾರಸ್ಯಕರ ಅಂಶವೇನೆಂದರೆ ಈ ನಿಯಮ ಕೇವಲ ಕುಮಾರಿಯರಿಗೆ ಮಾತ್ರ ಅನ್ವಯಿಸುತ್ತದೆ! ಸಯ್ಯಿಬಃ** ಮತ್ತು ಅಪ್ರಾಪ್ತ ವಯಸ್ಕ ಬಾಲಕನಿಗೆ ಬೇರೆಯೇ ನಿಯಮವಿದೆ. ಅವರು ಪ್ರೌಢರಾದ ಬಳಿಕ ತಮ್ಮ ಸಮ್ಮತಿಯನ್ನು ಸ್ಪಷ್ಟವಾಗಿ ಸೂಚಿಸುವ ತನಕವೂ ಅವರಿಗೆ ಖಿಯಾರೆ ಫಸ್ಕ್ (ಬೇರ್ಪಡೆಯ ಹಕ್ಕು) ಇರುತ್ತದೆ.

* ಪುರುಷರಿಗೆ ತಲಾಕ್‌ನ ಹಕ್ಕು ಇರುವುದರಿಂದ ಬಾಲಕರ ವಿಷಯವನ್ನು ಚರ್ಚಿಸಿಲ್ಲ.

** ಸಯ್ಯಿಬಃ ಎಂದರೆ ಪತಿಯನ್ನು ಹೊಂದಿದವಳು. ಓರ್ವ ಬಾಲಕಿ ಪ್ರೌಢೆಯಾಗುವ ಮೊದಲು ಪುರುಷ ಸಹವಾಸ ಹೊಂದಿದ್ದರೆ, ಅದು ವಿವಾಹದಲ್ಲಿರಲಿ ವ್ಯಭಿಚಾರದ ರೂಪದಲ್ಲಿರಲಿ, ಆಕೆಯನ್ನು ಸಯ್ಯಿಬಃ ಎಂದೇ ಕರೆಯಲಾಗುವುದು.

ಪ್ರೌಢೆಯಲ್ಲದ ಬಾಲಕಿಗೆ ವಿಧಿಸಲಾಗಿರುವ ಈ ಶರ್ತಕ್ಕೆ ಪರವಾಗಿ ಕುರ್‌ಆನ್‌ನಲ್ಲಾಗಲೀ ಹದೀಸ್‌ನಲ್ಲಾಗಲೀ ನಮಗೆ ಯಾವುದೇ ಆಧಾರ ಸಿಕ್ಕಿಲ್ಲ. ಇದೂ ಒಂದು ಇಜ್ತಿಹಾದ್ ಆಧಾರಿತ ವಿಷಯವಾಗಿದೆ. ಇದರಲ್ಲೂ ಬದಲಾವಣೆಯಾಗಬೇಕಾಗಿದೆ. ಬೇರ್ಪಡೆಯ ಹಕ್ಕನ್ನು ಪ್ರೌಢಾವಸ್ಥೆಯ ಬಳಿಕವೇ ನೀಡಿರುವುದಕ್ಕೆ ಕೇವಲ ಒಂದೇ ಕಾರಣ ಇರುವುದು ಸಾಧ್ಯ. ಪ್ರೌಢರಾದ ಬಳಿಕ ಮನುಷ್ಯರಲ್ಲಿ ಒಳಿತು ಕೆಡುಕುಗಳ ವಿವೇಚನೆ ಉಂಟಾಗುತ್ತದೆ ಮತ್ತು ಅವರು ತಮ್ಮ ಬಗ್ಗೆ ಬುದ್ಧಿವಂತಿಕೆಯಿಂದ ಜವಾಬ್ದಾರಿಯುತ ತೀರ್ಮಾನ ಕೈಗೊಳ್ಳಲು ಶಕ್ತರಾಗುತ್ತಾರೆಂಬುದೇ ಆ ಕಾರಣ. ಆದರೆ ಪ್ರೌಢಾವಸ್ಥೆಗೆ ತಲುಪುತ್ತಲೇ ಅವರಲ್ಲಿ ಒಂದು ದೊಡ್ಡ ಕ್ರಾಂತಿ ಉಂಟಾಗಿಬಿಡುತ್ತದೆಂದೂ ಕ್ಷಣಾರ್ಧದಲ್ಲಿ ಅವರಲ್ಲಿ ನಿರ್ಧಾರ ಮತ್ತು ವಿವೇಚನಾ ಶಕ್ತಿ ಮೂಡಿಬರುತ್ತದೆಂದೂ ಇದರ ಅರ್ಥವಲ್ಲ. ಒಂದು ವೇಳೆ ಹಾಗೆ ಆಗುತ್ತದೆಂದು ಒಪ್ಪಿಕೊಂಡರೂ ಸಯ್ಯಿಬಃ ಮತ್ತು ಅಪ್ರಾಪ್ತ ವಯಸ್ಕ ಬಾಲಕನ ಸ್ಥಿತಿಯು ಕುಮಾರಿಯರಿಗಿಂತ ಭಿನ್ನವಾಗಿರಲು ಸಾಧ್ಯವಿಲ್ಲ. ಆದುದರಿಂದ ಅವರಿಬ್ಬರಿಗೆ ಅವರು ಮಾತು ಅಥವಾ ಕೃತಿಗಳ ಮೂಲಕ ತಮ್ಮ ಸಮ್ಮತಿಯನ್ನು ಸೂಚಿಸುವ ತನಕ ಆಯ್ಕೆಯ ಹಕ್ಕು ನೀಡಲ್ಪಟ್ಟಿರುವಾಗ ಕುಮಾರಿಯರಿಗೆ ತಮ್ಮ ಬಗ್ಗೆ ಯೋಚಿಸುವ ಮತ್ತು ತೀರ್ಮಾನಿಸುವ ಸಲುವಾಗಿ ಸಾಕಷ್ಟು ಸಮಯಾವಕಾಶ ನೀಡದಿರುವುದಕ್ಕೆ ಯಾವುದೇ ಕಾರಣವಿಲ್ಲ. ಓರ್ವ ಅನುಭವರಹಿತ ಕುಮಾರಿಯು ಈ ಹಕ್ಕನ್ನು ಪಡೆಯಲು ಓರ್ವ ಸಯ್ಯಿಬಃ ಮತ್ತು ಪ್ರೌಢ ಯುವಕನಿಗಿಂತ ಹೆಚ್ಚು ಅರ್ಹಳು. ಏಕೆಂದರೆ ಆಕೆ ಅವರೀರ್ವರಿಗಿಂತಲೂ ಹೆಚ್ಚು ಅನನುಭವಿಯಾಗಿರುತ್ತಾಳೆ.

## 5. ಮೆಹರ್(ವಿವಾಹ ಧನ)

ಮಹ್‌ರ್‌ನ ವಿಷಯದಲ್ಲಿ ಒಂದು ಮಾತು ಸರ್ವ ಸಮ್ಮತವಿದೆ. ಅದೇನೆಂದರೆ, ಅಲ್ಲಾಹ್ ಮತ್ತು ಆತನ ಸಂದೇಶವಾಹಕರ ಕಾನೂನಿನಲ್ಲಿ ಅದಕ್ಕೆ ಯಾವುದೇ ಗರಿಷ್ಠ ಮಿತಿಯನ್ನು ನಿರ್ಣಯಿಸಲಾಗಿಲ್ಲ. ಈ ಬಗ್ಗೆ ಒಂದು ಸುಪ್ರಸಿದ್ಧ ಐತಿಹಾಸಿಕ ಘಟನೆ ಇದೆ. ಹ. ಉಮರ್(ರ)ರವರು ತಮ್ಮ ಆಡಳಿತ ಕಾಲದಲ್ಲಿ ಮಹ್‌ರ್‌ಗೆ 40 ಊಖಿಯಃ (1600 ದಿರ್ಹಮ್)ಗಳ ಗರಿಷ್ಠ ಮಿತಿ ಹೇರ ಬಯಸಿದ್ದರು. ಆದರೆ ಓರ್ವ ಮಹಿಳೆ ಅವರನ್ನು ಅದರಿಂದ ತಡೆದು' ನೀವು ನಿಮ್ಮ ಮಡದಿಯರಿಗೆ ಸಂಪತ್ತಿನ ಒಂದು ರಾಶಿಯನ್ನೇ ನೀಡಿದ್ದರೂ ಅದರಿಂದ ಕಿಂಚಿತ್ತನ್ನೂ ಮರಳಿ ಪಡೆಯದಿರಿ' ಎಂಬ ಅರ್ಥದ ಕುರ್‌ಆನ್ ಸೂಕ್ತವನ್ನು ಪಠಿಸುತ್ತಾ ಅದರ ಆಧಾರದಲ್ಲಿ ತಮಗೆ ಮೆಹರ್‌ಗೆ ಮಿತಿ ಹೇರುವ ಅಧಿಕಾರವಿಲ್ಲ ಎಂದು ಹ. ಉಮರ್(ರ)ರವರ ಮುಂದೆ ವಾದಿಸಿದರು. ಈ ಪುರಾವೆಯನ್ನು ಆಲಿಸಿದ ಹ. ಉಮರ್(ರ) ಅವರು 'ಓರ್ವ ಮಹಿಳೆ ಸರಿಯಾದ ಮಾತು ಹೇಳಿದರು ಮತ್ತು ಪುರುಷನಿಂದ ತಪ್ಪಾಯಿತು' ಎಂದು ಉದ್ಗರಿಸಿದರು. ಆದ್ದರಿಂದ ಮಹ್‌ರ್‌ಗೆ ಸಂಬಂಧಿಸಿದಂತೆ, ಅದಕ್ಕೆ ಮಿತಿ ಹೇರುವುದಕ್ಕೆ ಇಸ್ಲಾಮೀ ಕಾನೂನಿನಲ್ಲಿ ಯಾವುದೇ ಆಸ್ಪದವಿಲ್ಲವೆಂಬುದು ಸುಸ್ಪಷ್ಟ. ಆದರೂ ಮಹ್‌ರ್‌ನಲ್ಲಿ ಮಿತಿ ಮೀರುವುದನ್ನು

ಮತ್ತು ಪುರುಷನ ಶಕ್ತಿಗೆ ಮೀರಿದ ಮಹ್‌ರ್ ನಿಶ್ಚಯಿಸುವುದನ್ನು ನಂಬಲರ್ಹ ಹದೀಸ್‌ಗಳಲ್ಲಿ ಒಂದು ಅಪ್ರಿಯ ಕಾರ್ಯವೆಂದು ವರ್ಣಿಸಲಾಗಿದೆ.

ಪ್ರವಾದಿರವರು(ಸ) ಈ ರೀತಿ ಹೇಳಿರುವರು:

'ಸ್ತ್ರೀಯನ್ನು ಪುರುಷನೊಂದಿಗೆ ಬೆಸುಗೆಯಲ್ಲಿರುವಂತೆ ಮಾಡಲು ಪ್ರಯತ್ನಿಸಿರಿ ಮತ್ತು ಮಹ್‌ರ್ ನಿಶ್ಚಯಿಸುವುದರಲ್ಲಿ ಮಿತಿ ಮೀರದಿರಿ.'

ಅಬೂ ಅಮ್ರ್ ಅಲ್ ಅಸ್ಲಮೀಯವರು ಓರ್ವ ಮಹಿಳೆಯೊಂದಿಗೆ ಇನ್ನೂರು ದಿರ್ಹಮ್ ಮಹ್‌ರ್ ನಿಶ್ಚಯಿಸಿ ಮದುವೆಯಾದರು. ಆ ಬಗ್ಗೆ ವಿಮರ್ಶಿಸುತ್ತಾ ಪ್ರವಾದಿವರ್ಯರು(ಸ) 'ನಿಮಗೆ ನದಿ-ಸಾಲೆಗಳಲ್ಲಿ ದಿರ್ಹಮ್ ಹರಿದು ಬರುತ್ತಿದ್ದರೂ ಪ್ರಾಯಶಃ ನೀವು ಇದಕ್ಕಿಂತ ಹೆಚ್ಚು ಮಹ್‌ರ್ ನಿಶ್ಚಯಿಸುತ್ತಿರಲಿಲ್ಲ' ಎಂದು ಹೇಳಿದರು. ಹ.ಅನಸ್(ರ)ರವರು ಓರ್ವ ಮಹಿಳೆಯೊಂದಿಗೆ 4 ಊಕಿಯಃ (160 ದಿರ್ಹಮ್) ಮೆಹರ್‌ಗೆ ವಿವಾಹ ಮಾಡಿದಾಗ ಪ್ರವಾದಿ(ಸ) ಅದನ್ನು ಈ ರೀತಿ ವಿಮರ್ಶಿಸಿದರು. 'ಪ್ರಾಯಶಃ ನೀವು ಆ ಪರ್ವತದಿಂದ ಬೆಳ್ಳಿಯನ್ನು ಅಗೆದು ತೆಗೆಯುತ್ತಿರುವಿರಿ.'

ಹ. ಉಮರ್(ರ) ಈ ರೀತಿ ಹೇಳಿರುವರು. 'ಮಹಿಳೆಗೆ ಮಹ್‌ರ್ ನಿಶ್ಚಯಿಸುವುದರಲ್ಲಿ ಮಿತಿ ಮೀರದಿರಿ.' ಒಂದು ವೇಳೆ ಇದು ಇಹಲೋಕದಲ್ಲಿ ಗೌರವಾರ್ಹ ಮತ್ತು ಪರಲೋಕದಲ್ಲಿ ದೇವನಿಷ್ಠೆಯ ವಿಷಯವಾಗಿರುತ್ತಿದ್ದರೆ ಪ್ರವಾದಿ(ಸ) ಅತ್ಯಧಿಕ ಮಹ್‌ರ್ ನಿಶ್ಚಯಿಸುತ್ತಿದ್ದರು. ಆದರೆ ಪ್ರವಾದಿವರ್ಯ(ಸ)ರ ಪತ್ನಿಯರ ಮತ್ತು ಪುತ್ರಿಯರ ಪೈಕಿ ಯಾರ ಮಹ್‌ರ್ ಕೂಡಾ 12 ಊಕಿಯಃ (480 ದಿರ್ಹಮ್)ಕ್ಕಿಂತ ಅಧಿಕವಿರಲಿಲ್ಲ.

ಇವಿಷ್ಟು ಕೇವಲ ಮಹ್‌ರ್‌ನಲ್ಲಿ ಮೇರೆ ಮೀರುವ ಬಗ್ಗಾಯಿತು. ಆದರೆ ನಮ್ಮ ದೇಶದಲ್ಲಿ ಇದಕ್ಕಿಂತಲೂ ಕೆಟ್ಟ ಸಂಪ್ರದಾಯವೊಂದು ರೂಢಿಯಲ್ಲಿದೆ. ಇಲ್ಲಿ ಸಹಸ್ರಾರು ಮತ್ತು ಲಕ್ಷಗಟ್ಟಲೆ ರೂಪಾಯಿ ಮಹ್‌ರ್‌ಅನ್ನು ಸಾಲದ ರೂಪದಲ್ಲಿ ನಿಶ್ಚಯಿಸಲಾಗುತ್ತದೆ. ಆದರೆ ಅದನ್ನು ನಿಶ್ಚಯಿಸುವವರು ಇಷ್ಟೊಂದು ಭಾರಿ ಮೊತ್ತವನ್ನು ನೀಡಲು ಶಕ್ತರಾಗಿರುವುದಿಲ್ಲ. ಮಾತ್ರವಲ್ಲ ಅದನ್ನು ನಿಶ್ಚಯಿಸುವಾಗ, ಅದನ್ನು ಪಾವತಿ ಮಾಡಬೇಕಾಗಿದೆ ಎಂಬ ಇರಾದೆಯೂ ಅವರಿಗೆ ಇರುವುದಿಲ್ಲ. ಇದೊಂದು ಅನಿಷ್ಟ ಮಾತ್ರವಾಗಿರದೆ ವಿವಾಹ ಸಂಬಂಧವನ್ನು ಭ್ರಷ್ಟಗೊಳಿಸಿ ಬಿಡುವಂತಹ ಕ್ರಿಯೆಯಾಗಿದೆ.

'ಒಂದು ಮೊತ್ತದ ಮಹ್‌ರ್ ನಿಶ್ಚಯಿಸಿ ಓರ್ವನು ಓರ್ವ ಮಹಿಳೆಯನ್ನು ವಿವಾಹವಾಗುವಾಗ ಆ ಮೊತ್ತವನ್ನು ಪಾವತಿ ಮಾಡುವುದಿಲ್ಲವೆಂಬ ಇರಾದೆ ಹೊಂದಿದ್ದರೆ ಆತನು ವಾಸ್ತವದಲ್ಲಿ ವ್ಯಭಿಚಾರಿಯಾಗಿರುತ್ತಾನೆ. ಒಬ್ಬನು ಸಾಲ ಪಡೆಯುವಾಗ ಅದನ್ನು ಮರುಪಾವತಿ ಮಾಡುವುದಿಲ್ಲವೆಂಬ ಇರಾದೆ ಹೊಂದಿದ್ದರೆ ಅವನು ಕಳ್ಳನಾಗಿದ್ದಾನೆ.*'

1. ಮಹ್‌ರ್‌ನ ವಿಷಯವು ಎಷ್ಟು ಪ್ರಾಮುಖ್ಯವೆಂಬುದು ಈ ಹದೀಸ್‌ನಿಂದ ವ್ಯಕ್ತವಾಗುತ್ತದೆ. ಆದ್ದರಿಂದ ಸಾಮಾನ್ಯ ರೂಢಿಯಂತೆ ಸಾಲ ರೂಪದ ಹಾಗೂ ಭಾರೀ ಮೊತ್ತದ ಮಹ್‌ರ್ ನಿಶ್ಚಯಿಸಿದ ಎಲ್ಲ ಜನರಿಗೂ ನನ್ನ ಒಂದು ಸಲಹೆ ಇದೆ. ಆ ಮಹ್‌ರ್‌ನ ಪೂರ್ಣ ಪಾವತಿಯು ಅವರ ಶಕ್ತಿಗೆ ಮೀರಿದ

ಇದು ಈ ರೀತಿಯ ಮಹ್‌ರ್‌ನ ಆಂತರಿಕ ಕೇಡು. ಅದರ ಬಾಹ್ಯ ಕೆಡುಕು ಕೂಡಾ ಇದಕ್ಕಿಂತ ಕಡಿಮೆ ಮಹತ್ವದ್ದಲ್ಲ. ಪತಿಯು ತಲಾಕ್ ನೀಡದಿರಲಿ ಎಂಬುದೇ ಈ ರೀತಿಯ ಭಾರಿ ಮೊತ್ತದ ಸಾಲ ರೂಪದ ಮಹ್‌ರ್‌ಅನ್ನು ನಿಶ್ಚಯಿಸುವ ಉದ್ದೇಶವಾಗಿರುತ್ತದೆ. ಆದರೆ ಇದರ ಪರಿಣಾಮವೇನೆಂದರೆ ಎಂದಾದರೂ ಪತಿ ಪತ್ನಿಯರಲ್ಲಿ ವಿರಸ ಹುಟ್ಟಿ ಅವರು ಸಹಬಾಳ್ವೆ ನಡೆಸುವುದು ಅಸಾಧ್ಯವಾದಾಗ ಮಹ್‌ರ್‌ನ ಮೊತ್ತದ ಆಧಿಕ್ಯವು ಪತ್ನಿಯ ಪಾಲಿಗೆ ಪ್ರಾಣ ಕಂಟಕವಾಗಿ ಮಾರ್ಪಡುತ್ತದೆ. ಪತಿಯಾದವನು ಕೇವಲ ಮಹ್‌ರ್‌ಅನ್ನು ಪಾವತಿಸಬೇಕಾಗುವುದೆಂಬ ಭೀತಿಯಿಂದ ತಲಾಕ್ ನೀಡದೆ ಇರುತ್ತಾನೆ. ಈ ರೀತಿ ವರ್ಷಗಟ್ಟಲೆ ಮಾತ್ರವಲ್ಲ ಕೆಲವೊಮ್ಮೆ ಜೀವನದಾದ್ಯಂತ ಆ ಬಡಪಾಯಿ ಪತ್ನಿ ತ್ರಿಶಂಕು ಸ್ಥಿತಿಯಲ್ಲಿ ಕಳೆಯಬೇಕಾಗುತ್ತದೆ. ಇಂದು ಮಹಿಳೆಯರನ್ನು ಕಾಡುತ್ತಿರುವ ಪಿಡುಗುಗಳ ಪೈಕಿ ಒಂದು ಪ್ರಮುಖ ಪಿಡುಗು ಭಾರಿ ಮೊತ್ತದ ಮಹ್‌ರ್ ಆಗಿದೆ. ಇದರಲ್ಲಿ ಸಮತೋಲನ ಪಾಲಿಸಿದರೆ ಸುಮಾರು 75 ಶೇ. ಸಂಕಷ್ಟಗಳು ಹುಟ್ಟುವ ಮೊದಲೇ ಪರಿಹಾರ ಕಾಣುವವು.

ನಮ್ಮ ಅಭಿಪ್ರಾಯದಂತೆ ಶರೀಅತ್‌ನ ವಿಧಿಗಳಿಗೆ ಭಂಗವುಂಟಾಗದಂತೆ ಈ ಪರಿಸ್ಥಿತಿಯ ಸುಧಾರಣೆ ಸಾಧ್ಯ. ಮಹ್‌ರ್ 'ಮುಅಜ್ಜಲ್' (ನಗದು) ಆಗಿದ್ದರೆ ಇತ್ತಂಡದವರು ತಮಗಿಷ್ಟ ಬಂದಷ್ಟು ಮಹ್‌ರ್ ನಿಶ್ಚಯಿಸಬಹುದು. ಅದಕ್ಕೆ ಯಾವುದೇ ಗರಿಷ್ಠ ಮಿತಿಯನ್ನು ಹೇರುವ ಅಗತ್ಯವಿಲ್ಲ. ಆದರೆ ಮಹ್‌ರ್ 'ಮುಅಜ್ಜಲ್' (ಸಾಲ ರೂಪದ್ದು) ಆಗಿದ್ದರೆ ಅದನ್ನು ಕಡ್ಡಾಯವಾಗಿ ಸ್ಟಾಂಪ್ ಪೇಪರಿನಲ್ಲಿ ಲಿಖಿತಗೊಳಿಸಬೇಕು. ಮಹ್‌ರ್‌ನ ಮೊತ್ತದ ಕನಿಷ್ಟ 50ಶೇ. ಮೌಲ್ಯದ ಸ್ಟಾಂಪ್ ಪೇಪರನ್ನು ಬಳಸಬೇಕು. ನ್ಯಾಯಾಲಯಗಳು, ಯಾವುದೇ ವ್ಯಾಜ್ಯದ ಸಂದರ್ಭದಲ್ಲಿ ಸ್ಟಾಂಪ್ ಇಲ್ಲದ ಅಥವಾ ಮಹ್‌ರ್ ಮೊತ್ತದ ಶೇ.50ಕ್ಕಿಂತ ಕಡಿಮೆ ಮೌಲ್ಯದ ಸ್ಟಾಂಪ್ ಇರುವ, ಮಹ್‌ರ್‌ಗೆ ಸಂಬಂಧಿಸಿದ ಯಾವುದೇ ದಸ್ತಾವೇಜನ್ನು ಮಾನ್ಯ ಮಾಡಬಾರದು. ಈ ರೀತಿಯ ನಿಯಮ ಜಾರಿಗೊಂಡರೆ ಸಾಲದ ರೂಪದ ಮಹ್‌ರ್‌ನ ದುಷ್ಟ ಪದ್ಧತಿ ನಿರಾಯಾಸವಾಗಿ ಕೊನೆಗೊಳ್ಳಬಹುದು. ಆಗ ಜನರು ತಮ್ಮ ಸಾಮರ್ಥ್ಯಕ್ಕನುಸಾರವಾಗಿ ಮಹ್‌ರ್ ನಿಶ್ಚಯಿಸಲು ನಿರ್ಬಂಧಿತರಾಗುವರು. ದುಂದು ವೆಚ್ಚದಲ್ಲಿ ದುಡ್ಡು ಖರ್ಚುಮಾಡುವ ಬದಲು ನಗದು ಅಥವಾ ಸೊತ್ತು-ಒಡವೆಗಳ ರೂಪದಲ್ಲಿ ವಿವಾಹದ ಸಮಯದಲ್ಲೇ ಮಹ್‌ರ್ ಪಾವತಿ ಮಾಡಲೂ ಅವರು ನಿರ್ಬಂಧಿತರಾಗುವರು. ಪರಿಸ್ಥಿತಿಯಲ್ಲಿ ಸಾಕಷ್ಟು ಸುಧಾರಣೆಯಾದ ಬಳಿಕ ಈ ನಿಯಮವನ್ನು ಕೊನೆಗೊಳಿಸಬಹುದು.

---

ವಿಷಯವಾಗಿದ್ದರೆ ಅಂತಹ ಪುರುಷರು ತಮ್ಮ ಪತ್ನಿಯರನ್ನು ತಾವು ಏಕಕಾಲದಲ್ಲಿ ಅಥವಾ ಕಂತುಗಳಲ್ಲಿ ಪಾವತಿಸಲು ಸಾಧ್ಯವಿರುವಷ್ಟು ಕಡಿಮೆ ಮೊತ್ತವನ್ನು ತಮ್ಮ ಮಹ್‌ರ್ ಎಂದು ಒಪ್ಪುವಂತೆ ಮನವೊಲಿಸಲು ಪ್ರಯತ್ನಿಸಬೇಕು. ಸಜ್ಜನರಾದ ಮಹಿಳೆಯರಿಗೂ ನನ್ನ ಸಲಹೆಯೇನೆಂದರೆ, ತಮ್ಮ ಪತಿಯಂದಿರ ಆರ್ಥಿಕ ಸ್ಥಿತಿಯನ್ನು ಪರಿಗಣಿಸಿ ಮಹ್‌ರ್‌ನಲ್ಲಿ ಕಡಿತಗೊಳಿಸಲು ಸಮ್ಮತಿಸಬೇಕು, ಧರ್ಮನಿಷ್ಠ ಮುಸಲ್ಮಾನರು ಮಹರ್‌ನ ಸಾಲದಿಂದ ಸಾಧ್ಯವಾದಷ್ಟು ಶೀಘ್ರ ಮುಕ್ತರಾಗಬೇಕು, ಮಹ್‌ರ್ ಎಂಬುದು ಪಾವತಿಯಾಗಲೇ ಬೇಕಾದ ಒಂದು ಸಾಲವಾಗಿದೆ . ತನ್ನ ಮೇಲೆ ತಿಳಿದೋ ತಿಳಿಯದೆಯೋ ಸಾಲದ ಹೊರೆ ಹೊತ್ತು ಸಾಯುವುದು ಎಷ್ಟೊಂದು ಕೆಟ್ಟ ಕಾರ್ಯವೆಂದರೆ, ಪ್ರವಾದಿ(ಸ) ಅವರು ಅಂತವರ ಜನಾಝ ನಮಾಝನ್ನು ಸಹ ನಿರ್ವಹಿಸಲು ನಿರಾಕರಿಸಿದ್ದರು.

# 6. ನಫಕಃ (ಜೀವನಾಂಶ ಅಥವಾ ಅಶನಾರ್ಥ)

ಈ ವಿಷಯದಲ್ಲಿ ವಿವಾದದ ಎರಡು ರೂಪಗಳಿವೆ:

1. ಪತಿಯು ಜೀವನಾಂಶ ನೀಡುವ ಸಾಮರ್ಥ್ಯವಿದ್ದರೂ ಅದನ್ನು ನೀಡದಿರುವುದು.
2. ಆತನಲ್ಲಿ ಜೀವನಾಂಶ ನೀಡುವ ಸಾಮರ್ಥ್ಯವೇ ಇಲ್ಲದಿರುವುದು.

ಮೊದಲನೆಯ ರೂಪದಲ್ಲಿ ಜೀವನಾಂಶ ನೀಡುವಂತೆ ಕಾಝಿಯವರು ಸರ್ವಸಾಧ್ಯ ವಿಧಾನಗಳಿಂದ (ಪತಿಯನ್ನು) ನಿರ್ಬಂಧಿಸಬಹುದು. ಈ ವಿಷಯದಲ್ಲಿ ಯಾವುದೇ ಭಿನ್ನಾಭಿಪ್ರಾಯವಿಲ್ಲ. ಆದರೆ ಆತನು ಕಾಝಿಯವರ ಆಜ್ಞೆಗಳನ್ನು ಪಾಲಿಸದಿದ್ದರೆ ಯಾವ ಕ್ರಮ ಕೈಗೊಳ್ಳಬೇಕೆಂಬ ಬಗ್ಗೆ ಅಭಿಪ್ರಾಯ ಭೇದವಿದೆ. ಹನಫೀ ಕರ್ಮಶಾಸ್ತ್ರ ಪ್ರಕಾರ ಇಂತಹ ಪ್ರಸಂಗಗಳಲ್ಲಿ ಕಾಝಿ ಏನೂ ಮಾಡುವಂತಿಲ್ಲ. ಪತ್ನಿಯು ತನ್ನ ಜೀವನಾಂಶದ ಏರ್ಪಾಡನ್ನು ಸ್ವಯಂ ಮಾಡಿಕೊಳ್ಳಬೇಕು. ಇದಕ್ಕಾಗಿ ಆಕೆ ಪತಿಯ ಹೆಸರಲ್ಲಿ ಸಾಲಪಡೆಯಬಹುದು ಅಥವಾ ಸ್ವತಃ ಶ್ರಮ ವಹಿಸಿ ದುಡಿದು ಸಂಪಾದಿಸಲೂ ಬಹುದು ಅಥವಾ ಆಕೆ ತನ್ನ ಬಂಧುಗಳ ಪೈಕಿ ಯಾರದಾದರೂ ನೆರವು ಪಡೆಯಲೂ ಬಹುದು. ಇದಕ್ಕೆ ತದ್ವಿರುದ್ಧವಾಗಿ ಮಾಲಿಕೀ ಕರ್ಮಶಾಸ್ತ್ರದ ಪ್ರಕಾರ ಇಂತಹ ಸಂದರ್ಭಗಳಲ್ಲಿ ಸ್ವತಃ ತಲಾಖ್ ಆಜ್ಞೆ ಜಾರಿ ಮಾಡುವ ಅಧಿಕಾರ ಕಾಝಿಯವರಿಗಿದೆ. ಕೆಲವು ಹನಫೀ ಕರ್ಮಶಾಸ್ತ್ರಜ್ಞರು ಮಾಲಿಕೀ ಕರ್ಮ ಶಾಸ್ತ್ರದ ಈ ಧರ್ಮ ವಿಧಿಯನ್ನೇ ಅನುಸರಿಸುವುದನ್ನು ಇಷ್ಟಪಡುತ್ತಾರೆ. ಆದರೆ ಅವರು ಅದಕ್ಕೆ ಎರಡು ಶರತ್ತುಗಳನ್ನು ವಿಧಿಸುತ್ತಾರೆ.

1. ಪತ್ನಿಯು ಸ್ವಂತ ನೆಲೆಯಲ್ಲಿ ಜೀವನಾಂಶದ ವ್ಯವಸ್ಥೆ ಮಾಡುವ ಸಾಮರ್ಥ್ಯ ಇಲ್ಲದವಳಾಗಿರಬೇಕು.

2. ಒಂದು ವೇಳೆ ಆ ಸಾಮರ್ಥ್ಯ ಆಕೆಗೆ ಇದ್ದರೂ ಪತಿಯಿಂದ ಬೇರ್ಪಟ್ಟು ಇರುವುದರಿಂದ ಆಕೆ ದುರಾಚಾರದಲ್ಲಿ ಸಿಲುಕುವ ಭಯವಿರಬೇಕು.

ಆದರೆ ಈ ಶರತ್ತುಗಳು ಸರಿ ಎನಿಸುವುದಿಲ್ಲ. ಪವಿತ್ರ ಕುರ್‌ಆನ್‌ನ ಪ್ರಕಾರ ಜೀವನಾಂಶವು ಪತ್ನಿಯ ಹಕ್ಕು. ಆ ಹಕ್ಕಿಗೆ ಪ್ರತಿಯಾಗಿಯೇ ಪತಿಗೆ ದಾಂಪತ್ಯ ಹಕ್ಕುಗಳು ದೊರೆಯುತ್ತವೆ. ಯಾರಾದರೂ ಈ ಹಕ್ಕನ್ನು ನೀಡಲು ಉದ್ದೇಶಪೂರ್ವಕವಾಗಿ ನಿರಾಕರಿಸಿದರೆ ಮಹಿಳೆಯನ್ನು ಬಲಾತ್ಕಾರವಾಗಿ ಆತನ ವಿವಾಹ ಬಂಧನದಲ್ಲಿ ಬಂಧಿಯಾಗಿರಲು ಒತ್ತಾಯಪಡಿಸುವುದು ಸಮಂಜಸವಲ್ಲ. ಒಂದು ವಸ್ತುವನ್ನು ಪಡೆದು ಅದಕ್ಕೆ ಪ್ರತಿಫಲ ನೀಡಲು ನಿರಾಕರಿಸುವ ಮತ್ತು ಒಂದು ಸೊತ್ತನ್ನು ಪಡೆದು ಅದರ ಬೆಲೆಯನ್ನು ಪಾವತಿಸಲು ನಿರಾಕರಿಸುವ ವ್ಯಕ್ತಿ ಆ ವಸ್ತುವನ್ನು ಪಡೆಯಲು ಹಕ್ಕುದಾರನಾಗುವುದಾದರೂ ಹೇಗೆ? ಓರ್ವ ಮಹಿಳೆಯು ಒಬ್ಬ ಪುರುಷನ ವಿವಾಹ ಬಂಧನದಲ್ಲಿರುವ ತನಕ ಆಕೆಯ ಪಾಲನೆ ಪೋಷಣೆಯ ಜವಾಬ್ದಾರಿಯು ಅವನ ಮೇಲಿರುತ್ತದೆ. ಹೀಗಿರುವಾಗ ಆಕೆ ಸ್ವತಃ ದುಡಿದು ತನ್ನ ಜೀವನೋಪಾಯವನ್ನು ಮಾಡುವುದು ಅಥವಾ ತನ್ನ ಸಂಬಂಧಿಕರ ಮೇಲೆ ಅದರ ಭಾರ ಹಾಕುವುದು ಅಥವಾ ಅಕ್ರಮಿಯಾದ ತನ್ನ ಪತಿಯ ಹೆಸರಲ್ಲಿ

ಸಾಲ ಪಡೆಯುವ ಅಸಾಧ್ಯ ಕೆಲಸವನ್ನು ಮಾಡುವುದು ಇತ್ಯಾದಿ ಸಂಕಷ್ಟಗಳಿಗೆ ಆಕೆಯನ್ನು ಗುರಿಪಡಿಸುವುದು ಯಾವ ನ್ಯಾಯದ ಬುನಾದಿಯಲ್ಲಿ?

ಎರಡನೆಯ ಸ್ಥಿತಿಯಲ್ಲಿ, ಹನಫೀ ಕರ್ಮಶಾಸ್ತ್ರಜ್ಞರ ಅಭಿಪ್ರಾಯವೇನೆಂದರೆ ಮಹಿಳೆಗೆ ಸಂಯಮ ಮತ್ತು ಆತ್ಮಾವಲೋಕನದ ಉಪದೇಶ ನೀಡಬೇಕು. ಆಕೆಗೆ ಯಾರಿಂದಾದರೂ ಸಾಲ ಪಡೆದು ಅಥವಾ ಬಂಧುಗಳ ನೆರವು ಪಡೆದು ಜೀವನ ಸಾಗಿಸಲು ಹೇಳಬೇಕು. ಇಮಾಮ್ ಅಬೂ ಹನೀಫ(ರ) ಅವರ ಪ್ರಕಾರ, ಆಕೆ ಅವಿವಾಹಿತಳಾಗಿದ್ದರೆ ಯಾರನ್ನು ಆಶ್ರಯಿಸಿರುತ್ತಿದ್ದಳೋ ಅಂತಹ ವ್ಯಕ್ತಿಯೇ ಆಕೆಯ ಜೀವನಾಂಶದ ಹೊರೆಯನ್ನು ಕಡ್ಡಾಯವಾಗಿ ಹೊರಬೇಕು. ಆದರೆ ಇಮಾಮ್ ಮಾಲಿಕ್, ಇಮಾಮ್ ಶಾಫಿಈ ಮತ್ತು ಇಮಾಮ್ ಅಹ್ಮದ್ ಬಿನ್ ಹಂಬಲ್(ರ)ರವರ ಅಭಿಪ್ರಾಯದಂತೆ ಮಹಿಳೆಗೆ ಅಂತಹ ಪತಿಯೊಂದಿಗೆ ಜೀವನ ಸಾಗಿಸಲು ಅಸಾಧ್ಯವಾದರೆ ಹಾಗೂ ಆಕೆ ಬೇರ್ಪಡೆ ಆಗಬೇಕೆಂದು ವ್ಯಾಜ್ಯ ಹೂಡಿದರೆ ಅವರ ನಡುವೆ ವಿಚ್ಛೇದನ ಮಾಡಿಸಬೇಕು. ಇಮಾಮ್ ಮಾಲಿಕ್(ರ) ಅವರ ಅಭಿಪ್ರಾಯದಂತೆ ಈ ವಿಷಯದಲ್ಲಿ ಪತಿಗೆ ಒಂದು ತಿಂಗಳು ಅಥವಾ ಎರಡು ತಿಂಗಳು ಅಥವಾ ಸಮಂಜಸವೆನಿಸುವ ಒಂದು ನಿರ್ದಿಷ್ಟ ಅವಧಿಯ ವರೆಗೆ ಸಮಯಾವಕಾಶ ನೀಡಲಾಗುವುದು. ಇಮಾಮ್ ಶಾಫಿಈ(ರ) ಕೇವಲ ಮೂರು ದಿನದ ಅವಧಿ ನೀಡುತ್ತಾರೆ. ಇಮಾಮ್ ಅಹ್ಮದ್(ರ)ರವರ ಫತ್ವಾದಂತೆ ತಡಮಾಡದೆ ಪತಿ-ಪತ್ನಿಯರನ್ನು ವಿವಾಹ ಬಂಧನದಿಂದ ಬೇರ್ಪಡಿಸಬೇಕು.

ಈ ವಿಷಯದಲ್ಲಿ 'ಅವರು ತಮ್ಮ ಸೊತ್ತಿನಿಂದ ವ್ಯಯ ಮಾಡುವ ಕಾರಣದಿಂದಾಗಿ' ಎಂಬ ಪವಿತ್ರ ಕುರ್‌ಆನಿನ ನಿಯಮ ಮಾತ್ರವಲ್ಲ ಪ್ರವಾದಿ ವಚನಗಳು ಮತ್ತು ಸಹಾಬಿಗಳ(ರ) ನಡೆನುಡಿಗಳು ಕೂಡಾ ಈ ಮೂವರು ಇಮಾಮರುಗಳ ಅಭಿಪ್ರಾಯವನ್ನೇ ಸಮರ್ಥಿಸುತ್ತವೆ. ದಾರುಕುತ್‌ನೀ ಮತ್ತು ಬೈಹಕೀಯಲ್ಲಿ ಪ್ರವಾದಿವರ್ಯರು(ಸ) "ಪತಿಯು ಜೀವನಾಂಶ ನೀಡದಿದ್ದರೆ ದಂಪತಿಗಳ ಮಧ್ಯೆ ತಫ್ರೀಕ್ ಅರ್ಥಾತ್ ವಿಚ್ಛೇದನ ಮಾಡಿಸಬೇಕು" ಎಂದು ತೀರ್ಮಾನಿಸಿರುವುದಾಗಿ ವರದಿಯಾಗಿದೆ. ಹ. ಅಲೀ, ಹ. ಉಮರ್ ಮತ್ತು ಹ. ಅಬೂಹುರೈರ(ರ) ಅವರಿಂದಲೂ ಇಂತಹುದೇ ಉಲ್ಲೇಖಗಳು ವರದಿಯಾಗಿವೆ. ತಾಬಿಈಗಳ ಷೈಕ ಸಈದ್ ಬಿನ್ ಮುಸಯ್ಯಬ್(ರ) ಅವರ ಫತ್ವಾ ಕೂಡಾ ಇದುವೇ ಆಗಿದೆ. ಹ. ಉಮರ್ ಬಿನ್ ಅಬ್ದುಲ್ ಅಝೀಝ್(ರ) ಅವರು ತಮ್ಮ ಆಡಳಿತಾವಧಿಯಲ್ಲಿ ಈ ಅಭಿಪ್ರಾಯದಂತೆಯೇ ತೀರ್ಪು ವಿಧಿಸುತ್ತಿದ್ದರೆಂದು ಸ್ಪಷ್ಟವಾಗಿ ತಿಳುದು ಬರುತ್ತದೆ.

ಇದಕ್ಕೆ ವಿರುದ್ಧವಾಗಿ ಹನಫೀ ಕರ್ಮಶಾಸ್ತ್ರಜ್ಞರು ಈ ಕೆಳಗಿನ ಆಯತ್‌ನಿಂದ ಆಧಾರ ಪಡೆಯುತ್ತಾರೆ.

**''...ಕಡಿಮೆ ಜೀವನಾಧಾರ ನೀಡಲ್ಪಟ್ಟಿರುವವನು, ಅಲ್ಲಾಹನು ಆತನಿಗೆ ನೀಡಿರುವುದರಿಂದಲೇ ಖರ್ಚು ಮಾಡಲಿ. ಅಲ್ಲಾಹನು ಯಾರಿಗೆ ಎಷ್ಟು ಕೊಟ್ಟಿರುತ್ತಾನೋ ಅದಕ್ಕಿಂತ ಹೆಚ್ಚಿನ ತ್ರಾಸ ಅವನಿಗೆ ಕೊಡುವುದಿಲ್ಲ. ಅಲ್ಲಾಹನು ಬಡತನದ ಬಳಿಕ ಸಂಪನ್ನತೆಯನ್ನು ನೀಡಲೂಬಹುದು.'' (ಸೂರಃ ಅತ್ತಲಾಕ್)**

ಆದರೆ ಈ ಆಯತ್‌ನಿಂದ- ಜೀವನಾಂಶಕ್ಕೆ ಶರೀಅತ್‌ನಲ್ಲಿ ಯಾವುದೇ ಪ್ರಮಾಣವನ್ನು ನಿರ್ಧರಿಸಲಾಗಿಲ್ಲ. ಅದು ಜೀವನಾಂಶ ನೀಡುವವನ ಆರ್ಥಿಕ ಸಾಮರ್ಥ್ಯವನ್ನು ಅವಲಂಬಿಸಿದೆ ಎಂದು ಮಾತ್ರ ತಿಳಿದು ಬರುತ್ತದೆ. ಸ್ವಲ್ಪವೂ ಜೀವನಾಂಶ ಇಲ್ಲದೆಯೇ ಜೀವನ ಸಾಗಿಸುವಂತೆ ಮಹಿಳೆಯನ್ನು ನಿರ್ಬಂಧಿಸಬೇಕೆಂದು ಇದರ ಅರ್ಥವಲ್ಲ. ಸಂಕಷ್ಟ, ಬಡತನ ಮತ್ತು ಹಸಿವಿನ ಸ್ಥಿತಿಯಲ್ಲೂ ಪತ್ನಿಯು ಪತಿಯ ಜೊತೆ ಇರಬೇಕೆಂಬುದು ನಿಸ್ಸಂದೇಹವಾಗಿಯೂ ಒಂದು ಉದಾತ್ತ ತತ್ವವಾಗಿದೆ. ಇಸ್ಲಾಮ್ ಇಂತಹುದೇ ಉದಾತ್ತ ತತ್ವಗಳನ್ನು ಬೋಧಿಸುತ್ತದೆ. ಓರ್ವ ಸುಶೀಲೆಯಾದ ಮಹಿಳೆ ಹಾಗೆಯೇ ಇರಬೇಕು ಎಂಬುದು ಕೂಡಾ ನಿರ್ವಿವಾದ. ಆದರೆ ನೈತಿಕ ಬೋಧನೆಗಳು ಶರೀಅತ್‌ನ ಆಧಾರದಲ್ಲಿರುವ ಹಕ್ಕುಗಳು ಇವೆರಡೂ ಪ್ರತ್ಯೇಕ ತೀರಾ ವಿಭಿನ್ನ ವಿಷಯಗಳಾಗಿವೆ. ಜೀವನಾಂಶವು ಶರೀಅತ್ ಪ್ರಕಾರ ಪತ್ನಿಯ ನ್ಯಾಯಬದ್ಧ ಹಕ್ಕಾಗಿದೆ. ಆಕೆ ಆತ್ಮ ಸಂತೃಪ್ತಿಯೊಂದಿಗೆ ಆ ಹಕ್ಕನ್ನು ಬಿಟ್ಟುಕೊಟ್ಟರೆ ಮತ್ತು ಜೀವನಾಂಶವಿಲ್ಲದೆಯೂ ಪತಿಯ ಸಂಗಾತಿಯಾಗಿರಲು ಇಚ್ಛಿಸಿದರೆ ಇದು ಅತ್ಯಂತ ಸ್ತುತ್ಯರ್ಹ ಕ್ರಮ. ಆದರೆ ಆಕೆ ಅದನ್ನು ಬಿಟ್ಟು ಕೊಡಲು ಸಿದ್ಧವಿಲ್ಲದಿದ್ದರೆ ಅಥವಾ ಪತಿಯಿಂದ ಜೀವನಾಂಶ ಪಡೆಯದೇ ಆತನೊಂದಿಗೆ ಜೀವಿಸುವುದು ಆಕೆಗೆ ಅಸಾಧ್ಯವಾದರೆ ಇಸ್ಲಾಮೀ ಕಾನೂನಿನ ನೀತಿ ನ್ಯಾಯದಲ್ಲಿ ಆಕೆಯನ್ನು ಸಂಕಷ್ಟ ಸಹಿಸಿಕೊಂಡು, ಅಸಹಾಯಕ ಸ್ಥಿತಿಯಲ್ಲಿ ನೈತಿಕತೆ ಮತ್ತು ಉದಾತ್ತತೆಯ ಆ ಉನ್ನತ ಮಟ್ಟದಲ್ಲಿ ಇರುವಂತೆ ನಿರ್ಬಂಧಿಸುವುದಕ್ಕೆ ಯಾವುದೇ ಆಸ್ಪದವಿಲ್ಲ.

ಆದ್ದರಿಂದ ಈ ವಿಷಯದಲ್ಲಿ ಇರುವ ಅಭಿಪ್ರಾಯಗಳ ಪೈಕಿ ಇಮಾಮ್ ಮಾಲಿಕ್(ರ) ಅವರ ಅಭಿಮತವು ನಮ್ಮ ಮಟ್ಟಿಗೆ ಹೆಚ್ಚು ಸ್ವೀಕಾರಾರ್ಹವಾಗಿದೆ. ಇಮಾಮ್ ಮಾಲಿಕ್(ರ) ಅವರು ಪತಿಗೆ ಸೂಕ್ತ ಕಾಲಾವಕಾಶ ನೀಡಿದ ಬಳಿಕ ವಿಚ್ಛೇದನ ಮಾಡಿಸಬೇಕೆಂದು ವಿಧಿಸಿದ್ದಾರೆ.

## 7. ಸ್ತ್ರೀ ಪೀಡನೆ

"ನಿಮ್ಮ ಸ್ತ್ರೀಯರಿಂದ ಆಜ್ಞೋಲ್ಲಂಘನೆಯ ಆಶಂಕೆ ನಿಮಗಿದ್ದರೆ ಅವರಿಗೆ ನೀವು ಉಪದೇಶ ನೀಡಿರಿ. ಮಲಗುವಲ್ಲಿಂದ ಅವರಿಂದ ದೂರವಿರಿ ಮತ್ತು ಅವರಿಗೆ ಹೊಡೆಯಿರಿ. ಅನಂತರ ಅವರು ನಿಮಗೆ ವಿಧೇಯರಾಗಿ ನಡೆದರೆ, ಅವರ ಮೇಲೆ ಕೈಯೆತ್ತಲು ಬೇಕು ಬೇಕೆಂದೇ ನೆಪ ಹುಡುಕಬೇಡಿರಿ." (ಅನ್ನಿಸಾ : 34)

ಎಂಬ ಕುರ್‌ಆನ್ ವಾಕ್ಯದ ಮೇರೆಗೆ ಯಾವುದೇ ಧರ್ಮಬದ್ಧ ಕಾರಣವಿಲ್ಲದೆ ತನ್ನ ಪತ್ನಿಯೊಂದಿಗೆ ಕಠಿಣವಾಗಿ ವರ್ತಿಸುವ ಅನುಮತಿ ಪತಿಯಾದವನಿಗೆ ಇರುವುದಿಲ್ಲ. ಆತನು ಮಾತಿನ ಮೂಲಕವಾಗಲೀ ದೈಹಿಕವಾಗಿ ಆಗಲೀ ಪತ್ನಿಯೊಂದಿಗೆ ಕ್ರೂರವಾಗಿ ವರ್ತಿಸಿದರೆ ಆಕೆಗೆ ಅದರ ವಿರುದ್ಧ ಕಾನೂನಿನ ಆಶ್ರಯ ಪಡೆಯುವ ಹಕ್ಕೂ ಇದೆ. ಈ ವಿಷಯದಲ್ಲಿ ಯಾವುದೇ ವಿವರವಾದ ನಿಯಮಾವಳಿ ನಮಗೆ ಸಿಕ್ಕಿಲ್ಲ. ಆದರೆ ಇಂತಹ ಅನ್ಯಾಯಗಳಿಂದ ಮಹಿಳೆಯನ್ನು ರಕ್ಷಿಸುವ ಮತ್ತು ಹಿಂಸೆಯು ಅಸಹನೀಯವಾಗುವ ಸಂದರ್ಭಗಳಲ್ಲಿ ಪತಿ-ಪತ್ನಿಯರ ನಡುವೆ ವಿಚ್ಛೇದನ ಮಾಡಿಸುವ ಅಧಿಕಾರವನ್ನು ಕಾಝಿಯವರಿಗೆ ನೀಡುವುದಕ್ಕೆ ಇಸ್ಲಾಮೀ

ಕಾನೂನಿನ ತತ್ವಗಳಲ್ಲಿ ಸಾಕಷ್ಟು ಅವಕಾಶವಿದೆ ಎಂದು ನಮ್ಮ ಅಭಿಪ್ರಾಯವಾಗಿದೆ. ಇಂದು ಕೆಲವು ವರ್ಗಗಳಲ್ಲಿ ಸ್ತ್ರೀಯರೊಂದಿಗೆ ಬಹಳಷ್ಟು ಅವ್ಯವಹಾರಗಳು ನಡೆಯುತ್ತಿವೆ. ಕೆಲವರು ಪತಿಯಾಗುವುದೆಂದರೆ ಅಕ್ರಮ ಅನ್ಯಾಯವೆಸಗುವ ಅಪರಿಮಿತ ಪರವಾನಗಿ ಪಡೆಯುವುದು ಎಂದು ಭಾವಿಸಿದಂತಿದೆ. ಆದ್ದರಿಂದ ಕಾನೂನಿನಲ್ಲಿ ಈ ಬಗ್ಗೆ ಸೂಕ್ತ ವಿಧಿಗಳ ಸೇರ್ಪಡೆ ಅತ್ಯಗತ್ಯವಾಗಿದೆ. ಏನಿಲ್ಲದಿದ್ದರೂ ಕನಿಷ್ಟ ಪಕ್ಷ ಹೊಡೆತ-ಬಡಿತಗಳನ್ನೂ ಸದಾ ಬಯ್ಯುತ್ತಿರುವುದನ್ನೂ 'ಖುಲಾ' ಪಡೆಯಬಹುದಾದ ಸೂಕ್ತ ಕಾರಣಗಳ ಪೈಕಿ ಒಂದು ಕಾರಣವೆಂದು ಪರಿಗಣಿಸಲ್ಪಡಬೇಕು. ಯಾವ ಪತಿಯಂದಿರ ಹೊಡೆತದ ಮತ್ತು ಬಯ್ಯುವ ಅಭ್ಯಾಸದ ಬಗ್ಗೆ ಸಾಕಷ್ಟು ಪುರಾವೆಗಳು ಲಭಿಸುತ್ತವೋ ಅವರಿಂದ ಯಾವುದೇ ಪರಿಹಾರವಿಲ್ಲದೆ ಖುಲಾ ದೊರೆಯುವಂತೆ ಮಾಡುವುದು ಕೂಡಾ ಅತ್ಯವಶ್ಯಕವಾಗಿದೆ.

## 8. ತಹ್ಕೀಮ್ ಅಥವಾ ಪಂಚಾಯಿತಿ (Arbitration):

ಈ ವಿಷಯದಲ್ಲಿ ಹ. ಅಲೀ(ರ) ಅವರು ಅನುಸರಿಸಿದ ಕಾರ್ಯ ವಿಧಾನದಲ್ಲಿ ನಮಗೆ ಸರಿಯಾದ ಮಾರ್ಗದರ್ಶನ ಲಭಿಸುತ್ತದೆ. 'ಕಶ್ಫುಲ್ ಗುಮ್ಮ' ಎಂಬ ಗ್ರಂಥದಲ್ಲಿ ಉಲ್ಲೇಖಿಸಲಾಗಿರುವಂತೆ ಒಮ್ಮೆ ಹ. ಅಲೀ(ರ) ಅವರ ಬಳಿಗೆ ಓರ್ವ ಪುರುಷ ಮತ್ತು ಆತನ ಪತ್ನಿಯ ಮೊಕದ್ದಮೆ ಬಂತು. ಹ. ಅಲೀ(ರ) ಅವರು 'ಪತಿಯ ಕಡೆಯಿಂದಲೂ ಪತ್ನಿಯ ಕಡೆಯಿಂದಲೂ ಒಬ್ಬೊಬ್ಬ ಪಂಚರನ್ನು ನೇಮಿಸಿರಿ' ಎಂಬ ಪವಿತ್ರ ಕುರ್ಆನ್‌ನ ಆಜ್ಞೆಯ ಪ್ರಕಾರ ಇಬ್ಬರೂ ತಂತಮ್ಮ ಕಡೆಯಿಂದ ಓರ್ವ ಪಂಚರನ್ನು ಸೂಚಿಸಬೇಕೆಂದು ವಿಧಿಸಿದರು. ತರುವಾಯ ಆ ಇಬ್ಬರು ಪಂಚರನ್ನು ಉದ್ದೇಶಿಸಿ ಈ ರೀತಿ ಹೇಳಿದರು;

"ಇಬ್ಬರನ್ನೂ ಜೊತೆಗೂಡಿಸುವುದು ಉತ್ತಮವೆಂದು ನೀವು ಭಾವಿಸಿದರೆ ಹಾಗೆ ಮಾಡಿರಿ. ಇಬ್ಬರನ್ನೂ ಬೇರ್ಪಡಿಸುವುದು ಉತ್ತಮವೆಂದು ನೀವು ಮನಗಂಡರೆ ಹಾಗೆ ಮಾಡಿರಿ."

ಆ ಬಳಿಕ ಮಹಿಳೆಯನ್ನು ಉದ್ದೇಶಿಸಿ ಈ ರೀತಿ ಪ್ರಶ್ನಿಸಿದರು; "ನೀನು ಈ ಇಬ್ಬರು ಪಂಚರ ತೀರ್ಮಾನದ ಬಗ್ಗೆ ಸಂತೃಪ್ತಳಾಗಿರುವೆಯಾ?" ಆಕೆ ಹೇಳಿದಳು; 'ಹೌದು, ನಾನು ಸಂತೃಪ್ತಳಾಗಿರುವೆನು,' ಅನಂತರ ಪುರುಷನಲ್ಲಿಯೂ ಅದೇ ರೀತಿ ಪ್ರಶ್ನಿಸಿದರು; ಆಗ ಅವನು 'ಅವರು ನಮ್ಮನ್ನು ಒಟ್ಟುಗೂಡಿಸಿದರೆ ಅವರ ತೀರ್ಮಾನ ನನಗೆ ಸಮ್ಮತ, ಅವರು ನಮ್ಮನ್ನು ಬೇರ್ಪಡಿಸಿದರೆ ಅದು ನನಗೆ ಸಮ್ಮತವಲ್ಲ' ಎಂದರು.

ಆಗ ಹ. ಅಲೀ(ರ) ಈ ರೀತಿ ಹೇಳಿದರು: "ನಿಮಗೆ ಅದರ ಹಕ್ಕು ಇಲ್ಲ. ನೀವು ನಿಮ್ಮ ಪತ್ನಿಯಂತೆ ನಿಮ್ಮ ಪೂರ್ಣ ಸಮ್ಮತಿಯನ್ನು ಸೂಚಿಸುವವರೆಗೆ ನಿಮ್ಮನ್ನು ಇಲ್ಲಿಂದ ಹೋಗಲು ಬಿಡಲಾರೆನು."

ಮಹತ್ವಪೂರ್ಣ ಕಾನೂನುಪರ ಸಮಸ್ಯೆಗಳನ್ನೊಳಗೊಂಡ ಪತಿ-ಪತ್ನಿಯರ ಪರಸ್ಪರ ಜಗಳಗಳಲ್ಲಿ ಪಂಚಾಯಿತಿಯ ಈ ವಿಧಾನವನ್ನೇ ಅನುಸರಿಸುವುದು ಸೂಕ್ತವೆನಿಸುತ್ತದೆ. ಈ ವಿಷಯದ ಬಗ್ಗೆ ಕಾನೂನಿನಲ್ಲಿ ಕೆಲವು ಪರಿಚ್ಛೇದಗಳನ್ನು ಸೇರಿಸುವ ಅಗತ್ಯವಿದೆ. ಅದರಲ್ಲಿ ಪಂಚಾಯಿತಿಯ ವಿಧಾನ, ಪಂಚರ ಅಧಿಕಾರ ವ್ಯಾಪ್ತಿ, ಅವರ ಸರ್ವಾನುಮತದ ತೀರ್ಪನ್ನು

ಜಾರಿಗೊಳಿಸುವ ವಿಧಾನ ಹಾಗೂ ಭಿನ್ನಾಭಿಪ್ರಾಯ ಇರುವಾಗ ನ್ಯಾಯ ತೀರ್ಮಾನದ ಕಾರ್ಯ ವಿಧಾನಗಳನ್ನು ಸ್ಪಷ್ಟಪಡಿಸಬೇಕು. ಇಸ್ಲಾಮೀ ಕಾನೂನಿನಲ್ಲಿ ಒಂದು ಅಮೂಲ್ಯ ತತ್ವವಿದೆ. ಪತಿ-ಪತ್ನಿಯರ ಖಾಸಗಿ ಜಗಳವನ್ನು ಬಹಿರಂಗ ನ್ಯಾಯಾಲಯದ ವಿಚಾರಣೆಯಿಂದ ಹೊರಗಿಡಲು ಸಾಧ್ಯವಿದ್ದಷ್ಟು ಪ್ರಯತ್ನಿಸಬೇಕು ಮತ್ತು ಒಂದು ವೇಳೆ ಅಂತಹ ಜಗಳಗಳು ನ್ಯಾಯಾಲಯಕ್ಕೆ ಬಂದರೂ ಅವುಗಳ ಬಗ್ಗೆ ವಿಚಾರಣೆ ಮತ್ತು ತೀರ್ಮಾನ ಮಾಡುವ ಮೊದಲು ನ್ಯಾಯಾಧೀಶರು ಆ ಸಮಸ್ಯೆಯನ್ನು ಬಗೆಹರಿಸುವಲ್ಲಿ ಉಭಯ ಕುಟುಂಬಗಳ ಹೊಣೆಗಾರ ವ್ಯಕ್ತಿಗಳಿಂದ ನೆರವು ಪಡೆಯಬೇಕು ಎಂಬುದು ಆ ತತ್ವ. ಈ ಸಲಹೆಯನ್ನು ಸಾಮಾಜಿಕ ಜೀವನದ ಮಟ್ಟಿಗೆ ಒಂದು ಅನುಗ್ರಹವೆಂದು ಪರಿಗಣಿಸಬೇಕು.

## 9. ನ್ಯೂನತೆಯ ನಿಮಿತ್ತ ಬೇರ್ಪಡೆಯ ಹಕ್ಕು

ದಂಪತಿಗಳಲ್ಲಿ ಏನಾದರೂ ಶಾರೀರಿಕ ನ್ಯೂನತೆ ಇದ್ದರೆ ಏನು ಮಾಡಬೇಕೆಂಬ ವಿಷಯದಲ್ಲಿ ಕರ್ಮಶಾಸ್ತ್ರ ಪಂಡಿತರ ಮಧ್ಯೆ ಬಹಳಷ್ಟು ಭಿನ್ನಾಭಿಪ್ರಾಯಗಳಿವೆ. ಒಂದು ವಿಭಾಗದವರ ಅಭಿಪ್ರಾಯ ಪ್ರಕಾರ ಪತ್ನಿ ಅಥವಾ ಪತಿಯಲ್ಲಿ ಏನಾದರೂ ನ್ಯೂನತೆ ಇದ್ದರೆ ಆ ಕಾರಣದಿಂದ ಅವರಿಗೆ ಬೇರ್ಪಡೆಯ ಹಕ್ಕು* ಇರುವುದಿಲ್ಲ. 'ದುರ್ರೆ ಮುಖ್ತಾರ್'ನಲ್ಲಿ ಈ ರೀತಿ ಇದೆ: "ಪತಿ-ಪತ್ನಿಯರ ಪೈಕಿ ಯಾರಿಗೂ ಇನ್ನೊಬ್ಬರ ನ್ಯೂನತೆಯ ಕಾರಣ ವಿವಾಹ ಅಸಿಂಧುಗೊಳಿಸುವ ಅಧಿಕಾರವಿರುವುದಿಲ್ಲ. ಆ ನ್ಯೂನತೆ ಎಷ್ಟೇ ತೀವ್ರ ಸ್ವರೂಪದ್ದಾಗಿದ್ದರೂ ಸರಿಯೇ. ಉದಾ: ಚಿತ್ರಭ್ರಮಣೆ, ಕುಷ್ಟ, ತೊನ್ನು, ಯೋನಿಯಲ್ಲಿ ಮಾಂಸಪೇಶಿ ಬೆಳೆಯುವ ಹಾಗೂ ಗಡ್ಡೆ ಬೆಳೆಯುವಂತಹ ರೋಗ ಇತ್ಯಾದಿ." ಸಹಾಬಿಗಳ ಪೈಕಿ ಹ. ಅಲೀ ಮತ್ತು ಇಬ್ನು ಮಸ್‌ಊದ್, ಮುಜ್ತಹಿದ್‌ಗಳಾದ ಇಮಾಮರ ಪೈಕಿ ಅತಾ, ನಖಈ, ಉಮರ್ ಬಿನ್ ಅಬ್ದುಲ್ ಅಝೀಝ್, ಇಬ್ನು ಅಬೀ ಲೈಲಾ, ಔಝಾಈ, ಸೌರಿ, ಅಬೂ ಹನೀಫಾ ಮತ್ತು ಅಬೂ ಯೂಸುಫ್(ರ)ರವರ ಅಭಿಪ್ರಾಯ ಇದುವೇ ಆಗಿದೆ.

ಇನ್ನೊಂದು ವಿಭಾಗದವರ ಅಭಿಪ್ರಾಯ ಪ್ರಕಾರ ನ್ಯೂನತೆಯು ಪತಿ-ಪತ್ನಿಯರ ಪರಸ್ಪರ ವೈವಾಹಿಕ ಸಂಪರ್ಕದಲ್ಲಿ ತಡೆಯುಂಟು ಮಾಡುವಂತಹ ನ್ಯೂನತೆ ಆಗಿದ್ದರೆ ಪತಿ-ಪತ್ನಿಯರಿಬ್ಬರಿಗೂ ಬೇರ್ಪಡುವ ಹಕ್ಕು ಇರುತ್ತದೆ. ಉದಾ: ಚಿತ್ತಭ್ರಮಣೆ, ಕುಷ್ಟ, ತೊನ್ನು, ಬಾಯಿಯ ದುರ್ವಾಸನೆ, ಲೈಂಗಿಕ ರೋಗಗಳು ಮತ್ತು ಜನನೇಂದ್ರಿಯಗಳಿಗೆ ಸಂಬಂಧಪಟ್ಟ ಸಂಪರ್ಕ ಸಾಧ್ಯವಿಲ್ಲದಂತಹ ರೋಗಗಳು. ಇದು ಇಮಾಮ್ ಮಾಲಿಕ್(ರ) ಅವರ ಮತವಾಗಿದೆ. ಆದ್ದರಿಂದ ಇಬ್ನು ಜೂಝಿಯವರು 'ಅಲ್ ಕವಾನೀನ್' ಎಂಬ ಗ್ರಂಥದಲ್ಲಿ ಮೇಲ್ಕಾಣಿಸಿದ ನ್ಯೂನತೆಗಳ ವಿವರಣೆಯ ಬಳಿಕ ಈ ರೀತಿ ಸ್ಪಷ್ಟಪಡಿಸಿರುವರು; "ಈ ನ್ಯೂನತೆಗಳ ಪೈಕಿ ಯಾವುದಾದರೂ ನ್ಯೂನತೆ ಪತಿ ಅಥವಾ ಪತ್ನಿಯಲ್ಲಿದ್ದರೆ ಅವರಿಬ್ಬರಿಗೂ ಸಹಜೀವನ ಮಾಡುವ ಅಥವಾ ಪರಸ್ಪರರಿಂದ ಬೇರ್ಪಡುವ ಹಕ್ಕು ಇದೆ."

* ಖಿಯಾರೆ ಫಿಸ್ಖ್ ಅರ್ಥಾತ್ ವಿವಾಹವಾದ ಬಳಿಕ ನನಗೆ ಈ ವಿವಾಹ ಸ್ವೀಕಾರಾರ್ಹವಲ್ಲ ಎಂದು ಹೇಳುವ ಹಕ್ಕು.

ಇಮಾಮ್ ಶಾಫಿಈ(ರ) ಅವರ ಅಭಿಪ್ರಾಯದಂತೆ ಚಿತ್ತಭ್ರಮಣ, ಕುಷ್ಠ ಮತ್ತು ತೊನ್ನುಗಳಲ್ಲಿ ಪತಿ-ಪತ್ನಿಯರಿಬ್ಬರಿಗೂ ವಿವಾಹ ಅಸಿಂಧುಗೊಳಿಸುವ ಹಕ್ಕು ಇದೆ. ಆದರೆ ಜನನೇಂದ್ರಿಯಗಳಿಂದ ಕೀವು ಸೋರುತ್ತಿರುವಂತಹ ಕಾಯಿಲೆಗಳಲ್ಲಿ ಉದಾ: ಉಪದಂಶ ರೋಗ(Syphilis) ವಗೈರೆ ಮತ್ತು ಬಾಯಿ ನಾರುವ ರೋಗ ಹಾಗೂ ಕಜ್ಜಿಗಳಲ್ಲಿ ಬೇರ್ಪಡೆಯ ಹಕ್ಕು ಇರುವುದಿಲ್ಲ. ಸಂಸರ್ಗವು ಸಾಧ್ಯವಲ್ಲದ ತರದಲ್ಲಿ ನ್ಯೂನತೆ ಇದ್ದರೆ ಅಥವಾ ಪುರುಷನು ನಪುಂಸಕ ಅಥವಾ ಲಿಂಗರಹಿತನಾಗಿದ್ದರೆ ಇನ್ನೊಂದು ಪಕ್ಷಕ್ಕೆ ವಿವಾಹ ಅಸಿಂಧುಗೊಳಿಸುವ ಹಕ್ಕು ಇರುವುದು.

ಇಮಾಮ್ ಮುಹಮ್ಮದ್(ರ) ಅವರ ಅಭಿಪ್ರಾಯದಂತೆ ಪತಿಗೆ ಪತ್ನಿಯ ಯಾವ ನ್ಯೂನತೆಯ ಕಾರಣದಿಂದಲೂ ವಿವಾಹ ಅಸಿಂಧುಗೊಳಿಸುವ ಅಧಿಕಾರವಿಲ್ಲ. ಆದರೆ ಪತಿಯು ಹುಚ್ಚು, ಕುಷ್ಠ ಮತ್ತು ತೊನ್ನು ರೋಗಗಳಿಗೆ ಸಿಲುಕಿದ್ದರೆ ಪತ್ನಿಗೆ ವಿವಾಹ ಅಸಿಂಧುಗೊಳಿಸುವ ಅಧಿಕಾರವಿದೆ.

ಈ ಎಲ್ಲ ಅಭಿಪ್ರಾಯಗಳ ಪೈಕಿ ಎರಡನೇ ಅಭಿಪ್ರಾಯವು ಪವಿತ್ರ ಕುರ್‌ಆನ್‌ನ ಶಿಕ್ಷಣಗಳಿಗೆ ಹೆಚ್ಚು ನಿಕಟವಾದುದೆಂದು ಭಾಸವಾಗುತ್ತದೆ. ಪವಿತ್ರ ಕುರ್‌ಆನ್‌ನ ಮೇರೆಗೆ ಪತಿ-ಪತ್ನಿಯರ ವೈವಾಹಿಕ ಸಂಬಂಧದಲ್ಲಿ ಎರಡು ವಿಷಯಗಳಿಗೆ ಅತ್ಯಧಿಕ ಪ್ರಾಮುಖ್ಯತೆ ಇದೆ. ಒಂದನೆಯದು ಚಾರಿತ್ರ್ಯದ ಸಂರಕ್ಷಣೆ, ಎರಡನೆಯದು ಪರಸ್ಪರ ಪ್ರೀತಿ ವಾತ್ಸಲ್ಯ ಮತ್ತು ಕರುಣೆ. ದಂಪತಿಯರ ಪೈಕಿ ಒಬ್ಬರಲ್ಲಿ ಅವರು ಪರಸ್ಪರರನ್ನು ತಿರಸ್ಕಾರ ಭಾವದಿಂದ ನೋಡಲು ನಿರ್ಬಂಧಿಸುವಂತಹ ನ್ಯೂನತೆಗಳಿದ್ದರೆ ಅಥವಾ ಅವರು ತಮ್ಮ ಜೀವನ ಸಂಗಾತಿಯ ನೈಸರ್ಗಿಕ ಬಯಕೆಯನ್ನು ಈಡೇರಿಸಲು ಅಶಕ್ತರಾಗಿದ್ದರೆ ಈ ಎರಡೂ ಉದ್ದೇಶಗಳು ಈಡೇರುವುದಿಲ್ಲ. ಮಾತ್ರವಲ್ಲ ನಾವು ಈ ಹಿಂದೆ ವಿವರಿಸಿರುವಂತೆ ಇಸ್ಲಾಮೀ ದಾಂಪತ್ಯ ನಿಯಮದ ಒಂದು ಮೂಲ ತತ್ವವೇನೆಂದರೆ ವೈವಾಹಿಕ ಸಂಬಂಧವು ದಂಪತಿಯರ ಪಾಲಿಗೆ ಕಂಟಕಪ್ರಾಯವಾಗಿ ಹಾಗೂ ದೇವ ಸೀಮೋಲ್ಲಂಘನೆಗೆ ಪ್ರೇರೇಪಿಸುವ ಕಾರಣವಾಗಿ ಮಾರ್ಪಡಬಾರದು. ಪ್ರಸ್ತುತ ನ್ಯೂನತೆಗಳಿರುವ ಸ್ಥಿತಿಯಲ್ಲಿ ಆಯ್ಕೆಯ ಹಕ್ಕು ನೀಡದಿದ್ದರೆ ಈ ತತ್ವವೂ ಉಲ್ಲಂಘಿಸಲ್ಪಡುತ್ತದೆ. ಮೇಲೆ ವಿವರಿಸಲಾಗಿರುವ ಕಾಯಿಲೆಗಳೆಲ್ಲಾ ದಾಂಪತ್ಯ ಸಂಬಂಧಕ್ಕೆ ಧಕ್ಕೆ ಉಂಟುಮಾಡುವಂತಹದ್ದಾಗಿವೆ. ಅವುಗಳ ಕಾರಣದಿಂದ ದಂಪತಿಗಳಲ್ಲಿ ಒಬ್ಬರು ಮತ್ತೊಬ್ಬರ ಬಗ್ಗೆ ತಿರಸ್ಕಾರ ಭಾವದಿಂದಿರುವ ಅಥವಾ ತಮ್ಮ ನೈಸರ್ಗಿಕ ಬಯಕೆ ಈಡೇರದ ಕಾರಣ ದೇವ ಸೀಮೆಯನ್ನು ಉಲ್ಲಂಘಿಸುವ ಭಯವೂ ಇದೆ. ಆದ್ದರಿಂದ ಈ ಎಲ್ಲ ನ್ಯೂನತೆಗಳಲ್ಲಿಯೂ ದಂಪತಿಗಳಿಗೆ ಆಯ್ಕೆಯ ಹಕ್ಕನ್ನು ನೀಡುವುದು ಅವಶ್ಯಕವಾಗಿದೆ.

ಇದು ದಂಪತಿಗಳಿಗೆ ವಿವಾಹಕ್ಕೆ ಮೊದಲು ಪರಸ್ಪರರ ಸ್ಥಿತಿಯ ಬಗ್ಗೆ ಅರಿವಿಲ್ಲದೆ ಇದ್ದು ವಿವಾಹವಾದ ಬಳಿಕ ವಿಷಯ ತಿಳಿದ ಕೂಡಲೇ ಅವರು ಆ ವಿವಾಹದ ಬಗ್ಗೆ ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸಿದಾಗ ಉದ್ಭವಿಸುವಂತಹ ಸನ್ನಿವೇಶದ ಕುರಿತಾಯಿತು. ಇನ್ನು ಒಂದು ವೇಳೆ ವಿವಾಹಕ್ಕೆ ಮುಂಚೆಯೇ ದಂಪತಿಗಳಿಗೆ ಪರಸ್ಪರ ಸ್ಥಿತಿಯು ತಿಳಿದಿದ್ದರೆ ಹಾಗೂ ಆ ತಿಳುವಳಿಕೆಯೊಂದಿಗೇ ಅವರು ವಿವಾಹಕ್ಕೆ ಸಮ್ಮತಿಸಿದ್ದರೆ ಅಥವಾ ವಿವಾಹವಾದ ಬಳಿಕ ಆ

ನ್ಯೂನತೆಯ ಬಗ್ಗೆ ತಿಳಿದುಬಂದರೂ ಅವರಲ್ಲೊಬ್ಬರು ತಮ್ಮ ಆಯ್ಕೆಯ ಹಕ್ಕನ್ನು ಉಪಯೋಗಿಸದಿದ್ದರೆ ಅಥವಾ ನ್ಯೂನತೆಯು ವಿವಾಹದ ಅನಂತರವೇ ಹುಟ್ಟಿಕೊಂಡಿದ್ದರೆ ಅಂತಹ ಎಲ್ಲ ಸನ್ನಿವೇಶಗಳಲ್ಲೂ ಪುರುಷನ ಬಳಿಯಂತೂ ಯಾವಾಗಲೂ ಉಪಯೋಗಿಸಲು ಸಾಧ್ಯವಾಗುವಂತಹ ಒಂದು ಅಸ್ತ್ರ ಇದ್ದೇ ಇರುತ್ತದೆ. ಅದುವೇ ತಲಾಕ್. ಅದಲ್ಲದೆ ಇನ್ನೊಂದು ಅಸ್ತ್ರವೂ ಅವನ ಬಳಿ ಇರುತ್ತದೆ. ಅದು ದ್ವಿತೀಯ ವಿವಾಹ. ಆದರೆ ಸ್ತ್ರೀಯರಿಗೆ ಕೆಲವು ಸಂದರ್ಭಗಳಲ್ಲಿ ಕರ್ಮಶಾಸ್ತ್ರಜ್ಞರು ಯಾವುದೇ ಪರಿಹಾರ ಮಾರ್ಗವನ್ನು ಸೂಚಿಸಿಲ್ಲ. ಇನ್ನು ಕೆಲವು ಸಂದರ್ಭಗಳಲ್ಲಿ ಕೆಲವು ಕರ್ಮಶಾಸ್ತ್ರ ಪಂಡಿತರು ಪರಿಹಾರೋಪಾಯ ಸೂಚಿಸಿದರೆ, ಇನ್ನು ಕೆಲವರು ಸೂಚಿಸಿಲ್ಲ. ಇಲ್ಲಿ ನಾವು ಈ ವಿಷಯದಲ್ಲಿ ಇರುವ ವಿಧಿಗಳನ್ನು ಪ್ರತ್ಯಪ್ರತ್ಯೇಕವಾಗಿ ಪ್ರಸ್ತಾಪಿಸಿ ಅವುಗಳನ್ನು ವಿವರಿಸುತ್ತೇವೆ.

## 10. ನಪುಂಸಕತ್ವ ಮತ್ತು ಲಿಂಗ ಹೀನತೆ

ಒಂದು ವೇಳೆ ಪತಿಯು ಲಿಂಗಹೀನನಾಗಿದ್ದರೆ ಪತ್ನಿಗೆ ವಿಚ್ಛೇದನ ಕೇಳಿ ಮೊಕದ್ದಮೆ ಹೂಡುವ ಹಕ್ಕಿದೆ ಮತ್ತು ಪರೀಕ್ಷೆಯ ಬಳಿಕ ಆಕೆಯ ವಾದವು ಸತ್ಯವೆಂದು ಸಾಬೀತುಗೊಂಡರೆ ತಕ್ಷಣ ಅವರ ಮಧ್ಯೆ ವಿವಾಹ ವಿಚ್ಛೇದನ ಮಾಡಿಬಿಡಬೇಕೆಂಬ ಬಗ್ಗೆ ಬಹುತೇಕ ಎಲ್ಲ ಕರ್ಮಶಾಸ್ತ್ರಜ್ಞರ ಏಕಾಭಿಪ್ರಾಯವಿದೆ.

ಒಂದು ವೇಳೆ ಪತಿಯು ನಪುಂಸಕನಾಗಿದ್ದರೆ ಹಾಗೂ ಪತ್ನಿಯು ವಿಚ್ಛೇದನ ಬಯಸಿದರೆ ಹಝ್ರತ್ ಉಮರ್(ರ) ಅವರ ಒಂದು ತೀರ್ಪಿನ ಪ್ರಕಾರ ಆತನಿಗೆ ಒಂದು ವರ್ಷದ ಮಟ್ಟಿಗೆ ಚಿಕಿತ್ಸೆಗಾಗಿ ಕಾಲಾವಕಾಶ ನೀಡಲಾಗುವುದು. ಈ ಅವಧಿ ಕಳೆದು ಹೋದ ಬಳಿಕವೂ ಆತನ ನಪುಂಸಕತ್ವ ನಿವಾರಣೆಯಾಗದಿದ್ದರೆ ಪತಿ-ಪತ್ನಿಯರ ಮಧ್ಯೆ ವಿವಾಹ ವಿಚ್ಛೇದನ ಮಾಡಿ ಬಿಡಲಾಗುವುದು. ಆದರೆ ಅದಕ್ಕೆ ಕರ್ಮಶಾಸ್ತ್ರಜ್ಞರು ಕೆಲವು ಶರ್ತಗಳನ್ನು ವಿಧಿಸಿದ್ದಾರೆ:

1. ಒಂದು ವೇಳೆ ಮಹಿಳೆಗೆ ಆತನ ನಪುಂಸಕತ್ವದ ಬಗ್ಗೆ ಮದುವೆಗೆ ಮೊದಲು ತಿಳಿದಿರಲಿಲ್ಲವೆಂದಾದರೆ ಮಾತ್ರ ಈ ನಿಯಮವು ಆಕೆಗೆ ಅನ್ವಯವಾಗುತ್ತದೆ. ಆದರೆ ವಿಷಯವು ಆಕೆಗೆ ಮೊದಲೇ ತಿಳಿದಿದ್ದೂ ಆಕೆ ಸ್ವ-ಇಚ್ಛೆಯಿಂದ ಆತನೊಂದಿಗೆ ವಿವಾಹಕ್ಕೆ ಒಪ್ಪಿಗೆ ನೀಡಿದ್ದರೆ ಆಕೆಗೆ ವಿಚ್ಛೇದನ ದಾವೆ ಹೂಡುವ ಹಕ್ಕು ಇರುವುದಿಲ್ಲ.

2. ಮಹಿಳೆಗೆ ಮದುವೆಯ ಮೊದಲು ಆ ಬಗ್ಗೆ ತಿಳುವಳಿಕೆ ಇರಲಿಲ್ಲ. ಆದರೆ ಮದುವೆಯ ಬಳಿಕ ಆ ವಿಷಯ ತಿಳಿದ ಬಳಿಕವೂ ಆಕೆ ಆತನೊಂದಿಗೆ ದಾಂಪತ್ಯ ಜೀವನ ಸಾಗಿಸುವುದಕ್ಕೆ ಯಾವುದಾದರೂ ರೀತಿಯಲ್ಲಿ ತನ್ನ ಒಪ್ಪಿಗೆಯನ್ನು ಪ್ರಕಟಿಸಿದ್ದರೆ ಆ ಬಳಿಕ ಆಕೆಗೆ ವಿಚ್ಛೇದನದ ದಾವೆ ಹೂಡುವ ಹಕ್ಕು ಇರುವುದಿಲ್ಲ.

3. ಪತಿಯು ಒಮ್ಮೆಯೂ ಸಂಸರ್ಗ ಮಾಡಲು ಶಕ್ತನಾಗಿರದಿದ್ದರೆ ಮಾತ್ರ ಅವರೊಳಗೆ ವಿಚ್ಛೇದನ ಮಾಡಲಾಗುವುದು. ಒಮ್ಮೆಯಾದರೂ ಪತಿಯಾದವನು ಸಂಸರ್ಗ ನಡೆಸಿದ್ದರೆ (ಅದು ಅಪೂರ್ಣವಾಗಿದ್ದರೂ ಸರಿಯೆ) ಪತ್ನಿಗೆ ವಿಚ್ಛೇದನ ದಾವೆ ಹೂಡುವ ಹಕ್ಕು ಇರುವುದಿಲ್ಲ.

ಈ ಶರ್ತಗಳಿಗೆ ಪವಿತ್ರ ಕುರ್‌ಆನ್‌ನಲ್ಲಾಗಲೀ ಹದೀಸ್‌ನಲ್ಲಾಗಲೀ ಯಾವುದೇ ಆಧಾರವಿಲ್ಲ. ಆದುದರಿಂದ ನಾವು ಈ ಶರ್ತಗಳನ್ನು ಸರಿಯೆಂದು ಪರಿಗಣಿಸುವುದಿಲ್ಲ. ಒಂದು ವೇಳೆ ಓರ್ವ ಮಹಿಳೆಗೆ ಒಬ್ಬನು ನಪುಂಸಕನೆಂದು ತಿಳಿದಿದ್ದೂ ತನ್ನ ತಿಳಿಗೇಡಿತನದಿಂದ ಆಕೆ ಆತನೊಂದಿಗೆ ವಿವಾಹಕ್ಕೆ ಒಪ್ಪಿಗೆ ನೀಡಿದ್ದರೆ ಆಕೆಯನ್ನು ಜೀವನ ಪರ್ಯಂತ ಓರ್ವ ನಪುಂಸಕನೊಡನೆ ಬಾಳಬೇಕೆಂದು ಒತ್ತಾಯಪಡಿಸುವುದು ತರ್ಕಬದ್ಧವೂ ಅಲ್ಲ, ಸಮಂಜಸವೂ ಅಲ್ಲ. ಅದರಿಂದಾಗುವ ದುಷ್ಪರಿಣಾಮಗಳು ಬಹಳ ಸ್ಪಷ್ಟವಿದೆ. ಅವುಗಳನ್ನು ವಿವರಿಸುವ ಅಗತ್ಯವೇ ಇಲ್ಲ. ಇಂಥ ತಿಳಿಗೇಡಿ ಮಹಿಳೆಗೆ ಆಕೆಯ ಮಹ್‌ರ್‌ನ್ನು ಕಸಿದುಕೊಂಡು ವಿಚ್ಛೇದನ ಮಾಡಿಬಿಡುವ ಶಿಕ್ಷೆಯು ಧಾರಾಳವಾಗಿದೆ.

ಒಂದು ವೇಳೆ ವಿವಾಹದ ನಂತರ ಪತಿಯು ನಪುಂಸಕನೆಂಬುದು ತಿಳಿದು ಬಂದಿದ್ದು ಮೊದಮೊದಲು ಆಕೆ ಆತನೊಂದಿಗೆ ವಾಸಿಸಲು ತನ್ನ ಸಮ್ಮತಿ ಸೂಚಿಸಿದ್ದರೆ ಅದು ಆಕೆಯನ್ನು ಜೀವನ ಪರ್ಯಂತ ಸಂಕಷ್ಟದ ಬಾಳುವೆ ನಡೆಸಲು ನಿರ್ಬಂಧಿಸುವಷ್ಟು ಘೋರ ಅಪರಾಧವೇನಲ್ಲ. ಓರ್ವ ನಪುಂಸಕನೊಂದಿಗೆ ಜೀವನ ನಡೆಸುವುದು ಎಷ್ಟು ಕಷ್ಟಕರವೆಂಬುದು ಓರ್ವ ಅನನುಭವಿ ಮದುಮಗಳಿಗೆ ತಿಳಿದಿರುವುದಿಲ್ಲ. ಆಕೆಯು ತನ್ನ ಸೌಜನ್ಯದ ಕಾರಣ ನಪುಂಸಕನಾದರೇನಂತೆ ತಾನು ಆತನೊಂದಿಗೆ ಬಾಳುವೆ ನಡೆಸುವೆನು ಎಂದು ಭಾವಿಸಿರಬಹುದು. ಆದರೆ ಆ ಬಳಿಕ ಆಕೆಗೆ ಹಿಂದೆ ತಾನು ಊಹಿಸಿಲ್ಲದಂತಹ ಸಂಕಷ್ಟ ಹಾಗೂ ಮಾನಸಿಕ ವೇದನೆಯ ಅನುಭವವಾಗಿರಬಹುದು. ತನ್ನ ಆರೋಗ್ಯ ಕೆಡುವ ಅಥವಾ ಅನೈತಿಕ ಸಂಬಂಧ ಬೆಳೆಸಲು ನಿರ್ಬಂಧಿತಳಾಗಬಹುದೆಂಬ ಭಯದಿಂದ ಚಿಂತಿತಳಾಗಿ ಆಕೆ ವಿಚ್ಛೇದನವನ್ನು ಬಯಸಿರಬಹುದು. ಇಂತಹ ಸಂದರ್ಭದಲ್ಲಿ ಆಕೆಯ ಪ್ರಥಮ ಒಪ್ಪಿಗೆಯನ್ನು ಆಧಾರವಾಗಿಟ್ಟುಕೊಂಡು ಆಕೆಯ ಬಾಯಿ ಮುಚ್ಚಿಸುವುದು ನ್ಯಾಯವೇ? ಅಥವಾ ಆಕೆಯೊಡನೆ, ನೀನು ಮೊದಲು ಮಾಡಿದ ತಪ್ಪಿನ ಸಲುವಾಗಿ ಈಗ ಜೀವನದುದ್ದಕ್ಕೂ ಒದ್ದಾಡಿ ಸಾಯುವುದೇ ನಿನಗಿರುವ ಶಿಕ್ಷೆ ಅಥವಾ ನೀನು ಅನೈತಿಕ ಸಂಬಂಧ ಬೆಳೆಸಿ ನಿನ್ನ ದೇಹದ ತೀಟೆಯನ್ನು ತೀರಿಸಿಕೋ ಎಂದು ಹೇಳುವುದು ಧರ್ಮಸಮ್ಮತವೇ? ನಮ್ಮ ತಿಳುವಳಿಕೆಯ ಮಟ್ಟಿಗೆ ಇದು ಪವಿತ್ರ ಕುರ್‌ಆನಿನ ಬೋಧನೆಗಳಿಗೆ ತೀರಾ ವಿರುದ್ಧವಾಗಿದೆ. ಮಾತ್ರವಲ್ಲದೆ ಇದರಿಂದ ಉಂಟಾಗುವ ಕೆಡುಕುಗಳು ಕೇವಲ ಆ ಮಹಿಳೆಗೆ ಮಾತ್ರ ಸೀಮಿತವಾಗಿರದೆ ಅದು ಸಮಾಜಕ್ಕೆ ವ್ಯಾಪಿಸುವ ಮತ್ತು ತಲೆತಲಾಂತರಗಳವರೆಗೆ ಮುಂದುವರಿಯುವ ಸಾಧ್ಯತೆಯೂ ಇದೆ. ಇಷ್ಟು ದೊಡ್ಡ ನಷ್ಟವನ್ನು ಸಹಿಸುವುದಕ್ಕಿಂತ ಒಬ್ಬ ವ್ಯಕ್ತಿಗೆ ಆಗುವ ನಷ್ಟವನ್ನು ಸಹಿಸುವುದೇ ಉತ್ತಮ. ವಾಸ್ತವದಲ್ಲಿ ವಿಚ್ಛೇದನದಿಂದ ಆತನಿಗೂ ನಷ್ಟವೇನೂ ಆಗುವುದಿಲ್ಲ. ಆ ತಪ್ಪಿಗಾಗಿ ಆ ಮಹಿಳೆಗೆ ಹೆಚ್ಚೆಂದರೆ ಅವಳ ಮಹ್‌ರ್‌ನ ಒಂದಂಶವನ್ನು ಅಥವಾ ಪೂರ್ಣ ಮಹ್‌ರ್‌ನ್ನು ನೀಡದಿರುವ ಶಿಕ್ಷೆಯನ್ನು ಮಾತ್ರ ನೀಡಬಹುದು. ಆದರೆ ಇದು ಕೂಡಾ ನನ್ನ ಮಟ್ಟಿಗೆ ಆಕೆಯ ಮೇಲೆ ಅತಿರೇಕವೆನಿಸುವುದು. ಏಕೆಂದರೆ ನಪುಂಸಕನಾಗಿದ್ದೂ ಮದುವೆ ಮಾಡಿಕೊಂಡವನೇ ಇಲ್ಲಿ ನಿಜವಾದ ಅಪರಾಧಿ.

ಮೂರನೇ ಶರ್ತವೂ ನಮ್ಮ ದೃಷ್ಟಿಯಲ್ಲಿ ಬಹಳ ಕಠಿಣವಾದುದಾಗಿದೆ. ಶರೀಅತ್ ಯಾವ ಉದ್ದೇಶಕ್ಕಾಗಿ ನಿಕಾಹ್ ಮಾಡಬೇಕೆಂದು ಹೇಳಿದೆಯೋ ಆ ಉದ್ದೇಶ ಅಂತಹ ದಾಂಪತ್ಯ

ಸಂಬಂಧದಿಂದ ಪೂರ್ತಿಯಾಗುವುದಿಲ್ಲ. ಇಸ್ಲಾಮಿನ ಕಾನೂನಿರುವುದು ಯಾವುದೇ ಸ್ವರ್ಗಲೋಕದ ಸೃಷ್ಟಿಗಳಿಗಲ್ಲ. ಅದಿರುವುದು ಸಾಮಾನ್ಯ ಮಾನವನಿಗಾಗಿ. ಕೇವಲ ಒಂದೆರಡು ಸಲ ಅಥವಾ ಮೂರ್ನಾಲ್ಕು ಸಲ ಮಾತ್ರ ಪತಿಯ ಸಂಸರ್ಗವನ್ನು ಪಡೆದು ಅದರಿಂದಲೇ ಸಂತೃಪ್ತರಾಗಿ ಆ ಬಳಿಕ ಜೀವನದಾದ್ಯಂತ ಅದರಿಂದ ವಂಚಿತರಾಗಿ ನಕ್ಕು ನಲಿಯುತ್ತಾ ಜೀವನ ಸಾಗಿಸುವುದು ಹಾಗೂ ತಮ್ಮ ಮಾನವನ್ನು ಎಲ್ಲ ವಿಪತ್ತುಗಳಿಂದಲೂ ಕಾಪಾಡುವುದು ಓರ್ವ ಸಾಮಾನ್ಯ ಮಹಿಳೆಗೆ ತೀರಾ ಅಸಾಧ್ಯವಲ್ಲದಿದ್ದರೂ ಅತ್ಯಂತ ಕಷ್ಟಕರ ಕಾರ್ಯವೆಂಬುದರಲ್ಲಿ ಸಂದೇಹವೇ ಇಲ್ಲ. ಒಂದು ವೇಳೆ ಅರ್ಧಾಂಶ ಮಹಿಳೆಯರು ಇದಕ್ಕೆ ಶಕ್ತರೆಂದುಕೊಂಡರೂ ಆತ್ಮ ನಿಯಂತ್ರಣ ಮತ್ತು ನೈತಿಕತೆಯ ಮಟ್ಟ ಅಷ್ಟು ಉನ್ನತವಲ್ಲದ ಉಳಿದ ಅರ್ಧಾಂಶ ಮಹಿಳೆಯರ ಗತಿಯೇನು? ಅಂತಹವರು ಅಶ್ಲೀಲ ಕಾರ್ಯಗಳಲ್ಲಿ ತೊಡಗುವ ಮತ್ತು ಅದರಿಂದ ಸಮಾಜದಲ್ಲಿ ತರತರದ ಕೆಡುಕುಗಳು ಹರಡುವ ಸಂಭವವಿಲ್ಲವೇ? ಒಂದು ವೇಳೆ ಹಾಗೆ ಆದರೆ, ಅವರಿಗೆ ಧರ್ಮಸಮ್ಮತ ರೂಪದಲ್ಲಿ ತಮ್ಮ ದೇಹೇಚ್ಛೆಗಳನ್ನು ತೀರಿಸುವ ಅವಕಾಶ ಕಲ್ಪಿಸದೆ ಅವರನ್ನು ಧರ್ಮಬಾಹಿರ ಮಾರ್ಗವನ್ನವಲಂಬಿಸಲು ನಿರ್ಬಂಧಿಸಿದ ಕಾನೂನೇ ಇದಕ್ಕೆ ಹೊಣೆಯಾಗುವುದಿಲ್ಲವೇ? ಆದ್ದರಿಂದ ನಮ್ಮ ಅಭಿಪ್ರಾಯವೇನೆಂದರೆ ನಪುಂಸಕತೆಯ ಎಲ್ಲ ಪ್ರಕರಣಗಳಲ್ಲಿಯೂ ಮಹಿಳೆಗೆ ನ್ಯಾಯಾಲಯಕ್ಕೆ ಹೋಗುವ ಅಧಿಕಾರ ಇರಬೇಕು. ಆ ನಪುಂಸಕತೆ ವಿವಾಹಪೂರ್ವವೋ ವಿವಾಹೋತ್ತರವೋ ಎಂಬುದು ಇಲ್ಲಿ ಗೌಣ. ಒಂದು ವರ್ಷದವರೆಗೆ ಅದರ ಚಿಕಿತ್ಸೆಗಾಗಿ ಅವಕಾಶ ನೀಡಿದ ಬಳಿಕವೂ ನಪುಂಸಕತೆ ನಿವಾರಣೆಯಾಗದಿದ್ದರೆ ಅವರ ಮಧ್ಯೆ ವಿವಾಹ ವಿಚ್ಛೇದನ ಏರ್ಪಡಿಸಲೇಬೇಕು.

ಒಂದು ವರ್ಷ ಚಿಕಿತ್ಸೆ ನಡೆಸಿದ ಬಳಿಕ ಪತಿಯು ಒಮ್ಮೆಯಾದರೂ ಸಂಸರ್ಗ ಮಾಡಿದರೆ (ಅದು ಅಪೂರ್ಣವಾಗಿದ್ದರೂ ಸರಿಯೆ) ಮಹಿಳೆಯ ವಿಚ್ಛೇದನ ಹಕ್ಕು ಶಾಶ್ವತವಾಗಿ ರದ್ದುಗೊಳ್ಳುತ್ತದೆ ಎಂದು ಕರ್ಮಶಾಸ್ತ್ರಜ್ಞರು ಬರೆದಿರುವರು. ಇಲ್ಲಿ ಮತ್ತೆ ಅದೇ ಅತಿರೇಕ ಕಂಡುಬರುತ್ತದೆ. ಈ ವಿಷಯದಲ್ಲಿ ನುರಿತ ವೈದ್ಯರ ಅಭಿಪ್ರಾಯವನ್ನು ಪರಿಗಣಿಸುವುದೇ ಹೆಚ್ಚು ಸೂಕ್ತ. ಚಿಕಿತ್ಸೆಯ ಬಳಿಕವೂ ಆತನು ಲೈಂಗಿಕ ಕ್ರಿಯೆಗೆ ಪೂರ್ಣ ಸಮರ್ಥನಲ್ಲವೆಂದು ವೈದ್ಯರು ಅಭಿಪ್ರಾಯ ಪಟ್ಟರೆ ದಂಪತಿಗಳ ಮಧ್ಯೆ ವಿಚ್ಛೇದನ ಮಾಡಿಬಿಡಬೇಕು.

ಲಿಂಗಹೀನತೆಯ ವಿಷಯದಲ್ಲೂ ಕರ್ಮಶಾಸ್ತ್ರಜ್ಞರು ನಪುಂಸಕತೆಯ ಬಗೆಗಿರುವಂತಹ ವಿಧಿಯನ್ನೇ ವಿಧಿಸಿರುವರು. ಅದಕ್ಕೂ ಚಿಕಿತ್ಸೆಯ ಸಲುವಾಗಿ ಒಂದು ವರ್ಷದ ಅವಧಿ ನೀಡಬೇಕೆಂದು ಅವರ ಅಭಿಪ್ರಾಯ. ಚಿಕಿತ್ಸೆಯ ಬಳಿಕ ಆತನು ಲೈಂಗಿಕ ಕ್ರಿಯೆಗೆ ಶಕ್ತನಾಗಬಹುದೆಂಬ ಸಾಧ್ಯತೆ ಇರುವುದೇ ಇದಕ್ಕೆ ಕಾರಣವೆಂದು ಅವರು ಹೇಳುತ್ತಾರೆ. ಆದರೆ ವೈದ್ಯಕೀಯ ಅನ್ವೇಷಣೆಗಳಿಂದ ಲಿಂಗಹೀನತೆಗೂ ನಪುಂಸಕತೆಗೂ ಯಾವುದೇ ವ್ಯತ್ಯಾಸವಿಲ್ಲವೆಂದು ಸಾಬೀತಾಗಿದೆ. ಪುರುಷನು ಲಿಂಗಹೀನನಾಗಿದ್ದರೂ ವೃಷಣ ಹೀನನಾಗಿದ್ದರೂ ಲೈಂಗಿಕ ಕ್ರಿಯೆಗೆ ಅನರ್ಹನೆಂಬುದು ವೈದ್ಯರ ಅಭಿಮತ. ಯಾವುದೇ ಚಿಕಿತ್ಸೆಯು ಆತನಿಗೆ ಆ ಶಕ್ತಿಯನ್ನು ಮರಳಿಕೊಡಲಾರದು. ಆದ್ದರಿಂದ ನಪುಂಸಕತೆ ಮತ್ತು ಲಿಂಗಹೀನತೆಗೆ ಒಂದೇ ಕಾನೂನು ಇರಬೇಕು.

# 11. ಮತಿಭ್ರಮಣೆ

ಹ. ಉಮರ್(ರ)ರವರ ತೀರ್ಪಿನ ಪ್ರಕಾರ ಹುಚ್ಚನಿಗೆ ಅವನ ಚಿಕಿತ್ಸೆಗಾಗಿ ಒಂದು ವರ್ಷದ ಕಾಲಾವಧಿಯನ್ನು ನೀಡಲಾಗುವುದು. ಈ ಅವಧಿಯಲ್ಲಿ ಅವನ ಕಾಯಿಲೆ ಗುಣಮುಖವಾಗದಿದ್ದರೆ ಪತ್ನಿಯನ್ನು ಅವನಿಂದ ವಿಚ್ಛೇದಿಸಬೇಕು. ಕರ್ಮಶಾಸ್ತ್ರಜ್ಞರು ಇದೇ ತೀರ್ಪನ್ನು ಅಂಗೀಕರಿಸಿದ್ದಾರೆ. ವಿಭಿನ್ನ ರೂಪದಲ್ಲಿ ಈ ತೀರ್ಪನ್ನು ವಿಶದಾಂಶಗಳಲ್ಲಿ ಜಾರಿಗೊಳಿಸಿದ್ದಾರೆ.

ಇಮಾಮ್ ಅಬೂ ಹನೀಫಾ(ರ)ರವರ ಪ್ರಕಾರ ಈ ವಿಧಿಯು ಮದುವೆಗೆ ಮೊದಲೇ ಹುಚ್ಚನಾಗಿದ್ದು ಮದುವೆಯ ಬಳಿಕ ಒಮ್ಮೆಯೂ ಪತ್ನಿಯ ಜೊತೆ ಸಂಸರ್ಗಕ್ಕೆ ಶಕ್ತನಾಗದವನ ಕುರಿತಾಗಿದೆ. ಅವನನ್ನು ನಪುಂಸಕನಂತೆಯೇ ಪರಿಗಣಿಸಲಾಗಿದೆ. ಆದುದರಿಂದಲೇ ಅವನಿಗೆ ಚಿಕಿತ್ಸೆಯ ಸಲುವಾಗಿ ಒಂದು ವರ್ಷದ ಅವಧಿಯನ್ನು ನೀಡಲಾಗಿದೆ.

ಇಮಾಮ್ ಮುಹಮ್ಮದ್(ರ)ರವರ ಅಭಿಪ್ರಾಯ ಪ್ರಕಾರ ಮತಿಭ್ರಮಣೆ ತಾತ್ಕಾಲಿಕವಾಗಿದ್ದರೆ ಆತನಿಗೆ ಚಿಕಿತ್ಸೆಗಾಗಿ ಒಂದು ವರ್ಷದ ಅವಧಿಯನ್ನು ನೀಡಲಾಗುವುದು. ಆದರೆ ಅದು ಶಾಶ್ವತವಾಗಿದ್ದರೆ ಆತನಿಗೂ ನಪುಂಸಕನ ಕುರಿತಾದ ವಿಧಿಯೇ ಅನ್ವಯಿಸುತ್ತದೆ. ಅವರ ನಡುವೆ ತಡಮಾಡದೇ ವಿಚ್ಛೇದನ ಮಾಡಿಸಬೇಕು.

ಇಮಾಮ್ ಮಾಲಿಕ್(ರ)ರವರ ಅಭಿಮತವೇನೆಂದರೆ ಮತಿಭ್ರಮಣ ತಾತ್ಕಾಲಿಕವಾಗಿದ್ದರೂ ಶಾಶ್ವತವಾಗಿದ್ದರೂ ಚಿಕಿತ್ಸೆಗಾಗಿ ಒಂದು ವರ್ಷದ ಅವಧಿಯನ್ನು ನೀಡಲಾಗುವುದು. ಈ ಅವಧಿಯಲ್ಲಿ ಗುಣಮುಖವಾಗದಿದ್ದರೆ ಅವರ ನಡುವೆ ವಿಚ್ಛೇದನ ಏರ್ಪಡಿಸಲಾಗುವುದು. ಆದರೆ ಅದರ ಜೊತೆಗೇ ಮಾಲಿಕೀ ಕರ್ಮಶಾಸ್ತ್ರಜ್ಞರು ಈ ಕೆಳಗಿನ ಶರತ್ತುಗಳನ್ನು ಇರಿಸಿದ್ದಾರೆ.

1. ಒಂದು ವೇಳೆ ಆತನು ವಿವಾಹಕ್ಕೆ ಮೊದಲೇ ಹುಚ್ಚನಾಗಿದ್ದು ಮಹಿಳೆಯು ಅದನ್ನು ತಿಳಿದಿದ್ದೂ ಆತನೊಂದಿಗೆ ವಿವಾಹ ಮಾಡಿಕೊಂಡಿದ್ದರೆ ಆಕೆಗೆ ವಿಚ್ಛೇದನಕ್ಕಾಗಿ ಆಗ್ರಹಿಸುವ ಅಧಿಕಾರವಿಲ್ಲ.

2. ವಿವಾಹದ ಬಳಿಕ ಆತನು ಹುಚ್ಚನೆಂಬುದು ಆಕೆಯ ತಿಳುವಳಿಕೆಗೆ ಬಂದಿದ್ದು ಆಕೆ ಆತನೊಂದಿಗೆ ಜೀವನ ಸಾಗಿಸಲು ತನ್ನ ಒಪ್ಪಿಗೆಯನ್ನು ಸ್ಪಷ್ಟವಾಗಿ ಪ್ರಕಟಿಸಿದ್ದರೂ ಆಕೆಗೆ ವಿಚ್ಛೇದನದ ದಾವೆ ಹೂಡುವ ಹಕ್ಕು ಇರುವುದಿಲ್ಲ.

3. ಮತಿಭ್ರಮಣವು ವಿವಾಹದ ಬಳಿಕ ಉಂಟಾಗಿದ್ದರೆ ಹಾಗೂ ಮತಿಭ್ರಮಣ ಉಂಟಾದ ಬಳಿಕ ಆತನೊಂದಿಗೆ ಸಹವಾಸಕ್ಕೆ ಆಕೆ ತನ್ನ ಒಪ್ಪಿಗೆಯನ್ನು ಪ್ರಕಟಿಸದಿದ್ದರೆ ಮತ್ತು ತನ್ನ ಇಚ್ಛೆಯಿಂದ ಆತನಿಗೆ ಸಂಸರ್ಗ ಅಥವಾ ಇನ್ನಾವುದೇ ಲೈಂಗಿಕ ಕ್ರಿಯೆಯ ಅನುಮತಿ ನೀಡಿರದಿದ್ದರೆ ಆಕೆ ವಿಚ್ಛೇದನದ ದಾವೆ ಹೂಡಬಹುದಾಗಿದೆ.

ಈ ಶರ್ತಗಳು ಕೂಡಾ ನಪುಂಸಕತೆಯ ಬಗೆಗಿನ ಶರ್ತಗಳಂತೆಯೇ ಇವೆ. ಅವುಗಳಿಗೆ ಕುರ್‌ಆನ್ ಮತ್ತು ಸುನ್ನತ್‌ಗಳಲ್ಲಿ ಯಾವುದೇ ಆಧಾರವಿಲ್ಲ. ಈ ಬಗ್ಗೆಯೂ ನನಗೆ ನಾನು ಈ ಹಿಂದೆ ವಿವರಿಸಿದಂತಹ ಆಕ್ಷೇಪಗಳೆ ಇವೆ. ಮಹಿಳೆಯನ್ನು ಒತ್ತಾಯಪೂರ್ವಕ ಓರ್ವ

ಹುಚ್ಚನ ಕೊರಳಿಗೆ ಕಟ್ಟುವುದರಿಂದ ಶರೀಅತ್, ನಾಗರಿಕತೆ ಮತ್ತು ನೈತಿಕತೆಯ ಉದ್ದೇಶಗಳು ಯಾವ ರೀತಿಯಲ್ಲೂ ಪೂರ್ಣಗೊಳ್ಳುವುದು ಅಸಾಧ್ಯ. ಆಕೆ ಅವನನ್ನು ಉದ್ದೇಶಪೂರ್ವಕವಾಗಿ ವರಿಸಿದ್ದರೆ ಆಕೆಯ ಮಹ್ರನ್ನು ಕಿತ್ತುಕೊಂಡು ವಿಚ್ಛೆದನ ಮಾಡುವುದೇ ಆಕೆಗೆ ನೀಡಬಹುದಾದ ಅತಿ ದೊಡ್ಡ ಶಿಕ್ಷೆ. ಒಂದು ವೇಳೆ ಆಕೆಗೆ ವಿವಾಹವಾದ ಬಳಿಕ ಆತನು ಹುಚ್ಚನೆಂಬುದು ತಿಳಿದು ಬಂದು ಮೊದಮೊದಲು ಆತನೊಂದಿಗೆ ಜೀವನ ಸಾಗಿಸುವೆನೆಂಬ ಇಂಗಿತವನ್ನೂ ಆಕೆ ವ್ಯಕ್ತಪಡಿಸಿದ್ದು, ತರುವಾಯ ಆಕೆಗೆ ಶಾರೀರಿಕ ಮತ್ತು ಮಾನಸಿಕ ಸಂಕಷ್ಟಗಳು ಅಸಹ್ಯವಾಗ ತೊಡಗಿದ್ದರೆ ಆಗಲೂ ಇದು ಆಕೆಯನ್ನು ಜೀವನ ಪರ್ಯಂತ ಓರ್ವ ಹುಚ್ಚನೊಂದಿಗಿದ್ದು ದುಃಖ, ಕಷ್ಟ ಮತ್ತು ಅಪಾಯಗಳಿಂದ ತುಂಬಿದ ಜೀವನ ಸಾಗಿಸಲು ನಿರ್ಬಂಧಿಸುವಷ್ಟು ಘೋರ ಅಪರಾಧವೇನಲ್ಲ. ಒಂದು ವೇಳೆ ವಿವಾಹದ ಬಳಿಕ ಆತನು ಹುಚ್ಚನಾದರೆ ಹಾಗೂ ಆರಂಭದಲ್ಲಿ ಮಹಿಳೆಯು ಪತಿನಿಷ್ಠೆ ಮತ್ತು ಪತಿಪ್ರೇಮದ ಪ್ರಾಮಾಣಿಕ ಭಾವನೆಯಿಂದ ಅವನನ್ನು ಬಿಟ್ಟು ಬಿಡಲು ಬಯಸದೆ ಇದ್ದು, ತನಗೆ ಸಾಧ್ಯವಿದ್ದಷ್ಟು ಆತನ ಆರೈಕೆ ಮಾಡುತ್ತಾ ಮೊದಲಿನಂತೆಯೇ ದಾಂಪತ್ಯ ಜೀವನವನ್ನು ಮುಂದುವರಿಸುವುದನ್ನು ಸಹಿಸಿಕೊಂಡಿದ್ದರೆ ಕೇವಲ ಆ ಕಾರಣದಿಂದ ಆತನ ಹುಚ್ಚುತನವು ಅಸಹ್ಯದ ಬಳಿಕವೂ ವಿಚ್ಛೇನದ ಹಕ್ಕು ನೀಡದಿರುವುದು ಯಾವ ನ್ಯಾಯ? ಈ ರೀತಿಯ ನಿರ್ಬಂಧವನ್ನು ಹೇರುವ ಕಾನೂನಿನ ಉದ್ದೇಶ, ಭವಿಷ್ಯದಲ್ಲಿ ತನ್ನ ಪತಿಯ ಹುಚ್ಚು ಶಾಶ್ವತ ಹಾಗೂ ಅಸಹನೀಯ ಸ್ವರೂಪವನ್ನು ತಾಳಿ ಬಿಟ್ಟರೆ ತಾನು ಈಗ ತೋರಿಸುತ್ತಿರುವ ನಿಷ್ಠೆ ಮತ್ತು ಸಹಾನುಭೂತಿಯು ಮುಂದೆ ತನ್ನ ಪಾಲಿಗೆ ಕಂಟಕಪ್ರಾಯವಾಗಿ ಮಾರ್ಪಡಬಹುದು ಮತ್ತು ಇದಕ್ಕಾಗಿ ತಾನು ಭಾರೀ ಬೆಲೆ ತೆರಬೇಕಾದೀತು ಎಂಬ ಭಯದಿಂದ ಮಹಿಳೆಯು ತನ್ನ ಪತಿಯ ಈವರೆಗಿನ ಪ್ರೀತಿ ವಾತ್ಸಲ್ಯಗಳನ್ನೆಲ್ಲಾ ಕಡೆಗಣಿಸಿ ಆತನ ವಿರುದ್ಧ ತಿರುಗಿಬಿದ್ದು ತಕ್ಷಣವೇ ಆತನನ್ನು ಬಿಟ್ಟು ಹೊರಟು ಹೋಗಬೇಕೆಂಬುದಾಗಿದೆಯೇ?

ಇಂತಹ ಶರ್ತಗಳನ್ನು ನಿಶ್ಚಯಿಸುವಾಗ ಒಂದೆಡೆ ಪುರುಷರ ಹಕ್ಕುಗಳ ಬಗ್ಗೆ ಬಹಳ ಅತಿಶಯೋಕ್ತ ಕಲ್ಪನೆಯನ್ನು ಇಟ್ಟುಕೊಳ್ಳಲಾಗಿದೆ. ಇನ್ನೊಂದೆಡೆ ಇವುಗಳಲ್ಲಿ ಮಹಿಳೆಯರ ಬಗ್ಗೆ ಅತಿ ಕಠಿಣವಾಗಿ ವ್ಯವಹರಿಸಲಾಗಿದೆ. ಒಂದು ವೇಳೆ ಮಹಿಳೆಯು ನಿರುಪಯುಕ್ತಳಾದರೆ, ಮತಿಭ್ರಮಣಕ್ಕೊಳಗಾದರೆ ಅಥವಾ ಏನಾದರೂ ಅಸಹ್ಯ ಬರಿಸುವ ಅಥವಾ ಹನಿಕಾರಕ ಕಾಯಿಲೆಗೆ ಗುರಿಯಾದರೆ ಪತಿಯು ಆಕೆಗೆ ತಲಾಕ್ ನೀಡಬಹುದು ಅಥವಾ ಇನ್ನೊಂದು ಮದುವೆ ಮಾಡಿಕೊಂಡು ತನ್ನ ಜೀವನವನ್ನು ಸಂತೋಷಕರವಾಗಿ ಸಾಗಿಸಬಹುದು. ಆದರೆ ಪುರುಷನು ಈ ಪೈಕಿ ಯಾವುದಾದರೂ ಕಾಯಿಲೆಗೆ ಗುರಿಯಾದರೆ ಮಹಿಳೆಯು ಆತನಿಗೆ ತಲಾಕ್ ನೀಡುವಂತೆಯೂ ಇಲ್ಲ ಮತ್ತು ಆತನ ಉಪಸ್ಥಿತಿಯಲ್ಲಿ ಬೇರೊಂದು ಮದುವೆಯನ್ನೂ ಮಾಡಿಕೊಳ್ಳುವಂತಿಲ್ಲ. ಆಕೆಗೆ ತಫ್ರೀಕ್‌ನ (ಬೇರ್ಪಡೆಯ) ಹೊರತು ಬೇರೆ ಉಪಯವೇ ಇಲ್ಲ. ಹೀಗಿರುವಾಗ ಆಕೆಗೆ ಉಳಿದಿರುವ ಈ ಒಂದೇ ಉಪಾಯಕ್ಕೂ ಅಲ್ಲಸಲ್ಲದ ಅಡೆತಡೆಗಳನ್ನೊಡ್ಡಿ ಹೆಚ್ಚಿನ ಪರಿಸ್ಥಿತಿಗಳಲ್ಲಿ ಆಕೆಗೆ ಬಿಡುಗಡೆಯ ಯಾವ ಮಾರ್ಗವೂ ಉಳಿಯದಂತೆ ಮಾಡಿಬಿಟ್ಟರೆ

ಅದು ಇಸ್ಲಾಮಿನ ವೈಶಿಷ್ಟ್ಯವಾದ ನೀತಿ-ನ್ಯಾಯಗಳಿಗೆ ವಿರುದ್ಧವಾಗುವುದು. ಇಂತಹ ಎಲ್ಲಾ ವ್ಯವಹಾರಗಳಲ್ಲಿಯೂ ಪವಿತ್ರ ಕುರ್‌ಆನ್‌ನ ಬೋಧನೆಗಳು ನಮಗೆ ಮಾರ್ಗದರ್ಶಿ ಆಗಬೇಕು. ವಿವಾಹದ ಮೂಲ ಉತ್ತಮ ದಾಂಪತ್ಯ ಸಂಬಂಧ ಬೆಳೆಯಬೇಕು. ಯಾವುದೇ ರೀತಿಯ ಕಿರುಕುಳ ಮತ್ತು ಹಿಂಸೆ ಆಗದ ರೀತಿಯಲ್ಲಿ ಮತ್ತು ದೇವ ಸೀಮೆಗಳು ಉಲ್ಲಂಘಿಸಲ್ಪಡುವ ಎಂಬ ಭಯ ಇಲ್ಲದ ವಾತಾವರಣದಲ್ಲಿ ಸ್ತ್ರೀಯನ್ನು ಪುರುಷನ ವಿವಾಹ ಬಂಧನದಲ್ಲಿರಿಸಬೇಕು. ಇನ್ನು ಒಂದು ವೇಳೆ ವಿವಾಹ ಬಂಧನದಲ್ಲಿ ಈ ಶರ್ತಗಳು ಈಡೇರುವುದಿಲ್ಲವಾದರೆ ಉತ್ತಮ ರೀತಿಯಲ್ಲಿ ಅವರ ಮಧ್ಯೆ ವಿಚ್ಛೇದನ ಏರ್ಪಡಿಸುವ ನಿಯಮವನ್ನು ಪಾಲಿಸಬೇಕು ಎಂಬುದೇ ಈ ಕುರಿತು ಕುರ್‌ಆನ್‌ನ ಬೋಧನೆಯಾಗಿದೆ. ಓರ್ವ ಹುಚ್ಚ, ಉಪದಂಶ ರೋಗಪೀಡಿತ (Syphilis), ಕುಷ್ಟರೋಗಿ ಅಥವಾ ತೊನ್ನು ರೋಗಪೀಡಿತನ ಜೊತೆ ಒತ್ತಾಯಪೂರ್ವಕ ದಾಂಪತ್ಯ ಜೀವನ ಸಾಗಿಸುವುದಕ್ಕಿಂತ ಹೆಚ್ಚಿನ ಹಿಂಸೆ ಮತ್ತು ಅನ್ಯಾಯ ಮಹಿಳೆಯ ಪಾಲಿಗೆ ಇನ್ನೇನಿರಬಹುದು? ಹಾಗೆಯೇ ಓರ್ವ ಮಹಿಳೆಯನ್ನು ಈ ರೀತಿ ಒತ್ತಾಯಪೂರ್ವಕ ದಾಂಪತ್ಯ ಜೀವನದಲ್ಲಿ ಬಂಧಿಸಿಟ್ಟರೆ ಆಕೆಯ ಜೀವನದಲ್ಲಿ ದೇವಸೀಮೆಯನ್ನು ಉಲ್ಲಂಘಿಸುವ ಎಷ್ಟು ಸನ್ನಿವೇಶಗಳು ಬರಬಹುದು ಮತ್ತು ಅಂತಹ ಸಂದರ್ಭಗಳಲ್ಲಿ ಸುರಕ್ಷಿತವಾಗಿ ಉಳಿಯುವುದು ಸಾಮಾನ್ಯ ಮಹಿಳೆಯ ಪಾಲಿಗೆ ಎಷ್ಟು ಕಷ್ಟಕರವಾಗಬಹುದು ಎಂಬುದನ್ನು ಕೂಡಾ ಯಾರಾದರೂ ಸುಲಭವಾಗಿ ಊಹಿಸಿಕೊಳ್ಳಬಹುದಾಗಿದೆ.

## 12. ನಾಪತ್ತೆ

ನಾಪತ್ತೆಯಾದವನ ಬಗ್ಗೆ ಪವಿತ್ರ ಕುರ್‌ಆನಿನಲ್ಲಿ ಯಾವುದೇ ಸ್ಪಷ್ಟ ವಿಧಿ ಇಲ್ಲ. ಪ್ರವಾದಿ ವಚನಗಳಲ್ಲೂ ಯಾವುದೇ ವಿಶ್ವಾಸಾರ್ಹ ವಿಧಿ ಇಲ್ಲ. ದಾರುಕತ್ನೀ ತಮ್ಮ ಹದೀಸ್ ಗ್ರಂಥದಲ್ಲಿ ಈ ಕೆಳಗಿನ ಹದೀಸ್ ಅನ್ನು ಉಲ್ಲೇಖಿಸಿರುವರು.

ಪ್ರವಾದಿ(ಸ) ಹೇಳಿದರು; 'ನಾಪತ್ತೆಯಾದವನ ಪತ್ನಿಯು ಆತನ ಪತ್ತೆಯಾಗುವ ತನಕ ಆತನ ಪತ್ನಿಯಾಗಿಯೇ ಮುಂದುವರಿಯುವಳು."

ಆದರೆ ಈ ಹದೀಸ್ ಸಿವಾರ್ ಬಿನ್ ಮುಸ್‌ಅಬ್ ಮತ್ತು ಮುಹಮ್ಮದ್ ಬಿನ ಶರ್ಜೀಲ್ ಹಮ್ದಾನಯಿವರ ಮೂಲಕ ವರದಿಯಾಗಿದೆ. ಅವರಿಬ್ಬರ ಪ್ರಾಮಾಣಿಕತೆಯ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಇಬ್ನು ಅಬೀ ಹಾತಿಮ್‌ರವರು ಇಬ್ನು ಶರ್ಜೀಲ್‌ರ ಬಗ್ಗೆ "ಅವರು ಮುಗೈರಾರಿಂದ ಕೆಟ್ಟ ಮತ್ತು ಸುಳ್ಳು ಮಾತುಗಳನ್ನು ವರದಿ ಮಾಡುತ್ತಾರೆ" ಎಂದು ಬರೆದಿರುವರು. ಇನ್ನು ಸಿವಾರ್ ಬಿನ್ ಮುಸ್‌ಅಬ್‌ರ ಬಗ್ಗೆ ಇಬ್ನುಲ್ ಕತ್ತಾನ್ ಅವರು: "ಅವರ ಹದೀಸ್ ವರದಿಯ ವಿಷಯದಲ್ಲಿ ಪರಿತ್ಯಕ್ತರಾದವರ ಪೈಕಿ ಇಬ್ನು ಶರ್ಜೀಲ್‌ಗಿಂತಲೂ ಹೆಚ್ಚು ಕುಪ್ರಸಿದ್ಧರಾಗಿದ್ದಾರೆ: ಎಂದು ಬರೆದಿರುವರು. ಆದ್ದರಿಂದ ಪ್ರಸ್ತುತ ಹದೀಸ್ ದುರ್ಬಲವೂ ಆಕ್ಷೇಪಾರ್ಹವೂ ಆಗಿದೆ. ಮಾತ್ರವಲ್ಲ ನಾಪತ್ತೆಯಾದವನ ಬಗ್ಗೆ ಹ. ಉಮರ್, ಹ. ಉಸ್ಮಾನ್, ಹ. ಅಲೀ, ಹ. ಇಬ್ನು ಅಬ್ಬಾಸ್, ಹ. ಅಬ್ದುಲ್ಲಾ ಬಿನ್ ಮಸ್‌ಊದ್, ಹ. ಅಬ್ದುಲ್ಲಾ

ಬಿನ್ ಉಮರ್(ರ) ಮುಂತಾದ ಪ್ರಖ್ಯಾತ ಸಹಾಬಿಗಳ ಮಧ್ಯೆಯೇ ಭಿನ್ನಾಭಿಪ್ರಾಯಗಳಿವೆ. ಇದು ಆ ಸಹಾಬಿವರ್ಯರಿಗೆ ಈ ಹದೀಸಿನ ಬಗ್ಗೆ ತಿಳಿದಿರಲಿಲ್ಲವೆಂಬುದಕ್ಕೆ ಮತ್ತು ಅವರ ಕಾಲದ ಯಾವ ಸಹಾಬಿಗೂ ಈ ಹದೀಸಿನ ಬಗ್ಗೆ ತಿಳಿದಿರಲಿಲ್ಲವೆಂಬುದಕ್ಕೆ ಸ್ಪಷ್ಟ ನಿದರ್ಶನವಾಗಿದೆ. ಏಕೆಂದರೆ ಯಾವ ಸಹಾಬಿಗಾದರೂ ಈ ಹದೀಸಿನ ಬಗ್ಗೆ ತಿಳಿದಿದ್ದರೆ ಅವರು ಅದನ್ನು ಮಹನೀಯರ ಮುಂದಿರಿಸಿ ಅವರ ಭಿನ್ನಾಭಿಪ್ರಾಯವನ್ನು ನಿವಾರಿಸುತ್ತಿದ್ದರು. ಮುಹಮ್ಮದ್ ಬಿನ್ ಶರ್ಜೀಲ್ ಅವರು ಈ ಹದೀಸನ್ನು ಮುಗ್ಯೆರಾ ಬಿನ್ ಶುಅ್‌ಬಾರಿಂದ ವರದಿ ಮಾಡಿದ್ದಾರೆ. ಮುಗೀರಾ ಅವರು ಹ. ಉಮರ್ ಮತ್ತು ಹ. ಉಸ್ಮಾನ್(ರ) ಅವರ ಕಾಲದ ಪ್ರಖ್ಯಾತ ವ್ಯಕ್ತಿಗಳ ಪೈಕಿ ಒಬ್ಬರಾಗಿದ್ದರು ಹಾಗೂ ರಾಜ್ಯಪಾಲರ ಹುದ್ದೆಯನ್ನು ನಿರ್ವಹಿಸಿದ್ದರು. ಅವರಿಗೆ ಈ ಹದೀಸಿನ ಬಗ್ಗೆ ತಿಳಿದಿದ್ದೂ ಅವರು ಹ. ಉಮರ್ ಮತ್ತು ಹ. ಉಸ್ಮಾನ್(ರ) ಅವರನ್ನು ಈ ಹದೀಸ್‌ಗೆ ವಿರುದ್ಧವಾಗಿ ತೀರ್ಪು ನೀಡಲು ಹೇಗೆ ಬಿಡುತ್ತಿದ್ದರು? ಈ ಎಲ್ಲ ಕಾರಣಗಳಿಂದಾಗಿ ನಾಪತ್ತೆಯಾದವನ ಬಗ್ಗೆ ಯಾವುದೇ ಸ್ಪಷ್ಟ ವಿಧಿಯು ಹದೀಸ್‌ನಲ್ಲಿ ಇಲ್ಲವೆಂದೇ ತಿಳಿಯಬೇಕಾಗಿದೆ. ಅದು ಸಂಪೂರ್ಣವಾಗಿ ವಿದ್ವಾಂಸರ ಇಜ್ತಿಹಾದ್‌ಗೆ ಬಿಟ್ಟ ವಿಷಯವಾಗಿದೆ.

ಸಹಾಬಿಗಳು, ತಾಬಈಗಳು ಮತ್ತು ಕರ್ಮಶಾಸ್ತ್ರಜ್ಞರ ಅಭಿಪ್ರಾಯಗಳು ಈ ವಿಷಯದಲ್ಲಿ ಭಿನ್ನ ಭಿನ್ನವಾಗಿವೆ. ಹ. ಉಮರ್, ಹ. ಉಸ್ಮಾನ್. ಹ. ಇಬ್ನು ಉಮರ್ ಮತ್ತು ಹ. ಇಬ್ನು ಅಬ್ಬಾಸ್(ರ)ರವರ ಅಭಿಪ್ರಾಯದಂತೆ, ನಾಪತ್ತೆಯಾದವನ ಪತ್ನಿಯು ನಾಲ್ಕು ವರ್ಷಗಳ ತನಕ ಆತನಿಗಾಗಿ ಕಾದಿರಬೇಕು. ಸಈದ್ ಬಿನ್ ಮುಸಯ್ಯಬ್, ಝುಹ್ರಿ, ನಖಈ, ಅತಾ, ಮಕ್ಹೂಲ್ ಮತ್ತು ಶುಅ್‌ಬೀಯವರ ಅಭಿಪ್ರಾಯವೂ ಇದುವೇ ಆಗಿದೆ: ಇಮಾಮ್ ಮಾಲಿಕ್(ರ)ರವರದ್ದೂ ಇದುವೇ ಅಭಿಮತ. ಇಮಾಮ್ ಅಹ್ಮದ್(ರ)ರವರೂ ಈ ಅಭಿಪ್ರಾಯದ ಪರವಾಗಿಯೇ ತಮ್ಮ ಒಲವು ಪ್ರಕಟಿಸಿದ್ದಾರೆ. ಇನ್ನೊಂದೆಡೆ ಹ. ಅಲೀ ಮತ್ತು ಇಬ್ನು ಮಸ್‌ಊದ್(ರ) ಅವರ ಅಭಿಪ್ರಾಯದಂತೆ ನಾಪತ್ತೆಯಾದವನ ಪತ್ನಿಯು ಆತನು ಮರಳುವ ತನಕ ಅಥವಾ ಆತನು ಮರಣ ಹೊಂದಿದ್ದಾನೆಂದು ಖಚಿತವಾಗಿ ತಿಳಿದು ಬರುವ ತನಕ ತಾಳ್ಮೆ ವಹಿಸಬೇಕು. ಸುಫ್‌ಯಾನ್ ಸೂರೀ, ಇಮಾಮ್ ಅಬೀ ಹನೀಫಾ ಮತ್ತು ಇಮಾಮ್ ಶಾಫಈ(ರ) ಇದೇ ಅಭಿಪ್ರಾಯವನ್ನು ಅಂಗೀಕರಿಸಿದ್ದಾರೆ. ಕಾಯುವುದಕ್ಕೆ ಹನಫೀಗಳು ಗೊತ್ತುಪಡಿಸಿದ ನಿಯಮವೇನೆಂದರೆ ನಾಪತ್ತೆಯಾದವನ ಸಮ ವಯಸ್ಕರು ಈ ಊರಲ್ಲಿ ಅಥವಾ ದೇಶದಲ್ಲಿ ಜೀವಂತವಿರುವ ತನಕ ಪತ್ನಿಯು ನಾಪತ್ತೆಯಾದ ಪತಿಗಾಗಿ ಕಾಯಬೇಕು. ಇನ್ನುಳಿದ ಮಹನೀಯರು ತಮ್ಮ ತಮ್ಮ ಅಂದಾಜಿನ ಮೇರೆಗ ಮನುಷ್ಯನ ಗರಿಷ್ಠ ಪ್ರಾಯವನ್ನು ಲೆಕ್ಕ ಮಾಡಿದ್ದಾರೆ. ಒಬ್ಬ ಮನುಷ್ಯನು ಹೆಚ್ಚೆಂದರೆ ಎಷ್ಟು ಪ್ರಾಯದ ತನಕ ಬದುಕಬಹುದೋ ನಾಪತ್ತೆಯಾದವನ ಪತ್ನಿಯು ಅಷ್ಟು ತನಕ ಕಾಯಬೇಕು. ಉದಾ: ಒಬ್ಬ ವ್ಯಕ್ತಿ 30ನೇ ವರ್ಷ ಪ್ರಾಯದಲ್ಲಿ ನಾಪತ್ತೆಯಾದರೆ ಆತನ ಪತ್ನಿಯು ಕೆಲವರ ಅಭಿಪ್ರಾಯದಂತೆ 90 ವರ್ಷ, ಇನ್ನು ಕೆಲವರ ಅಭಿಪ್ರಾಯದಂತೆ 70 ವರ್ಷ, ಮತ್ತೆ ಕೆಲವರ ಅಭಿಪ್ರಾಯದಂತೆ 60 ವರ್ಷ., ಇನ್ನೂ

ಕೆಲವರ ಅಭಿಪ್ರಾಯದಂತೆ 50 ವರ್ಷ ಅಥವಾ ಕನಿಷ್ಠ 40ವರ್ಷವಾದರೂ ಕಾಯಬೇಕು. ಏಕೆಂದರೆ ಕೆವರ ಅಭಿಪ್ರಾಯದಂತೆ ಮನುಷ್ಯನ ಸ್ವಾಭಾವಿಕ ಆಯುಷ್ಯ 120 ವರ್ಷ. ಇನ್ನು ಕೆಲವರ ಅಭಿಪ್ರಾಯದಂತೆ 100 ಅಥವಾ 90 ಅಥವಾ 70 ವರ್ಷವಾಗಿದೆ. ಆಗ ಪತ್ನಿಯ ಪ್ರಾಯವು 20 ಎಂದಿಟ್ಟುಕೊಂಡರೆ ಅತ್ಯಂತ ಕನಿಷ್ಟವೆಂದರೂ 40 ವರ್ಷ ಕಾದು ಕುಳಿತುಕೊಂಡ ಬಳಿಕ ಆಕೆ 60 ವರ್ಷ ಪ್ರಾಯದವಳಾದಾಗ ಆಕೆಗೆ ಮರು ವಿವಾಹ ಅನುಮತಿ ದೊರೆಯುತ್ತದೆ.

ಈ ವಿಷಯದಲ್ಲಿ ಪವಿತ್ರ ಕುರ್‌ಆನ್‌ನ ತಾತ್ವಿಕ ವಿಧಿಗಳನ್ನು ಪರಿಗಣಿಸಿದರೆ ಹ. ಉಮರ್(ರ) ಮತ್ತವರ ಅನುಯಾಯಿಗಳ ಅಭಿಪ್ರಾಯವೇ ಹೆಚ್ಚು ಸೂಕ್ತವೆಂದು ತಿಳಿದು ಬರುತ್ತದೆ. ಅದುವೇ ಇಸ್ಲಾಮೀ ಕಾನೂನಿನ ಸ್ಫೂರ್ತಿ, ನ್ಯಾಯ, ಸಂತುಲಿತತೆ ಮತ್ತು ಸ್ವಭಾವಕ್ಕೆ ಹೆಚ್ಚು ನಿಕಟವೂ ಆಗಿದೆ. ಪವಿತ್ರ ಕುರ್‌ಆನ್‌ನಲ್ಲಿ ನಾಲ್ಕು ಮಂದಿ ಪತ್ನಿಯರನ್ನು ವಿವಾಹವಾಗುವ ಅನುಮತಿ ನೀಡಿದ ಬಳಿಕ ಈ ರೀತಿ ಆಜ್ಞಾಪಿಸಲಾಗಿದೆ. "ಓರ್ವ ಪತ್ನಿಯತ್ತ ಹೆಚ್ಚು ವಾಲಿಕೊಂಡು ಇನ್ನೊಬ್ಬಳನ್ನು ತ್ರಿಶಂಕು ಸ್ಥಿತಿಯಲ್ಲಿ ಬಿಟ್ಟು ಬಿಡಬೇಡಿರಿ." ಪವಿತ್ರ ಕುರ್‌ಆನ್ ಯಾವುದೇ ಮಹಿಳೆಯನ್ನು ತ್ರಿಶಂಕು ಸ್ಥಿತಿಯಲ್ಲಿ ಬಿಡುವುದನ್ನು ಇಷ್ಟ ಪಡುವುದಿಲ್ಲವೆಂದು ಇದರಿಂದ ತಿಳಿದು ಬರುತ್ತದೆ. ಪತಿಯ ಉಪಸ್ಥಿತಿಯಲ್ಲೇಅದನ್ನು ಕುರ್‌ಆನ್ ಅಪ್ರಿಯವೆಂದು ಸಾರಿರುವಾಗ ಆತನು ನಾಪತ್ತೆಯಾದಾಗ ಅದು ಪ್ರಿಯವಾಗುವುದಾದರೂ ಹೇಗೆ? ಇನ್ನೊಂದೆಡೆ ಪವಿತ್ರ ಕುರ್‌ಆನ್ ಪತಿಯಂದಿರಿಗೆ ಈ ರೀತಿ ಆಜ್ಞಾಪಿಸಿದೆ. "ನೀವು ನಿಮ್ಮ ಪತ್ನಿಯರನ್ನು ಬಿಟ್ಟು ದೂರ ನಿಲ್ಲುವ ಶಪಥ ಮಾಡಿದ್ದರೆ ನಾಲ್ಕು ತಿಂಗಳವರೆಗೆ ಮಾತ್ರ ನಿಮಗೆ ಹಾಗೆ ಮಾಡುವ ಅನುಮತಿ ಇದೆ. ಆ ಬಳಿಕ ಅವರಿಗೆ ತಲಾಕ್ ನೀಡಬೇಕಾಗುವುದು." ಮಹಿಳೆಯನ್ನು ಆಕೆಗೆ ಅಸಹ್ಯವಾಗುವಷ್ಟು ಕಾಲ ಪತಿಯ ಸಹವಾಸದಿಂದ ವಂಚಿತವಿರಿಸುವುದು ಅಥವಾ ಆಕೆಯನ್ನು ದೇವ ಸೀಮೋಲ್ಲಂಘನೆಗೆ ಪ್ರೇರೇಪಿಸುವುದು ಸರಿಯಲ್ಲವೆಂಬುದೇ ಇಲ್ಲಿಯೂ ಪವಿತ್ರ ಕುರ್‌ಆನ್‌ನ ಸ್ಫೂರ್ತಿಯಾಗಿದೆ. ಮತ್ತೆ ಅವರನ್ನು ಕಿರುಕುಳಕ್ಕೆ ಈಡು ಮಾಡಬೇಡಿರಿ ಎಂದು ಆಜ್ಞಾಪಿಸಲಾಗಿದೆ. ದಾಂಪತ್ಯ ಜೀವನದಲ್ಲಿ ಮಹಿಳೆಗೆ ಕಿರುಕುಳ ಕೊಡಬಾರದು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ನಾಪತ್ತೆಯಾದವನ ಪತ್ನಿಯು ಜೀವನ ಪರ್ಯಂತ ಪತಿಗಾಗಿ ಕಾಯುತ್ತಿರುವುದಕ್ಕಿಂತ ದೊಡ್ಡ ಕಿರುಕುಳ ಮಹಿಳೆಯ ಪಾಲಿಗೆ ಇನ್ನಾವುದಿರಬಹುದು? ಜೊತೆಗೆ ಪವಿತ್ರ ಕುರ್‌ಆನ್ ಒಂದು ಸೂಕ್ತದಲ್ಲಿ ದೇವ ಸೀಮೆಗಳ ಉಲ್ಲಂಘನೆಯ ಭಯವಿದ್ದರೆ 'ಖುಲಾ' ಪಡೆಯುವುದರಲ್ಲಿ ತಪ್ಪಿಲ್ಲ ಎನ್ನಲಾಗಿರುವುದು ಕೂಡಾ ಇಲ್ಲಿ ಗಮನಾರ್ಹ. ಇಲ್ಲಿ ದಾಂಪತ್ಯ ಸಂಬಂಧದ ಮುಂದುವರಿಕೆಗಿಂತಲೂ ದೇವಸೀಮೆಗಳ ಸಂರಕ್ಷಣೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗಿದೆ. ನಾಪತ್ತೆಯಾಗಿರುವವನ ಪತ್ನಿಗೆ ದೇವಸೀಮೆಯನ್ನು ಪಾಲಿಸುವುದು ಅತ್ಯಂತ ಕಷ್ಟಕರವೆಂಬುದನ್ನು ಯಾರು ತಾನೇ ನಿರಾಕರಿಸಬಲ್ಲರು? ಈ ಎಲ್ಲ ವಿಧಿಗಳ ಮೂಲತತ್ವ ಮತ್ತು ಅವುಗಳಲ್ಲಿ ಅಡಗಿರುವ ಮರ್ಮಗಳ ಬಗ್ಗೆ ಚಿಂತನೆ ನಡೆಸಿದರೆ, ನಾಪತ್ತೆಯಾದವನ ಪತ್ನಿಯು ಒಂದು ಅಸಾಮಾನ್ಯ ಅವಧಿಯ ತನಕ ಕಾಯಬೇಕೆಂದು ಆಜ್ಞೆ ನೀಡಿ ಆಕೆಯನ್ನು ತ್ರಿಶಂಕು ಸ್ಥಿತಿಯಲ್ಲಿಡುವುದು ಸರ್ವಥಾ ಸಮಂಜಸವಲ್ಲ- ಎಂದು ಸರಿಯಾಗಿ

ಮನವರಿಕೆಯಾಗುತ್ತದೆ.

## 13. ನಾಪತ್ತೆ: ಮಾಲಿಕೀ ಮದ್‌ಹಬ್‌ನ ವಿಧಿಗಳು

ಈ ಎಲ್ಲ ಕಾರಣಗಳಿಂದಾಗಿ ಹನಫೀ ಕರ್ಮಶಾಸ್ತ್ರಜ್ಞರು ನಾಪತ್ತೆಯಾದವನ ವಿಷಯದಲ್ಲಿ ಮಾಲಿಕೀ ಮದ್‌ಹಬ್‌ನ ವಿಧಿಯಂತೆ ಫತ್ವಾ ನೀಡುವುದನ್ನು ಇಷ್ಟ ಪಡುತ್ತಾರೆ. ಆದ್ದರಿಂದ ಈಗ ಮಾಲಿಕೀ ಮದ್‌ಹಬ್‌ನ ಪ್ರಕಾರ ಈ ಬಗೆಗಿನ ವಿವರವಾದ ವಿಧಿಗಳೇನೆಂಬುದನ್ನು ತಿಳಿಯಬೇಕಾಗಿದೆ.

ಮಾಲಿಕೀ ಮದ್‌ಹಬ್‌ನ ಪ್ರಕಾರ ನಾಪತ್ತೆಯಾಗುವವರಲ್ಲಿ ಮೂರು ವಿಧಗಳಿವೆ. ಅವುಗಳಲ್ಲಿ ಪ್ರತಿಯೊಂದರ ಬಗ್ಗೆ ಇರುವ ವಿಧಿಯೂ ಭಿನ್ನವಾಗಿದೆ.

1. ನಾಪತ್ತೆಯಾದವನು ತನ್ನ ಪತ್ನಿಯ ಉಪಜೀವನಕ್ಕೆ ಬೇಕಾದಷ್ಟು ಸೊತ್ತನ್ನು ಬಿಟ್ಟು ಹೋಗಿರದಿದ್ದರೆ ಕಾಝಿಯು ಆಕೆಗೆ ಕಾಯುವ ಆಜ್ಞೆ ವಿಧಿಸಬಾರದು. ಬದಲಾಗಿ ವಿಚಾರಣೆಯ ಬಳಿಕ ಆತನು ಮತ್ತಷ್ಟು ಕಾಯದೆ ಸ್ವಂತ ಅಧಿಕಾರದಿಂದ ಆಕೆಗೆ ತಲಾಕ್ ನೀಡುವನು ಅಥವಾ ಆಕೆ ತನ್ನ ಮೇಲೆ ಸ್ವಯಂ ತಲಾಕ್ ಜಾರಿಗೊಳಿಸುವ* ಅನುಮತಿಯನ್ನು ಆಕೆಗೆ ನೀಡುವನು. ಶಾಫಿಈ ಮತ್ತು ಹಂಬಲೀ ಮದ್‌ಹಬ್‌ಗಳು ಕೂಡಾ ಈ ವಿಷಯದಲ್ಲಿ ಮಾಲಿಕೀ ಮದ್‌ಹಬನ್ನು ಬೆಂಬಲಿಸುತ್ತವೆ. ಏಕೆಂದರೆ ಅವರ ಅಭಿಪ್ರಾಯದಂತೆ ಜೀವನಾಂಶ ಪೂರೈಸದಿರುವುದು ವಿಚ್ಛೇದನಕ್ಕೆ ಸೂಕ್ತ ಕಾರಣವಾಗಿದೆ.

2. ನಾಪತ್ತೆಯಾದವನು ಸೊತ್ತು ಬಿಟ್ಟು ಹೋಗಿರುವನು. ಆದರೆ ಮಹಿಳೆಯು ಯುವತಿಯಾಗಿದ್ದು ದೀರ್ಘಾವಧಿಯ ತನಕ ಏಕಾಂತ ಸ್ಥಿತಿಯಲ್ಲಿದ್ದರೆ ಆಕೆ ಅನೈತಿಕತೆಯಲ್ಲಿ ಸಿಲುಕುವ ಭೀತಿ ಇದೆ ಎಂದಾದರೆ ಕಾಝಿಯು ಆಕೆಗೆ ಒಂದು ವರ್ಷ ಅಥವಾ ಆರು ತಿಂಗಳು ಅಥವಾ ಇನ್ನಾವುದೇ

ಸೂಕ್ತ ಅವಧಿಯವರೆಗೆ ಕಾಯುವ ಆಜ್ಞೆ ನೀಡುವನು. ಈ ವಿಷಯದಲ್ಲಿ ಹಂಬಲೀ ಮದ್‌ಹಬ್ ಕೂಡಾ ಮಾಲಿಕೀ ಮದ್‌ಹಬ್‌ನಂತೆಯೇ ಇದೆ. ಅಲ್ಲದೆ ಕೆಲವು ಕಠಿಣ ಪರಿಸ್ಥಿತಿಗಳಲ್ಲಿ ಹಂಬಲಿ ಮತ್ತು ಮಾಲಿಕೀ ಮದ್‌ಹಬ್‌ಗಳೆರಡೂ ವಿಳಂಬವಿಲ್ಲದೆ ವಿಚ್ಛೇದನ ಮಾಡುವುದು ಸಿಂಧುವೆಂದು ಪರಿಗಣಿಸಿವೆ. ಇನ್ನು ಪಾಪವೆಸಗುವ ಭಯ ಸಾಬೀತಾಗಬೇಕಿದ್ದರೆ ಮಹಿಳೆ ಸ್ವತಃ ಬಾಯಿ ಬಿಟ್ಟು 'ನನ್ನನ್ನು ಈ ಮನುಷ್ಯನ ವಿವಾಹ ಬಂಧನದಿಂದ ಮುಕ್ತಗೊಳಿಸಿ, ಇಲ್ಲವಾದರೆ ನಾನು ವ್ಯಭಿಚಾರವೆಸಗುವೆನು' ಎಂದು ಹೇಳುವ ಅಗತ್ಯವಿಲ್ಲ. ಪತಿಯ ನಾಪತ್ತೆಯಾಗಿರುವ ಕುರಿತು ಈ ದೂರು ಸಲ್ಲಿಸಿರುವ ಮಹಿಳೆಯ ವಯಸ್ಸು, ಪರಿಸರ ಹಾಗೂ ದಾವೆ ಹೂಡುವುದಕ್ಕಿಂತ ಮೊದಲು ಪತಿಯನ್ನು ಕಾಯುತ್ತಾ ಎಷ್ಟು ಕಾಲ ಕಳೆದಿದ್ದಾಳೆ ಎಂಬಿತ್ಯಾದಿ

* ಕಾಝಿಯು ತನ್ನ ಅಧಿಕಾರದಿಂದ ತಲಾಕ್ ನೀಡುವುದಕ್ಕಿಂತ ಆಕೆಗೆ ತನ್ನ ಮೇಲೆ ತಲಾಕ್ ಜಾರಿಗೊಳಿಸುವ ಅನುಮತಿ ನೀಡುವುದು ಹೆಚ್ಚು ಉತ್ತಮ. ಏಕೆಂದರೆ ಪ್ರವಾದಿವರ್ಯರು(ಸ) ಬರೀರ:ರಿಗೆ ಈ ರೀತಿ ಆಜ್ಞಾಪಿಸಿದ್ದರು, "ನಿನಗೆ ನಿನ್ನ ಮೇಲೆ ಅಧಿಕಾರವಿದೆ, ನೀನು ಬಯಸಿದರೆ ಪತಿಯೊಂದಿಗೆ ವಾಸಿಸಬಹುದು ಅಥವಾ ಅವನಿಂದ ಬೇರ್ಪಡಬಹುದು.

ವಿಷಯಗಳನ್ನು ಪರಿಗಣಿಸಿ ಆಕೆಯ ಚಾರಿತ್ರ್ಯದ ರಕ್ಷಣೆಗಾಗಿ ಕಾಯುವ ಅವಧಿಯಲ್ಲಿ ಎಷ್ಟರ ಮಟ್ಟಿಗೆ ಕಡಿತ ಮಾಡಬೇಕೆಂಬುದನ್ನು ಅವರು ನಿರ್ಧರಿಸಬೇಕು.

3. ಒಂದು ವೇಳೆ ಪತಿಯು ಜೀವನೋಪಾಯಕ್ಕೆ ಸಾಕಷ್ಟು ಹಣವನ್ನು ಬಿಟ್ಟು ಹೋಗಿದ್ದು ಪತ್ನಿಯು ಅನೈತಿಕತೆಯಲ್ಲಿ ಸಿಲುಕುವ ಆಶಂಕೆಯೂ ಇಲ್ಲದಿದ್ದರೆ ಆ ಪರಿಸ್ಥಿತಿಯಲ್ಲಿನ ನಾಲ್ಕು ಉಪ ವಿಧಿಗಳಿವೆ.

ಅ) ನಾಪತ್ತೆಯಾದವನು ಇಸ್ಲಾಮೀ ಸಾಮ್ರಾಜ್ಯದಲ್ಲಿ ಅಥವಾ ನಾಗರಿಕ ರಾಷ್ಟ್ರಗಳೊಂದಿಗೆ ಸಂಬಂಧ ಇರುವಂತಹ ರಾಷ್ಟ್ರಗಳಲ್ಲಿ ಕಾಣೆಯಾಗಿದ್ದರೆ ಹಾಗೂ ಅವನನ್ನು ಪತ್ತೆ ಹಚ್ಚುವುದು ಸಾಧ್ಯವೆಂದಾದರೆ ಆ ಮಹಿಳೆಗೆ, ನಾಲ್ಕು ವರ್ಷಗಳ ಕಾಲ ಕಾಯಬೇಕೆಂದು ಆಜ್ಞಾಪಿಸಲಾಗುವುದು.

ಆ) ಆತನು ರಣರಂಗದಲ್ಲಿ ಕಾಣೆಯಾಗಿದ್ದರೆ ಶೋಧನೆಗೆ ಸಾಧ್ಯವಿರುವ ಎಲ್ಲ ಪ್ರಯತ್ನಗಳನ್ನು ಮಾಡಿದ ಬಳಿಕ ಅವನಿಗಾಗಿ ಒಂದು ವರ್ಷದ ತನಕ ಕಾಯಲಾಗುವುದು.

ಇ) ಆತನು ಒಂದು ವೇಳೆ ಯಾವುದಾದರೂ ಸ್ಥಳೀಯ ಗಲಭೆಯ ನಿಮಿತ್ತ ನಾಪತ್ತೆಯಾಗಿದ್ದರೆ ಆ ಗಲಭೆ ಮುಗಿದ ಬಳಿಕ ಆತನ ಶೋಧನೆಗೆ ಸಾಧ್ಯವಿರುವ ಎಲ್ಲ ಪ್ರಯತ್ನಗಳನ್ನು ಮಾಡಲಾಗುವುದು. ತರುವಾಯ ವಿಳಂಬ ಮಾಡದೆ, ಆತನ ಪತ್ನಿಗೆ ಆತನು ಮರಣ ಹೊಂದಿದಾಗ ಕಳೆಯಬೇಕಾದ ಇದ್ದತ್ ಅವಧಿ ಕಳೆಯುವ ಅನುಮತಿ ನೀಡಲಾಗುವುದು.

ಈ) ಆತನು ಒಂದು ವೇಳೆ ಯಾವುದಾದರೂ ಅನಾಗರಿಕ ರಾಷ್ಟ್ರದಲ್ಲಿ ಕಾಣೆಯಾಗಿದ್ದು ಆ ರಾಷ್ಟ್ರದೊಂದಿಗೆ ನಾಗರಿಕ ಜಗತ್ತಿಗೆ ಸಂಪರ್ಕವಿಲ್ಲದೆ ಇದ್ದರೆ ಹಾಗೂ ಅಲ್ಲಿ ಅವನನ್ನು ಹುಡುಕುವುದು ಸಾಧ್ಯವಿಲ್ಲದೆ ಇದ್ದರೆ ಆತನ ಮಡದಿಯು ಓರ್ವ ಸಾಮಾನ್ಯ ಮನುಷ್ಯನ ಆಯುಷ್ಯದಷ್ಟು ಕಾಲ ಕಾಯಬೇಕು. ಈ ಅವಧಿ ಎಷ್ಟೆಂಬುದರ ಬಗ್ಗೆ ಭಿನ್ನಾಭಿಪ್ರಾಯವಿದೆ. ಕೆಲವರು 70 ವರ್ಷ, ಕೆಲವರು 80 ವರ್ಷ ಮತ್ತು ಕೆಲವರು 75 ವರ್ಷ ಎಂದಿರುವರು. ಆದರೆ ನಾನು ಈಗಾಗಲೇ ಹೇಳಿರುವಂತೆ ಇದು ಕೇವಲ ಆತನು ಸಾಕಷ್ಟು ಹಣ ಬಿಟ್ಟು ಹೋಗಿದ್ದು ಪತ್ನಿಯು ಅನೈತಿಕತೆಯಲ್ಲಿ ಸಿಲುಕುವ ಅಪಾಯವಿಲ್ಲದಾಗ ಮಾತ್ರ ಅನ್ವಯವಾಗುತ್ತದೆ.

ಹನಫೀ ಪಂಡಿತರು ಸಾಮಾನ್ಯವಾಗಿ ತಮ್ಮ ಧರ್ಮವಿಧಿಗಳಲ್ಲಿ ಮಾಲಿಕೀ ಮದ್‌ಹಬ್‌ನ ಶರ್ತಗಳನ್ನು ಕಡೆಗಣಿಸುತ್ತಾರೆ. ನಾಪತ್ತೆಯ ಎಲ್ಲ ಸಂದರ್ಭಗಳಲ್ಲೂ ನಾಲ್ಕು ವರ್ಷ ಕಾಯಬೇಕೆಂದು ವಿಧಿಸುತ್ತಾರೆ. ಆದರೆ ಇದು ಸರಿಯಲ್ಲ. ವಿಶೇಷತಃ ನೈತಿಕ ಪತನದ ಅನೇಕ ಪ್ರೇರಕಗಳು ಹುಟ್ಟಿಕೊಂಡಿರುವ ಇಂದಿನ ಪರಿಸ್ಥಿತಿಯಲ್ಲಂತೂ ಎಲ್ಲ ನಾಪತ್ತೆಯ ಪ್ರಕರಣದಲ್ಲೂ ನಾಲ್ಕು ವರ್ಷ ಕಾಯಬೇಕೆಂದು ವಿಧಿಸುವುದು ಶರೀಅತ್‌ನ ಉದ್ದೇಶಗಳಿಗೆ ವಿರುದ್ಧವಾಗಿರುತ್ತದೆ. ಇಸ್ಲಾಮಿ ನಾರಂಭ ಕಾಲದಲ್ಲಿ ಇದ್ದಂತಹ ಪ್ರಚಂಡ ನೈತಿಕ ಶಿಸ್ತು ಇಂದು ಮುಸ್ಲಿಮ್ ಸಮಾಜದಲ್ಲಿ ಉಳಿದಿಲ್ಲ. ವಿಷಯಾಶಕ್ತಿಗಳನ್ನು ಅಂಕಿತದಲ್ಲಿಡಲು ಇಸ್ಲಾಮ್ ಸ್ಥಾಪಿಸಿದಂತಹ ಅಡೆತಡೆಗಳು ಇಸ್ಲಾಮೇತರ ಸಂಸ್ಕೃತಿಗಳ ವ್ಯಾಪಕ ಪ್ರಭಾವದಿಂದಾಗಿ ಕುಸಿದು ಬಿದ್ದು ಮುಸಲ್ಮಾನರು ಇಂದು ಅವುಗಳಿಂದ ಸ್ವತಂತ್ರರಾಗಿದ್ದಾರೆ. ಸಿನೇಮಾ, ನಗ್ನಚಿತ್ರಗಳು, ಕಾಮ ಕೆರಳಿಸುವ ಕಥೆ-ಕಾದಂಬರಿಗಳು ಮತ್ತು ಹುಚ್ಚು ಹಿಡಿಸುವ ರೇಡಿಯೋ ಹಾಡುಗಳ

ದುಷ್ಪ್ರಭಾವದಿಂದಾಗಿ ನಗರಗಳಲ್ಲಾಗಲೀ ಹಳ್ಳಿಗಳಲ್ಲಾಗಲೀ ಯಾರೂ ಸುರಕ್ಷಿತರಾಗಿರಲು ಸಾಧ್ಯವಿಲ್ಲ. ಇವೆಲ್ಲಕ್ಕೂ ಮಿಗಿಲಾಗಿ ವ್ಯಭಿಚಾರವನ್ನು ಕಾನೂನು ಬದ್ಧಗೊಳಿಸಲಾಗಿದೆ. ಪರ್ದಾದ ಧಾರ್ಮಿಕ ವಿಧಿಯು ಕಾರ್ಯರೂಪದಲ್ಲಿ ಬಾಕಿ ಉಳಿದಿಲ್ಲ. ಇದರಿಂದಾಗಿ ಸ್ತ್ರೀ-ಪುರುಷರ ಅನಿರ್ಬಂಧಿತ ಮಿಲನವು ಮನೋವಿಕಾರಗಳನ್ನು ಕೆರಳಿಸುವ ಕಾರ್ಯವೆಸಗುತ್ತಿದೆ. ಈ ಪರಿಸ್ಥಿತಿಯಲ್ಲಿ ದೇಹೇಚ್ಛೆಗಳನ್ನು ಅಂಕಿತದಲ್ಲಿರಿಸಿ ಧರ್ಮನಿಷ್ಠೆಯ ಜೀವನ ಸಾಗಿಸುವುದು ಅತ್ಯಂತ ಕಷ್ಟದ ಕೆಲಸವಾಗಿ ಮಾರ್ಪಟ್ಟಿದೆ. ಈ ಸನ್ನಿವೇಶದಲ್ಲಿ ಓರ್ವ ಯುವ ಪ್ರಾಯದ ಮಹಿಳೆಯು ತನ್ನ ನಾಪತ್ತೆಯಾದ ಪತಿಗಾಗಿ ಎರಡು ಮೂರು ವರ್ಷಗಳು ಕಾಯ್ದು ಬಳಿಕ ನಿರಾಶಳಾಗಿ ನ್ಯಾಯಾಲಯಕ್ಕೆ ಬಂದಾಗ ಆಕೆಗೆ ಮತ್ತೆ ನಾಲ್ಕು ವರ್ಷಗಳ ತನಕ ಕಾಯುವಂತೆ ವಿಧಿಸುವುದು ಎಷ್ಟರ ಮಟ್ಟಿಗೆ ಸಮಂಜಸವೆನಿಸೀತು? ಇದು ಕೇವಲ ಆ ಮಹಿಳೆಯೊಬ್ಬಳ ಮಟ್ಟಿಗೆ ಮಾತ್ರ ಕಠಿಣವಲ್ಲ ಬದಲಾಗಿ ಇದರ ದುಷ್ಪರಿಣಾಮ ಇಡೀ ಸಮಾಜಕ್ಕೆ ವ್ಯಾಪಿಸುವ ಭಯವಿದೆ. ಆದ್ದರಿಂದ ನಾಪತ್ತೆಯಾದವನ ಬಗ್ಗೆ ಮಾಲಿಕೀ ಮದ್‌ಹಬ್‌ನ ಎಲ್ಲ ಶರ್ತಗಳನ್ನು ಕಾನೂನಿನಲ್ಲಿ ಅಳವಡಿಸಬೇಕೆಂಬುದೇ ನನ್ನ ಸಲಹೆ. ನಾಪತ್ತೆಯಾದವನ ಪತ್ನಿಯ ವಯಸ್ಸು, ಆಕೆಯ ಪರಿಸರ ಮತ್ತು ನ್ಯಾಯಲಯಕ್ಕೆ ಬರುವುದಕ್ಕಿಂತ ಮುಂಚೆ ಎಷ್ಟು ಸಮಯ ಪತಿಗಾಗಿ ಕಾಯುತ್ತಿದ್ದಳು ಎಂಬಿತ್ಯಾದಿ ವಿಷಯಗಳನ್ನು ಈ ಸಂಬಂಧಿತ ಕಾನೂನಿನ ಉಪ ನಿಯಮಗಳಲ್ಲಿ ಸೇರಿಸಬೇಕು.

## 14. ನಾಪತ್ತೆಯಾದವನು ಮರಳಿದಾಗ

ಈ ಬಗ್ಗೆ ಇನ್ನೊಂದು ವಿಷಯವೂ ಗಮನರ್ಹಾವಾಗಿದೆ. ನಾಪತ್ತೆಯಾದವನು ನ್ಯಾಯಾಲಯ ವಿಧಿಸಿದ ಕಾಯುವ ಅವಧಿ ಮುಗಿದ ಬಳಿಕ ಮರಳಿ ಬಂದರೆ ಅದರ ವಿಧಿ ಏನು? ಹ. ಉಮರ್(ರ)ರವರ ತೀರ್ಪಿನ ಪ್ರಕಾರ ಮಹಿಳೆಯ ಮರುವಿವಾಹ ಆಗುವುದಕ್ಕಿಂತ ಮುಂಚೆ ಪತಿಯು ಮರಳಿದರೆ ಆಕೆಯ ಮೇಲೆ ಅವನಿಗೆ ಹಕ್ಕಿದೆ. ಆದರೆ ಆಕೆಗೆ ಮರುವಿವಾಹವಾಗಿದ್ದರೆ ದ್ವಿತೀಯ ಪತಿಯೊಂದಿಗೆ ಸಂಸರ್ಗ ಏರ್ಪಟ್ಟಿದ್ದರೂ ಏರ್ಪಡದಿದ್ದರೂ ಪ್ರಥಮ ಪತಿಗೆ ಆಕೆಯ ಮೇಲೆ ಯಾವ ಹಕ್ಕೂ ಉಳಿಯುವುದಿಲ್ಲ. ಇಮಾಮ್ ಮಾಲಿಕ್(ರ)ರವರು ತಮ್ಮ ಮುಅತ್ತಾದಲ್ಲಿ ಹ. ಉಮರ್(ರ)ರವರ ಈ ವಿಧಿಯನ್ನೇ ಪ್ರಮಾಣವೆಂದು ಅಂಗೀಕರಿಸಿರುವರು. ಇದುವೇ ಮಾಲಿಕ್ ಮದ್‌ಹಬ್‌ನ ವಿಧಿಳಾಗಿದೆ.

ಹ. ಅಲೀ(ರ)ರವರ ತೀರ್ಪಿನ ಪ್ರಕಾರ ಮಹಿಳೆಯು ಎಲ್ಲ ಸ್ಥಿತಿಗಳಲ್ಲೂ ಆತನಿಗೆ ದೊರಕುವಳು. ದ್ವಿತೀಯ ಪತಿಯೊಂದಿಗೆ ಸಂಸರ್ಗವಾಗಿದ್ದರೂ ಅದರಿಂದ ಮಕ್ಕಳು ಹುಟ್ಟಿದ್ದರೂ ಸರಿಯೆ. ಮಾತ್ರವಲ್ಲ ಸಂಸರ್ಗವೇರ್ಪಟ್ಟಿದ್ದರೆ ದ್ವಿತೀಯ ಪತಿಯಿಂದ ಆಕೆಗೆ ಮಹ್ರನ್ನೂ ಕೊಡಿಸಲಾಗುವುದು. ಹನಫೀಗಳು ಈ ಅಭಿಪ್ರಾಯವನ್ನೇ ಅಂಗೀಕರಿಸಿದ್ದಾರೆ. ಅವರ ಅಭಿಪ್ರಾಯದಂತೆ ಹ. ಉಮರ್(ರ)ರವರು ಕೂಡಾ ಕೊನೆಯಲ್ಲಿ ಹ. ಅಲೀ(ರ)ರವರ ಈ ತೀರ್ಮಾನವನ್ನೇ ಅಂಗೀಕರಿಸಿದ್ದರು. ಆದರೆ ಇಮಾಮ್ ಮಾಲಿಕ್(ರ)ರವರ ಅಭಿಪ್ರಾಯದಂತೆ ಹ. ಉಮರ್(ರ)ರವರು ತಮ್ಮ ತೀರ್ಮಾನವನ್ನು ಬದಲಿಸಿದ್ದು ಸಾಬೀತಾಗಿಲ್ಲ.

ಹ. ಉಸ್ಮಾನ್(ರ)ರವರ ತೀರ್ಪಿನಂತೆ ಮಹಿಳೆಯು ಮರುವಿವಾಹ ಮಾಡಿಕೊಂಡ ಬಳಿಕ ಪ್ರಥಮ ಪತಿಯು ಮರಳಿ ಬಂದರೆ ಆತನಿಗೆ ಆಕೆಯನ್ನು ಅಥವಾ ಆಕೆಗೆ ನೀಡಿದ ಮಹ್ರನ್ನು ಹಿಂದೆ ಪಡೆಯುವ ಆಯ್ಕೆಯನ್ನು ನೀಡಲಾಗುವುದು. ಒಂದು ವೇಳೆ ಆತನು ಮಹ್‌ರ್ ಹಿಂದೆ ಪಡೆಯುವ ಅಥವಾ ಅದನ್ನು ಕ್ಷಮಿಸಿ ಬಿಡುವ ಆಯ್ಕೆ ಮಾಡಿದರೆ ಮಹಿಳೆಯನ್ನು ದ್ವಿತೀಯ ಪತಿಯ ಬಳಿಯೇ ಇರಿಸಲಾಗುವುದು. ಒಂದು ವೇಳೆ ಅವನು ಪತ್ನಿಯನ್ನು ಮರಳಿ ಪಡೆಯುವುದನ್ನೇ ಆರಿಸಿಕೊಂಡರೆ ಮಹಿಳೆಯು ತನ್ನ ದ್ವಿತೀಯ ಪತಿಯಿಂದ ಬೇರ್ಪಟ್ಟು ತಲಾಕ್‌ನ ಇದ್ದತ್ ಕಳೆಯಬೇಕಾಗುತ್ತದೆ. ಆ ಬಳಿಕ ಆಕೆಯನ್ನು ಪ್ರಥಮ ಪತಿಯ ವಶ ಒಪ್ಪಿಸಲಾಗುವುದು. ಹಾಗೂ ದ್ವಿತೀಯ ಪತಿಯಿಂದ ಆಕೆಗೆ ಮಹ್‌ರ್ ಕೊಡಿಸಲಾಗುವುದು. ಕೆಲವು ವರದಿಗಳ ಪ್ರಕಾರ ಹ. ಉಮರ್(ರ) ಕೂಡಾ ಇಂತಹುದೇ ವಿಧಿ ನೀಡಿದರೆಂದು ಸಾಬೀತಾಗುತ್ತದೆ. ಆದರೆ ಇಮಾಮ್ ಮಾಲಿಕ್(ರ)ರವರು ಇದನ್ನು ಇಂಗೀಕರಿಸುವುದಿಲ್ಲ.

ನನ್ನ ಅಭಿಪ್ರಾಯದಂತೆ ಈ ಮೂರು ವಿಧಿಗಳ ಪೈಕಿ ಹ. ಉಮರ್(ರ)ರವರ ವಿಧಿಯೇ ಅತ್ಯುತ್ತಮವಾಗಿದೆ. ಏಕೆಂದರೆ ದ್ವಿತೀಯ ಮದುವೆಯ ಬಳಿಕವೂ ಪ್ರಥಮ ಪತಿಗೆ ಆಕೆಯ ಮೇಲೆ ಹಕ್ಕು ಇರುವುದಾದರೂ ಯಾರೂ ಆಕೆಯನ್ನು ವರಿಸಲು ಮುಂದಾಗಲಾರನೆಂಬುದು ವ್ಯಕ್ತ. ಒಂದು ವೇಳೆ ಯಾರಾದರೂ ಆಕೆಯನ್ನು ಮದುವೆಯಾದರೆ ಯಾವಾಗ ಪ್ರಥಮ ಪತಿಯು ಮರಳಿ ಬರುತ್ತಾನೋ ಎಂಬ ಭಯ ಅವನನ್ನು ಆವರಿಸಿರುವುದು. ಆತನು ಬಂದು ಬಿಟ್ಟರೆ ಮಹಿಳೆಯು ತನ್ನಿಂದ ಬೇರ್ಪಡುವುದು ಮಾತ್ರವಲ್ಲ ಆಕೆ ತಾನು ಮಹ್‌ರ್‌ನ್ನೂ ನೀಡಬೇಕಾಗುವುದು. ಮಕ್ಕಳಾಗಿದ್ದಾರೆ ಅವರ ಭವಿಷ್ಯ ಹಾಳಾಗುವುದು ಎಂಬ ಭಯ ಕೂಡಾ ಆತನನ್ನು ಆವರಿಸಿರುವುದು ಈ ರೀತಿ ಶರ್ತಗಳಿಂದ ಮಹಿಳೆಗಂತೂ ಅತ್ಯಧಿಕ ಸಂಕಷ್ಟ ಉಂಟಾಗುತ್ತದೆ. ಒಂದು ದೀರ್ಘಾವಧಿಯ ತನಕ ಬೇಸರ ಬರುವಷ್ಟು ಕಾದ ಬಳಿಕವೂ ಆಕೆ ಸಂಕಷ್ಟ ದೂರವಾಗುವುದಿಲ್ಲ. ನ್ಯಾಯಾಲಯದಿಂದ ವಿಮುಕ್ತಿಯ ಪರವಾನಗಿ ದೊರೆತ ಬಳಿಕವೂ ಆಕೆಯ ಕಾಲಿಗೆ ಒಂದು ಸಂಕೋಲೆ ಬಿಗಿದಿರುತ್ತದೆ. ಪೂರ್ಣ ಆಯುಷ್ಯವನ್ನು ಆಕೆ ಇಂತಹ ತ್ರಿಶಂಕು ಸ್ಥಿತಿಯಲ್ಲೇ ಕಳೆಯಬೇಕಾಗುತ್ತ.

## 15. 'ಲಿಆನ್' (ಅಭಿಶಪನ)

ಪತಿಯು ತನ್ನ ಪತ್ನಿಯ ಮೇಲೆ ಸ್ಪಷ್ಟ ಶಬ್ದಗಳಲ್ಲಿ ವ್ಯಭಿಚಾರದ ಆರೋಪ ಹೊರಿಸಿದರೆ ಅಥವಾ ಮಕ್ಕಳ ಬಗ್ಗೆ, ಅವು ತನ್ನದಲ್ಲವೆಂದು ಹೇಳಿದರೆ ಲಿಆನ್ ಕಡ್ಡಾಯವಾಗುತ್ತದೆ. ಪ್ರವಾದಿ(ಸ)ರವರ ಮುಂದೆ ಇಂತಹ ಒಂದು ಪ್ರಕರಣ ಬಂದಾಗ ಅವರು ಇಬ್ಬರನ್ನೂ ಸಂಬೋಧಿಸಿ: "ನಿಮ್ಮ ಪೈಕಿ ಒಬ್ಬರು ಸುಳ್ಳು ಹೇಳುತ್ತಿದ್ದಾರೆಂಬುದು ಅಲ್ಲಾಹನಿಗೆ ಚೆನ್ನಾಗಿ ಗೊತ್ತು. ಆದ್ದರಿಂದ ನಿಮ್ಮ ಪೈಕಿ ಯಾರಾದರೂ ಪಶ್ಚಾತ್ತಾಪ ಪಡುವರೇ?" ಎಂದು ಮೂರು ಸಲ ಕೇಳಿದರು. ಇಬ್ಬರೂ ಪಶ್ಚಾತ್ತಾಪಕ್ಕೆ ನಿರಾಕರಿಸಿದಾಗ ಪ್ರವಾದಿ(ಸ) ಪವಿತ್ರ ಕುರ್‌ಆನ್‌ನ ಆದೇಶದಂತೆ ಮೊದಲು ಪತಿಯಿಂದ ತಾನು ಹೊರಿಸಿರುವ ಆರೋಪ ಸರಿ ಎಂದು ನಾಲ್ಕು ಬಾರಿ ಆಣೆ ಹಾಕಿಸಿದರು ಮತ್ತು ಐದನೇ ಸಲ ತನ್ನ ಆರೋಪವು ಸುಳ್ಳಾಗಿದ್ದರೆ ತನ್ನ ಮೇಲೆ

ದೇವಶಾಪವಿರಲಿ ಎಂದೂ ಹೇಳಿಸಿದರು. ತರುವಾಯ ಇದೇ ರೀತಿ ಪತ್ನಿಯಿಂದ ತನ್ನ ಮೇಲೆ ಹೊರಿಸಲಾದ ಆರೋಪವು ಸುಳ್ಳೆಂದು ನಾಲ್ಕು ಸಲ ಆಣೆ ಹಾಕಿಸಿದರು ಮತ್ತು ಐದನೇ ಸಲ, ಆ ಆರೋಪವು ಸರಿಯಾಗಿದ್ದರೆ ತನ್ನ ಮೇಲೆ ದೇವಶಾಪವಿರಲಿ ಎಂದು ಹೇಳಿಸಿದರು. ಅನಂತರ ಪ್ರವಾದಿ(ಸ), "ಇದು ಆರೋಪ ಹೊರಿಸುವ ದಂಪತಿಗಳನ್ನು ನಿರ್ಣಾಯಕ ದಿನದ ತನಕ ಪರಸ್ಪರರಿಂದ ಬೇರ್ಪಡಿಸುವ ವಿಧಾನವಾಗಿದೆ. ಈ ವಿಚ್ಛೇದನದ ಬಳಿಕ ಅವರು ಎಂದೂ ಒಟ್ಟುಗೂಡುವುದು ಅಸಾಧ್ಯ" ಎಂದು ಹೇಳಿದರು. ಆ ಬಳಿಕ ಪತಿಯು, ತಾನು ಆಕೆಗೆ ನೀಡಿರುವ ಮಹ್ರನ್ನು ಮರಳಿ ಕೊಡಿಸಬೇಕೆಂದು ಭಿನ್ನವಿಸಿದನು. ಆಗ ಪ್ರವಾದಿ(ಸ) ಹೇಳಿದರು: ಆ ಹಣ ನಿನಗೆ ದೊರಕಲಾರದು. ಒಂದು ವೇಳೆ ನಿನ್ನ ಆರೋಪ ಸರಿಯಾಗಿದ್ದರೆ ಆ ಹಣವು ನೀನು ಆಕೆಯಿಂದ ಸಂಸರ್ಗ ಸುಖ ಪಡೆದುದರ ಪ್ರತಿಫಲವಾಗಿದೆ. ಒಂದು ವೇಳೆ ನೀನು ಆಕೆಯ ಮೇಲೆ ಸುಳ್ಳಾರೋಪ ಹೊರಿಸಿದ್ದರೆ ಆ ಹಣವನ್ನು ಮರಳಿ ಪಡೆಯುವ ಹಕ್ಕು ನಿನ್ನಂದ ಮತ್ತಷ್ಟು ದೂರವಾಗಿ ಬಿಟ್ಟಿದೆ."

ಪ್ರವಾದಿ(ಸ)ರವರ ಈ ತೀರ್ಪಿನಿಂದ ಕೆಲವು ವಿಧಿಗಳು ಹೊರಡುತ್ತವೆ:

1) ಲಿಆನ್ ಕಾಝಿಯ ಮುಂದೆ ನಡೆಯಬೇಕು. ಪತಿ-ಪತ್ನಿಯರು ತಮ್ಮೊಳಗೆ ಅಥವಾ ತಮ್ಮ ಸಂಬಂಧಿಕರ ಮುಂದೆ ಮಾಡಬಾರದು. ಒಂದು ವೇಳೆ ಹಾಗೆ ಮಾಡಿದರೂ ಅದರಿಂದ ಬೇರ್ಪಡೆ ಉಂಟಾಗುವುದಿಲ್ಲ.

2) ಲಿಆನ್ ಮಾಡುವುದಕ್ಕೆ ಮುಂಚೆ ಕಾಝಿಯು ಪತಿ-ಪತ್ನಿಯರಿಬ್ಬರಿಗೂ ತಮ್ಮ ತಪ್ಪನ್ನು ಒಪ್ಪಿಕೊಳ್ಳುವ ಅವಕಾಶ ನೀಡಬೇಕು. ಇಬ್ಬರೂ ತಂತಮ್ಮ ಮಾತಿನ ಮೇಲೆ ಪಟ್ಟು ಹಿಡಿದಾಗ ಮಾತ್ರ ಲಿಆನ್ ಮಾಡಿಸಬೇಕು.

3) ಪತಿ-ಪತ್ನಿಯರ ಮಧ್ಯೆ ಲಿಆನ್ ಕರ್ಮವು ಪೂರ್ತಿಗೊಂಡ ಬಳಿಕ ಕಾಝಿಯವರು ಅವರ ಮಧ್ಯೆ ವಿಚ್ಛೇದನವಾಗಿದೆ ಎಂದು ಘೋಷಿಸಬೇಕು. ಲಿಆನ್‌ನಿಂದ ತನ್ನಿಂತಾನೆ ವಿಚ್ಛೆದನ ಏರ್ಪಡುತ್ತದೆಂಬುದು ಬಹುಸಂಖ್ಯಾತ ಕರ್ಮಶಾಸ್ತ್ರಜ್ಞರ ಅಭಿಪ್ರಾಯ. ಆದರೆ ಇಮಾಮ್ ಅಬೂ ಹನೀಫಾ(ರ)ರವರ ಪ್ರಕಾರ ವಿಚ್ಛೇದನಕ್ಕೆ ಕಾಝಿಯ ಆಜ್ಞೆ ಅಗತ್ಯ. ಈ ವಿಷಯದಲ್ಲಿ ನಮಗೆ ಸಿಕ್ಕಿರುವ ಎಲ್ಲ ಪ್ರಾಮಾಣಿಕ ಹದೀಸ್‌ಗಳು ಇಮಾಮ್ ಅಬೂ ಹನೀಫಾ(ರ)ರವರ ಅಭಿಪ್ರಾಯವನ್ನು ಬೆಂಬಲಿಸುತ್ತವೆ. ಏಕೆಂದರೆ ಇಂತಹ ಪ್ರಕರಣಗಳಲ್ಲೆಲ್ಲಾ ಲಿಆನ್ ಕರ್ಮವು ಪೂರ್ಣಗೊಂಡ ಬಳಿಕ ಪ್ರವಾದಿ(ಸ) ವಿಚ್ಛೇದನದ ಘೋಷಣೆ ಮಾಡಿರುವರು. ಇದರಿಂದ ಕೇವಲ ಲಿಆನ್‌ನ ಕರ್ಮವು ವಿಚ್ಛೇದನಕ್ಕೆ ಪರ್ಯಾಪ್ತವಾಗುವುದಿಲ್ಲವೆಂದು ಪ್ರವಾದಿ(ಸ) ಭಾವಿಸಿರುವುದಾಗಿ ತಿಳಿಯುತ್ತದೆ.

4) ಲಿಆನ್‌ನಿಂದ ಆಗುವ ವಿಚ್ಛೇದನವು ಶಾಶ್ವತವಾಗಿದೆ. ಆ ಬಳಿಕ ಅವರಿಬ್ಬರೂ ಪರಸ್ಪರ ವಿವಾಹ ಮಾಡಿಕೊಳ್ಳ ಬಯಸಿದರೆ ಯಾವ ರೀತಿಯಲ್ಲೂ ಅವರು ಹಾಗೆ ಮಾಡುವಂತಿಲ್ಲ. ಪವಿತ್ರ ಕುರ್‌ಆನ್ ತಲಾಕ್ ಆದ ದಂಪತಿಗಳ ಮಧ್ಯೆ ಮರುವಿವಾಹಕ್ಕೆ ಸೂಚಿಸಿರುವ ವಿಧಿಯಾದ "ಆಕೆ ಇನ್ನೊಬ್ಬನನ್ನು ವರಿಸುವ ತನಕ" ಎಂಬ ನಿಯಮವೂ ಲಿಆನ್‌ಗೆ ಅನ್ವಯವಾಗುವುದಿಲ್ಲ.

5) ಲಿಆನ್‌ನಿಂದ ಮಹ್ರನ್ನು ಅನೂರ್ಜಿತಗೊಳ್ಳುವುದಿಲ್ಲ. ಪತಿಯ ಆರೋಪವು ಸರಿಯಾಗಿದ್ದರೂ ತಪ್ಪಾಗಿದ್ದರೂ ಆಕೆಯ ಮಹ್ರನ್ನು ನೀಡಲೇ ಬೇಕಾಗುತ್ತದೆ. ಒಂದು ವೇಳೆ ಆತನು ಈಗಾಗಲೇ ನೀಡಿದ್ದರೆ ಅದನ್ನು ಮರಳಿ ಪಡೆಯುವ ಹಕ್ಕು ಕೂಡಾ ಆತನಿಗೆ ಇರುವುದಿಲ್ಲ.

ಒಂದು ವೇಳೆ ಪತ್ನಿಯ ಮೇಲೆ ಆರೋಪ ಹೊರಿಸಿದ ಬಳಿಕ ಪತಿಯು ಲಿಆನ್ ಮಾಡಲು ನಿರಾಕರಿಸಿದರೆ ಬಹುಸಂಖ್ಯಾತ ಕರ್ಮಶಾಸ್ತ್ರಜ್ಞರ ಅಭಿಪ್ರಾಯದಂತೆ ಆತನ ಮೇಲೆ, ಸುಳ್ಳಾರೋಪ ಹೊರಿಸಿದ್ದಕ್ಕಿರುವ ಶಿಕ್ಷೆಯನ್ನು ಜಾರಿಗೊಳಿಸಲಾಗುವುದು. ಇಮಾಮ್ ಅಬೂ ಹನೀಫಾ(ರ)ರವರ ಅಭಿಪ್ರಾಯದಂತೆ ಆತನಿಗೆ ಸೆರೆವಾಸ ವಿಧಿಸಲಾಗುವುದು. ಪತಿಯು ಲಿಆನ್ ಮಾಡಿದ ಬಳಿಕ ಪತ್ನಿಯು ಲಿಆನ್ ಮಾಡಲು ನಿರಾಕರಿಸಿದರೆ ಇಮಾಮ್ ಶಾಫಿಈ, ಮಾಲಿಕ್ ಮತ್ತು ಅಹ್ಮದ್(ರ)ರವರ ಅಭಿಪ್ರಾಯದಂತೆ ಆಕೆಯನ್ನು ಕಲ್ಲೇಟಿನಿಂದ ಸಾಯಿಸಬೇಕು. ಇಮಾಮ್ ಅಬೂಹನೀಫಾ(ರ)ರವರ ಅಭಿಪ್ರಾಯದಂತೆ ಆಕೆಗೆ ಸೆರೆವಾಸ ವಿಧಿಸಬೇಕು. ಈ ವಿಷಯದಲ್ಲಿ ಇಮಾಮ್ ಅಬೂ ಹನೀಫಾ(ರ)ರವರ ಅಭಿಪ್ರಾಯವು ಹೆಚ್ಚು ಸೂಕ್ತವೂ ಯುಕ್ತಿಪೂರ್ಣವೂ ಆಗಿದೆ. ಆದರೆ ಭಾರತದ ಪ್ರಸಕ್ತ ಪರಿಸ್ಥಿತಿಯಲ್ಲಿ ಲಿಆನ್ ಮಾಡುವುದಕ್ಕೆ ನಿರಾಕರಿಸುವುದನ್ನು ದಂಡನಾರ್ಹ ಅಪರಾಧವೆಂದು ಘೋಷಿಸಲು ಅವಕಾಶವಿಲ್ಲ. ಆದ್ದರಿಂದ ಸದ್ಯಕ್ಕೆ ಶರೀಅತ್ ವಿಧಿ ಪ್ರಕಾರ ಅದರ ಸೂಕ್ತ ವಿಧಾನವೇನೆಂದರೆ ಪುರುಷನು ಲಿಆನ್ ಮಾಡುವುದಕ್ಕೆ ನಿರಾಕರಿಸಿದರೆ ಪತ್ನಿಗೆ ಆತನ ವಿರುದ್ಧ ಮಾನನಷ್ಟದ ದಾವೆ ಹೂಡುವ ಅಧಿಕಾರ ನೀಡಬೇಕು. ಒಂದು ವೇಳೆ ಪತ್ನಿಯು ನಿರಾಕರಿಸಿದರೆ ಆಕೆಗೆ ಮಹ್‌ರ್ ನೀಡಬಾರದು. ಆದರೆ ಇದು ನಮ್ಮ ಮೇಲೆ ಒಂದು ಇಸ್ಲಾಮೇತರ ಸರಕಾರವಿರುವ ಮತ್ತು ನಾವು ನಮ್ಮ ದಂಡಸಂಹಿತೆಯನ್ನು ಜಾರಿಗೊಳಿಸಲು ಅಸಮರ್ಥರಾಗಿರುವ ತನಕ ಮಾತ್ರ ಜಾರಿಯಲ್ಲಿರಬೇಕಾದ ವಿಧಿಯಾಗಿದೆ.

## ಒಮ್ಮೆಗೇ ಮೂರು ತಲಾಕ್ ನೀಡುವುದು

ಒಮ್ಮೆಗೇ ಮೂರು ತಲಾಕ್ ನೀಡಿ ಪತ್ನಿಯನ್ನು ವಿಚ್ಛೇದಿಸುವುದು, ಸುಸ್ಪಷ್ಟ ಪ್ರಮಾಣಗಳ ಆಧಾರದಲ್ಲಿ ಅಪರಾಧವಾಗಿದೆ. ಸಮುದಾಯದ ವಿದ್ವಾಂಸರ ಮಧ್ಯೆ ಈ ರೀತಿ ನೀಡಲ್ಪಟ್ಟ ಮೂರು ತಲಾಕ್‌ಗಳನ್ನು ಒಂದೇ ತಲಾಕ್ ಎಂದು ಪರಿಗಣಿಸಬೇಕೇ? ಅಥವಾ ಮೂರು ತಲಾಕ್ ಎಂದು ಪರಿಗಣಿಸಬೇಕೇ? ಎಂಬ ಬಗ್ಗೆ ಭಿನ್ನಾಭಿಪ್ರಾಯವಿದೆ. ಆದರೆ ಈ ಕ್ರಮವು ಬಿದ್‌ಅತ್ ಮತ್ತು ಅಪರಾಧ ಎಂಬ ಬಗ್ಗೆ ಅವರಲ್ಲಿ ಭಿನ್ನಾಭಿಪ್ರಾಯವಿಲ್ಲ. ಈ ಕ್ರಮವು ಅಲ್ಲಾಹ್ ಮತ್ತು ಪ್ರವಾದಿ(ಸ) ತಲಾಕ್‌ಗೆ ನಿಶ್ಚಯಿಸಿರುವ ಕ್ರಮಕ್ಕೆ ವ್ಯತಿರಿಕ್ತವಾಗಿದೆ. ಅವರೆಲ್ಲರ ಅಭಿಪ್ರಾಯದಂತೆ ಇದರಿಂದ ಶರೀಅತ್‌ನ ಅನೇಕ ಪ್ರಾಮುಖ್ಯ ಉದ್ದೇಶಗಳು ವಿಫಲಗೊಳ್ಳುತ್ತವೆ. ಹದೀಸ್‌ನಲ್ಲಿ ಈ ರೀತಿ ವರದಿಯಾಗಿದೆ; ಒಮ್ಮೆ ಒಬ್ಬ ವ್ಯಕ್ತಿ ತನ್ನ ಪತ್ನಿಗೆ ಮೂರು ತಲಾಕ್ ನೀಡಿದನು. ವಿಷಯ ತಿಳಿದಾಗ ಪ್ರವಾದಿ(ಸ) ಕುಪಿತರಾಗಿ ಎದ್ದು ನಿಂತು ಈ ರೀತಿ ಕೇಳಿದರು: "ನಾನಿನ್ನೂ ನಿಮ್ಮ ಮಧ್ಯೆ ಇರುವಾಗಲೇ ಅಲ್ಲಾಹನ ಗ್ರಂಥದೊಂದಿಗೆ ಚೆಲ್ಲಾಟವಾಡಲಾಗುತ್ತಿದೆಯೇ?" ಇನ್ನು ಕೆಲವು ವರದಿಗಳ ಪ್ರಕಾರ ಪ್ರವಾದಿ(ಸ) ಈ ಕ್ರಮವನ್ನು ಅಪರಾಧವೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಹ. ಉಮರ್(ರ) ಅವರಂತೂ ಒಮ್ಮೆಗೆ ಮೂರು

ತಲಾಕ್ ನೀಡಿದ ಯಾರಾದರೂ ತಮ್ಮ ಬಳಿ ಬಂದಾಗ ಅವರು ಆತನಿಗೆ ಛಡಿಯೇಟು ನೀಡುತ್ತಿದ್ದರೆಂದೂ ಕೆಲವು ವರದಿಗಳಲ್ಲಿ ತಿಳಿಸಲಾಗಿದೆ. ಇದರಿಂದ ವ್ಯಕ್ತವಾಗುವಂತೆ ಈ ಕೃತ್ಯಕ್ಕೆ ಶಿಕ್ಷೆಯನ್ನೂ ನೀಡಬಹುದಾಗಿದೆ.

ನಮ್ಮ ಕಾಲದಲ್ಲಿ ಜನರು ಉದ್ರೇಕಗೊಂಡು ತಮ್ಮ ಪತ್ನಿಯರಿಗೆ ಒಮ್ಮೆಲೇ ಮೂರು ತಲಾಕ್ ನೀಡಿ ಬಿಡುವುದು ಮತ್ತು ಆ ಬಳಿಕ ಪಶ್ಚಾತ್ತಾಪ ಪಟ್ಟು ಅದರ ಪರಿಹಾರೋಪಾಯ ಹುಡುಕುತ್ತಾ ಅಲೆಯುವುದು ಸಾಮಾನ್ಯ ಪಿಡುಗಾಗಿದೆ. ಈ ಪೈಕಿ ಕೆಲವರು ಸುಳ್ಳು ಆಣೆಹಾಕಿ ತಲಾಕ್ ನೀಡಿದುದನ್ನು ನಿರಾಕರಿಸುತ್ತಾರೆ. ಇನ್ನು ಕೆಲವರು 'ಹಲಾಲ' ಮಾಡುವ ಪ್ರಯತ್ನ ಮಾಡುತ್ತಾರೆ. ಮತ್ತೆ ಕೆಲವರು ತಮ್ಮ ತಲಾಕನ್ನು ಬಹಿರಂಗಪಡಿಸದೆ ಪತ್ನಿಯೊಂದಿಗೆ ಹಿಂದಿನಂತೆ ದಾಂಪತ್ಯ ಜೀವನ ಮುಂದುವರಿಸುತ್ತಾರೆ. ಈ ರೀತಿ ಒಂದು ಪಾಪದ ಪರಿಣಾಮದಿಂದ ರಕ್ಷಣೆ ಹೊಂದುವ ಸಲುವಾಗಿ ಇತರ ಅನೇಕ ಪಾಪಗಳನ್ನು ಎಸಗುತ್ತಾರೆ. ಆದ್ದರಿಂದ ಒಂದೇ ಬಾರಿಗೆ ಮೂರು ತಲಾಕ್ ನೀಡಿ ಪತ್ನಿಯನ್ನು ಬೇರ್ಪಡಿಸಿ ಬಿಡುವ ಪದ್ಧತಿಯನ್ನು ಕೊನೆಗಾಣಿಸುವ ಸಲುವಾಗಿ, ಜನರು ಈ ರೀತಿ ಮಾಡದಂತೆ ತಡೆಯುವಂತಹ ಕೆಲವು ನಿಬಂಧನೆಗಳನ್ನು ಹೇರಬೇಕಾದುದು ಅಗತ್ಯ. ಉದಾ: ಮೂರು ತಲಾಕ್ ಒಮ್ಮೆಲೇ ನೀಡಲ್ಪಟ್ಟ ಸ್ತ್ರೀಗೆ ಕೋರ್ಟಿನಲ್ಲಿ ಪರಿಹಾರಕ್ಕಾಗಿ ದಾವೆ ಹೂಡುವ ಹಕ್ಕು ನೀಡುವುದು. ಪರಿಹಾರ ಧನವನ್ನು ಕನಿಷ್ಟ ಪಕ್ಷ ಮಹ್‌ರ್‌ನ ಅರ್ಧಾಂಶದಷ್ಟು ಎಂದು ನಿಗದಿಪಡಿಸುವುದು. ಅದಲ್ಲದೆ ಇದನ್ನು ತಡೆಯುವ ಬೇರೆ ಉಪಾಯಗಳೂ ಇರಬಹುದು. ನಮ್ಮ ವಿದ್ವಾಂಸರು ಮತ್ತು ಕಾನೂನು ತಜ್ಞರು ಸಮಾಲೋಚನೆಯ ಬಳಿಕ ತಮ್ಮ ಸಲಹೆಯನ್ನು ಮಂಡಿಸಬಹುದಾಗಿದೆ. ಜನರು ತಿಳಿಯದೇ ಇಂತಹ ಕೃತ್ಯವನ್ನು ಎಸಗದಂತೆ ತಡೆಯುವ ಸಲುವಾಗಿ ಈ ಬಗ್ಗೆ ಜನರಿಗೆ ಮಾಹಿತಿ ನೀಡುವ ವ್ಯಾಪಕ ಪ್ರಯತ್ನವೂ ನಡೆಯಬೇಕಾಗಿದೆ.

## ಉಪಸಂಹಾರ

ಈ ಪುಸ್ತಕದಲ್ಲಿ ದಾಂಪತ್ಯದ ಇಸ್ಲಾಮೀ ಕಾನೂನಿನ ಉದ್ದೇಶ ಮತ್ತು ತತ್ವಗಳನ್ನು ವಿವರವಾಗಿ ಪ್ರತಿಪಾದಿಸಲಾಗಿದೆ. ಅಲ್ಲದೆ ಇಂದು ಭಾರತೀಯ ಮುಸಲ್ಮಾನರಿಗೆ ಕ್ಲಿಷ್ಟತೆ ಹಾಗೂ ಗೊಂದಲಗಳನ್ನು ಉಂಟು ಮಾಡುವ ಸಮಸ್ಯೆಗಳನ್ನು ಪವಿತ್ರ ಕುರ್‌ಆನ್ ಮತ್ತು ಪ್ರವಾದಿಚರ್ಯೆಯ ಶಿಕ್ಷಣಗಳ ಆಧಾರದಲ್ಲಿ ಪರಿಹರಿಸುವ ಪ್ರಯತ್ನವನ್ನೂ ಇದರಲ್ಲಿ ಮಾಡಲಾಗಿದೆ. ಇಸ್ಲಾಮೀ ಕಾನೂನಿನ ಕುರಿತು ನಾವು ತಿಳಿದುಕೊಂಡಿರುವುದೆಲ್ಲವೂ ಅಕ್ಷರಶಃ ಸರಿಯಾಗಿಯೇ ಇದೆ ಎಂದು ನಾವು ವಾದಿಸುವುದಿಲ್ಲ. ಹಾಗೆಯೇ ವಿವಿಧ ಸಮಸ್ಯೆಗಳ ಪರಿಹಾರಕ್ಕೆ ನಾವು ಸೂಚಿಸಿರುವ ಉಪಾಯಗಳನ್ನೇ ಸಮಗ್ರವಾಗಿ ಸ್ವೀಕರಿಸಬೇಕೆಂದೂ ನಾವು ಪಟ್ಟು ಹಿಡಿಯುವುದಿಲ್ಲ. ಮನುಷ್ಯನ ಅಭಿಪ್ರಾಯದಲ್ಲಿ ತಪ್ಪು ಒಪ್ಪುಗಳ ಸಂಭವ ಇದ್ದೇ ಇರುತ್ತದೆ. ಯಾವನೇ ಮನುಷ್ಯನ ಅಭಿಪ್ರಾಯದ ಕುರಿತು ಅದು ಕುಂದು ರಹಿತವೆಂದೂ ದೇವವಾಣಿಯಂತೆ ಅನುಸರಣಾರ್ಹವೆಂದೂ ವಾದಿಸಲಾಗದು. ಪವಿತ್ರ ಕುರ್‌ಆನ್ ಮತ್ತು ಪ್ರವಾದಿಚರ್ಯೆಯಿಂದ ದಾಂಪತ್ಯದ ಇಸ್ಲಾಮೀ ಕಾನೂನಿನ ಕುರಿತು ನಾವು ಗ್ರಹಿಸಿದ ತತ್ವಗಳನ್ನು ವಿವರಿಸುವುದು ಮತ್ತು

ಈ ತತ್ವಗಳ ಆಧಾರದಲ್ಲಿ ಸಹಾಬಿವರ್ಯರು ಮತ್ತು ಇಮಾಮರುಗಳು ಗ್ರಹಿಸಿಕೊಂಡ ಉಪವಿಧಿಗಳನ್ನು ಪರಿಶೀಲಿಸಿ ಅವುಗಳ ಪೈಕಿ ನಮ್ಮ ಕಾಲದ ಬೇಡಿಕೆಗಳ ದೃಷ್ಟಿಯಿಂದ ಸೂಕ್ತ ಹಾಗೂ ಉಪಯುಕ್ತವೆಂದು ನಮಗೆ ಅನಿಸಿದಂತಹ ವಿಧಿಗಳನ್ನು ಎತ್ತಿ ತೋರಿಸುವುದೇ ಈ ನಮ್ಮ ದೀರ್ಘ ಚರ್ಚೆ ಮತ್ತು ಸಂಶೋಧನೆಯ ಉದ್ದೇಶವಾಗಿತ್ತು. ಇನ್ನು ನಮ್ಮ ಈ ವಿಚಾರಗಳ ಕುರಿತು ಕುರ್‌ಆನ್ ಮತ್ತು ಪ್ರವಾದಿಚರ್ಯೆಯ ಆಧಾರದಲ್ಲಿ ವಿಶಾಲ ದೃಷ್ಟಿಕೋನದಿಂದ ಚಿಂತಿಸುವುದು ಪಂಡಿತರ ಮತ್ತು ವಿಚಾರವಂತರ ಹೊಣೆಯಾಗಿದೆ. ಇವುಗಳಲ್ಲಿ ಯಾವುದಾದರೂ ಕುಂದುಕೊರತೆ ಕಂಡುಬಂದರೆ ಅದನ್ನು ತಿದ್ದುವುದು ಅವರಿಗೆ ಬಿಟ್ಟ ವಿಷಯ. ಇನ್ನು ಇವುಗಳಲ್ಲಿ ಯಾವುದಾದರೂ ಉತ್ತಮ ಅಂಶ ಕಂಡು ಬಂದರೆ ಬರೆಯುವವನು ದುರದೃಷ್ಟವಶಾತ್ 4ನೇ ಶತಮಾನದ ಬದಲು 14ನೇ ಶತಮಾನದಲ್ಲಿ ಹುಟ್ಟಿ ಬಂದವನು ಎಂಬ ಒಂದೇ ಕಾರಣಕ್ಕಾಗಿ ಅವರು ಅದನ್ನು ತಳ್ಳಿ ಹಾಕಬಾರದು.

ಕೊನೆಯದಾಗಿ ಹೈದರಾಬಾದ್ ಮತ್ತು ಬ್ರಿಟಿಷ್ ಇಂಡಿಯಾಗೆ ಸೇರಿದ ಕೆಲವು ವಿದ್ವಾಂಸರು ಸಿದ್ಧಪಡಿಸಿದ ಕಾನೂನುಗಳ ಕುರಿತೂ ನಮ್ಮ ಅಭಿಪ್ರಾಯವನ್ನು ಸಂಕ್ಷಿಪ್ತದಲ್ಲಿ ವಿವರಿಸಬಯಸುತ್ತೇವೆ.* ನಮ್ಮ ಅಭಿಪ್ರಾಯದಂತೆ ಈ ಎಲ್ಲ ಕಾನೂನುಗಳು ಅಪೂರ್ಣವಾಗಿವೆ. ಕಾಲದ ಬೇಡಿಕೆಗಳನ್ನೂ ಅವು ಪೂರೈಸುವುದಿಲ್ಲ. ಇಂತಹ ಸಂಕ್ಷಿಪ್ತ ಮಸೂದೆಗಳಿಂದ'ಆಂಗ್ಲೋ ಮುಹಮ್ಮಡನ್ ಲಾ'ದಲ್ಲಿರುವ ದೋಷ ಮತ್ತು ಮುಸ್ಲಿಮೇತರ ನ್ಯಾಯಾಲಯಗಳ ಒಂದು ಶತಮಾನದ ತೀರ್ಪುಗಳು ಮತ್ತು ಪ್ರಸಕ್ತ ನ್ಯಾಯಾಲಯ ವ್ಯವಸ್ಥೆಯ ಕಾರ್ಯ ವಿಧಾನದಿಂದ ಹುಟ್ಟಿಕೊಂಡ ಕೊರತೆಗಳನ್ನೂ ನೀಗಿಸಲು ಸಾಧ್ಯವಿಲ್ಲ. ನಿರ್ದಿಷ್ಟ ಕೆಲವು ವಿಷಯಗಳಲ್ಲಿ ಹನಫೀ ಫಿಕ್ಹ್‌ನ ಬದಲು ಮಾಲಿಕೀ ಫಿಕ್ಹ್ ಪ್ರಕಾರ ತೀರ್ಮಾನಿಸಲಾಗುವುದೆಂದು ನಿರ್ಧರಿಸಿದ ಮಾತ್ರಕ್ಕೆ ಅಥವಾ ಕೆಲವು ವಿಷಯಗಳಲ್ಲಿ ವಿಶದಾಂಶಗಳಿಗೆ ಸಂಕ್ಷಿಪ್ತ ವ್ಯಾಖ್ಯಾನಗಳನ್ನು ನೀಡಿದ ಮಾತ್ರಕ್ಕೆ ನ್ಯಾಯಾಧೀಶರು ಸರಿಯಾದ ತೀರ್ಮಾನ ಕೈಗೊಳ್ಳಲು ಶಕ್ತರಾಗಲಾರರು. ಏಕೆಂದರೆ ಆ ನ್ಯಾಯಾಧೀಶರಿಗೆ ಶರೀಅತ್ ಕಾನೂನುಗಳ ಬಗ್ಗೆ ಮತ್ತು ಕರ್ಮಶಾಸ್ತ್ರಗಳ ವಿಶದಾಂಶಗಳ ಬಗ್ಗೆ ಗಹನವಾದ ತಿಳುವಳಿಕೆ ಇರುವುದಿಲ್ಲ. ಮಾತ್ರವಲ್ಲ ಅವರ ಮನಸ್ಸಿನಲ್ಲೂ ಅದೇ 'ಆಂಗ್ಲೋ ಮುಹಮ್ಮಡನ್ ಲಾ'ದ ಸ್ಫೂರ್ತಿಯೇ ಬೇರೂರಿದೆ. ಈ ದುರವಸ್ಥೆಯನ್ನು ಸರಿಪಡಿಸಲು ಮತ್ತು ವಿಶೇಷವಾಗಿ ದಾಂಪತ್ಯ ವ್ಯವಹಾರಗಳನ್ನು ನಿಭಾವಿಸಲು ಈ ಕುರಿತು, ನಾವು ಈ ಪುಸ್ತಕದಲ್ಲಿ ಈ ಹಿಂದೆ ಹೇಳಿದಂತೆ ಒಂದು ಸಮಗ್ರ ನಿಯಮಾವಳಿಯನ್ನು ರೂಪಿಸಬೇಕು. ಇದು ಸುಲಭದ ಕೆಲಸವಲ್ಲ. ಇದಕ್ಕಾಗಿ ಸಮಯ ಮತ್ತು ಪರಿಶ್ರಮವನ್ನು ತೊಡಗಿಸಬೇಕಾಗುವುದು. ಇದು ಒಟ್ಟಿನಿಂದ ಆಗುವ ಕಾರ್ಯವೂ ಅಲ್ಲ. ಇದಕ್ಕೆ ಧರ್ಮಪಂಡಿತರು ಮತ್ತು ಕಾನೂನು ತಜ್ಞರ

* ಇಲ್ಲಿ ಈ ಕಾನೂನುಗಳ ವಿವರಗಳ ಕುರಿತು ಮಾತ್ರ ಚರ್ಚಿಸಲಾಗಿದೆ. ಇಸ್ಲಾಮೀ ಕಾನೂನುಗಳನ್ನು ರಚಿಸುವ ಅಧಿಕಾರ ಈ ಶಾಸನ ಸಭೆಗಳಿಗೆ ಇದೆಯೇ ಇಲ್ಲವೇ ಎಂಬುದನ್ನು ಇಲ್ಲಿ ಚರ್ಚಿಸಲಾಗಿಲ್ಲ. ಇಸ್ಲಾಮೀ ದೃಷ್ಟಿಕೋನದಿಂದ ಅವು ರಚಿಸುವ ಕಾನೂನುಗಳು ಸಂಪೂರ್ಣ ಶರೀಅತ್‌ಗೆ ಅನುಗುಣವಾಗಿದ್ದರೂ ಅವುಗಳನ್ನು ಶರೀಅತ್ ಕಾನೂನು ಎಂದು ಪರಿಗಣಿಸಲಾಗದು.

ಒಂದು ಆಯ್ದ ವಿಭಾಗವು ದೀರ್ಘಾವಧಿಯ ತನಕ ಕುಳಿತು ಕೆಲಸ ಮಾಡಬೇಕು. ಕೇವಲ ಗತಕಾಲದ ವಿದ್ವಾಂಸರ ಗ್ರಂಥಗಳಿಂದ ವಿಶದಾಂಶಗಳನ್ನು ಪದಾನುಪದವಾಗಿ ನಕಲು ಮಾಡಿದ ಮಾತ್ರಕ್ಕೆ ತಾವು ಹೊಣೆಮುಕ್ತರಾಗಲಾರೆವು ಮತ್ತು ಮುಸ್ಲಿಮ್ ಸಮುದಾಯದ ವಿದ್ವಾಂಸರೆಂಬ ನೆಲೆಯಲ್ಲಿ ಶರೀಅತ್‌ನ ಉದ್ದೇಶಗಳು ಪೂರ್ತಿಯಾಗುವಂತೆ ಮತ್ತು ಮುಸ್ಲಿಮರ ಧರ್ಮ, ಚಾರಿತ್ರ್ಯ ಹಾಗೂ ವ್ಯವಹಾರಗಳು ಸೂಕ್ತವಾಗಿ ಸಂರಕ್ಷಿಸಲ್ಪಡುವಂತೆ ಮಾಡುವುದು ತಮ್ಮ ಕರ್ತವ್ಯವಾಗಿದೆ ಎಂಬ ಪ್ರಜ್ಞೆಯೊಂದಿಗೆ ಅವರು ಕಾರ್ಯ ನಿರ್ವಹಿಸಬೇಕು.

## ಒಂದು ಮಹತ್ವಪೂರ್ಣ ಪ್ರಶ್ನಾವಳಿ

ದೆಹಲಿಯಿಂದ ಒಬ್ಬರು ನಮಗೊಂದು ಮುದ್ರಿತ ಪ್ರಶ್ನಾವಳಿಯನ್ನು ಕಳುಹಿಸಿರುವರು. ಅದರಲ್ಲಿರುವ ವಿಷಯವು ಬಹಳ ಮಹತ್ವಪೂರ್ಣವಾಗಿದೆ. ನಮ್ಮ ನಾಯಕರು ಈ ಸಮಸ್ಯೆಯನ್ನು ಶರೀಅತ್ ಬಾಹಿರ ರೀತಿಯಲ್ಲಿ ಬಗೆಹರಿಸ ಬಯಸುತ್ತಾರೆಂದು ತೋರುತ್ತದೆ. ಇದರಿಂದ ಅದರ ಮಹತ್ವವು ಇನ್ನಷ್ಟು ಹೆಚ್ಚಿದೆ. ಆ ಪ್ರಶ್ನಾವಳಿ ಮತ್ತು ಅದರ ಉತ್ತರವನ್ನು ಈ ಕೆಳಗೆ ಕೊಡಲಾಗಿದೆ:

"ಇಸ್ಲಾಮ್ ಧರ್ಮಶಾಸ್ತ್ರ ವಿದ್ವಾಂಸರು ಮತ್ತು ಶರೀಅತ್ ವಿಧಿಕರ್ತರುಗಳಿಂದ ಈ ಕೆಳಗಿನ ಪ್ರಶ್ನೆಗಳಿಗೆ ಕುರ್‌ಆನ್, ಹದೀಸ್ ಮತ್ತು ಕರ್ಮಶಾಸ್ತ್ರದ ಆಧಾರದಲ್ಲಿ ಸಮರ್ಥ ಉತ್ತರಬೇಕಾಗಿದೆ.

1. ಒಬ್ಬ ಮುಸ್ಲಿಮೇತರ ನ್ಯಾಯಾಧೀಶನು ಅಥವಾ ಪಂಚ ಅಥವಾ ಮಧ್ಯಸ್ಥಿಕೆದಾರನು ಮುಸ್ಲಿಮ್, ಸ್ತ್ರೀ-ಪುರುಷರ ವಿವಾಹವನ್ನು ಇಸ್ಲಾಮೀ ವಿಧಿಗಳಿಗನುಸಾರವಾಗಿ ಫಸ್ಕ್(ಅನೂರ್ಜಿತ)ಗೊಳಿಸಿದರೆ, ಅಥವಾ ಪುರುಷನು ಸ್ತ್ರೀಯ ಮೇಲೆ ಅಕ್ರಮ-ಅನ್ಯಾಯಗಳನ್ನು ಮಾಡಿದ್ದು ಸಾಬೀತುಗೊಂಡ ಕಾರಣದಿಂದ ಕೆಲವು ಸಂದರ್ಭಗಳಲ್ಲಿ ಮುಸ್ಲಿಮ್ ನ್ಯಾಯಾಧೀಶರಿಗೆ ಇರುವ ಅಧಿಕಾರದಂತೆ ಆ ಪುರುಷನ ವತಿಯಿಂದ ಆ ನ್ಯಾಯಾಧೀಶನೇ ಸ್ತ್ರೀಗೆ ತಲಾಕ್ ನೀಡಿದರೆ- ಆ ವಿವಾಹವು ಅನೂರ್ಜಿತಗೊಳ್ಳುವುದೇ? ಪತ್ನಿಯ ಮೇಲೆ ತಲಾಕ್ ಜಾರಿಗೊಳ್ಳುವುದೇ? ಓರ್ವ ಮುಸ್ಲಿಮೇತರ ನ್ಯಾಯಾಧೀಶನಿಂದ ಆದ ವಿಚ್ಛೇದನ ಮತ್ತು ತಲಾಕ್‌ನ ಜಾರಿಯನ್ನು ಧರ್ಮಸಮ್ಮತವೆಂದು ಬಗೆದು ಆಕೆ ಇದ್ದತ್ ಕಾಲಾನಂತರ ಅಥವಾ ಇನ್ನಾವುದೇ ಧಾರ್ಮಿಕ ವಿಧಿಯನ್ನು ಪೂರ್ತಿಗೊಳಿಸಿದ ಬಳಿಕ ಬೇರೆ ಮುಸ್ಲಿಮ್ ಪುರುಷನೊಂದಿಗೆ ವಿವಾಹ ಮಾಡಿಕೊಳ್ಳಬಹುದೇ?

2. ಮೇಲಿನ ಪ್ರಶ್ನೆಯ ಉತ್ತರವು ನಕಾರಾತ್ಮಕವಾಗಿದ್ದರೆ ಅರ್ಥಾತ್ ಮುಸ್ಲಿಮೇತರ ನ್ಯಾಯಾಧೀಶರು ವಿಧಿಸಿದ ವಿಚ್ಛೇದನ ಅಥವಾ ತಲಾಕ್‌ನ ಹೊರತಾಗಿಯೂ ಸ್ತ್ರೀಯು ಶರೀಅತ್‌ನ ದೃಷ್ಟಿಯಲ್ಲಿ ತನ್ನ ಮೊದಲ ಪತಿಯ ಪತ್ನಿಯಾಗಿಯೇ ಮುಂದುವರಿಯುತ್ತಾಳೆ ಎಂದಾದರೆ ಈ ಪರಿಸ್ಥಿತಿಯಲ್ಲಿ ಆ ಸ್ತ್ರೀಯು ಇನ್ನೊಬ್ಬ ಪುರುಷನೊಂದಿಗೆ ವಿವಾಹ ಮಾಡಿಕೊಂಡರೆ ಮತ್ತು ಆ ಪುರುಷನಿಗೂ, ಈ ಸ್ತ್ರೀಯು ಮುಸ್ಲಿಮೇತರ ನ್ಯಾಯಾಧೀಶರಿಂದ ವಿಚ್ಛೇದನ ಅಥವಾ ತಲಾಕ್

ಪಡೆದಿದ್ದಾಳೆ ಎಂಬುದು ತಿಳಿದೂ ಇದ್ದರೆ- ಆ ವಿವಾಹವು ಅಸಿಂಧುವೆನಿಸುವುದೇ? ಅಥವಾ ಇಲ್ಲವೇ? ಇನ್ನೊಬ್ಬ ಪುರುಷನ ಜೊತೆ ವಿವಾಹ ಏರ್ಪಟ್ಟ ಬಳಿಕವೂ ಆಕೆ ಆತನೊಂದಿಗೆ ದಾಂಪತ್ಯ ಸಂಪರ್ಕವಿರಿಸುವುದು ಧರ್ಮ ನಿಷಿದ್ಧವೆನಿಸುತ್ತದೆಯೇ? ಹಾಗೆ ಮಾಡಿದ ಅವರಿಬ್ಬರೂ ಧರ್ಮ ವಿಧಿಯಂತೆ ವ್ಯಭಿಚಾರಿಗಳೆನಿಸುತ್ತಾರೆಯೇ?

3. ಇನ್ನೊಬ್ಬ ಪುರುಷನೊಂದಿಗೆ ಆಕೆಯ ವಿವಾಹವು ಅಸಿಂಧುವೆಂದಾದರೆ ಅದರಿಂದ ಹುಟ್ಟುವ ಮಕ್ಕಳು ಜಾರ ಸಂತಾನವೆನಿಸುವುದಿಲ್ಲವೇ? ಅಂತಹ ಮಕ್ಕಳು ಪುರುಷನ ನಿಧನಾನಂತರ ಅವನ ಆಸ್ತಿಯ ಹಕ್ಕು ಹೊಂದುತ್ತವೆಯೇ?

ದಯವಿಟ್ಟು ಈ ಪ್ರಶ್ನೆಗಳಿಗೆ ಕ್ರಮಸಂಖ್ಯೆಯ ಪ್ರಕಾರ ಆಧಾರಸಹಿತ ಉತ್ತರ ಬರೆಯಿರಿ."

ಈ ಪ್ರಶ್ನೆಯಲ್ಲಿ ಒಂದು ಮೂಲಭೂತ ತಪ್ಪಿದೆ. ಇದರಲ್ಲಿ ಕೇವಲ ಮುಸ್ಲಿಮೇತರ ನ್ಯಾಯಾಧೀಶ, ಪಂಚ ಅಥವಾ ಮಧ್ಯಸ್ಥಿಕೆದಾರನ ಬಗ್ಗೆ ವಿಚಾರಿಸಲಾಗಿದೆ. ನಿಜವಾಗಿ ಅಲ್ಲಾಹನನ್ನು ಕಡೆಗಣಿಸಿ ಮನುಷ್ಯನು ಸ್ವಯಂ ಸ್ಥಾಪಿಸಿಕೊಂಡಿರುವ ಮತ್ತು ಮನುಷ್ಯ ನಿರ್ಮಿತ ಕಾನೂನಿನ ಮೇರೆಗೆ ನ್ಯಾಯ ತೀರ್ಮಾನ ಮಾಡುವ ನ್ಯಾಯಾಂಗ ವ್ಯವಸ್ಥೆಯನ್ನು ದೇವಶಾಸನವು ಅಂಗೀಕರಿಸುತ್ತದೆಯೇ? ಎಂದು ಪ್ರಶ್ನಿಸಬೇಕಾಗಿತ್ತು. ಅದರೊಂದಿಗೆ ಇದರಲ್ಲಿ ಇನ್ನೊಂದು ಆಂಶಿಕ ತಪ್ಪೂ ಸೇರಿಕೊಂಡಿದೆ. ಅದೇನೆಂದರೆ ಪ್ರಶ್ನೆಯನ್ನು ಕೇವಲ ವಿಚ್ಛೇದನ ಮತ್ತು ಬೇರ್ಪಡೆಯ ವಿಷಯಗಳಿಗೆ ಮಾತ್ರ ಸೀಮಿತಗೊಳಿಸಲಾಗಿದೆ. ಆದರೆ ತಾತ್ವಿಕವಾಗಿ ಈ ವಿಷಯಗಳು ಇದಕ್ಕೆ ಸಂಬಂಧಿಸಿದ ಇತರ ವಿಷಯಗಳಿಗಿಂತ ಭಿನ್ನವಾಗಿಲ್ಲ.

ಕೇವಲ ವಿವಾಹ ಮತ್ತು ತಲಾಕ್‌ನ ವಿಷಯದಲ್ಲಿಯೇ ಅಲ್ಲ; ಎಲ್ಲ ವ್ಯವಹಾರಗಳಲ್ಲೂ ಮುಸ್ಲಿಮೇತರ ನ್ಯಾಯಾಲಯದ ತೀರ್ಮಾನವು ಇಸ್ಲಾಮೀ ಶರೀಅತ್ ಪ್ರಕಾರ ಸ್ವೀಕಾರಾರ್ಹವಲ್ಲ. ಲೋಕದ ನೈಜ ಅಧಿಪತಿಯಾದ ಅಲ್ಲಾಹನ ಕಾನೂನಿನಿಂದ ವಿಮುಖರಾಗಿ ಸ್ವತಂತ್ರ ಮತ್ತು ಸಾರ್ವಭೌಮವಾಗಿ ರಚಿಸಲ್ಪಟ್ಟ ಸರಕಾರವನ್ನಾಗಲಿ ಯಾವುದಾದರೂ ಮನುಷ್ಯನು ಅಥವಾ ಮನುಷ್ಯರ ಒಂದು ಪಕ್ಷವು ಸ್ವತಂತ್ರವಾಗಿ ರಚಿಸಿದ ಕಾನೂನನ್ನಾಗಲಿ ಇಸ್ಲಾಮ್ ಅಂಗೀಕರಿಸುವುದಿಲ್ಲ. ಹಾಗೆಯೇ ದೇವ ಧಿಕ್ಕಾರಿಗಳು ಜಗತ್ತಿನ ನೈಜ ಒಡೆಯನೂ ಅಧಿಪತಿಯೂ ಆದ ಅಲ್ಲಾಹನ ಈ ಭೂಮಿಯಲ್ಲಿ ಅವನ ಅನುಮತಿ(Sanction) ಇಲ್ಲದೆ ರಚಿಸಿದಂತಹ ನ್ಯಾಯಾಲಯಗಳ ವಿಚಾರಣೆ ಮತ್ತು ತೀರ್ಮಾನದ ಹಕ್ಕನ್ನೂ ಅದು ಮನ್ನಿಸುವುದಿಲ್ಲ. ಇಸ್ಲಾಮೀ ದೃಷ್ಟಿಕೋನದಲ್ಲಿ ಇಂತಹ ನ್ಯಾಯಾಲಯಗಳಿಗೆ ಆಂಗ್ಲ ಕಾನೂನಿನ ದೃಷ್ಟಿಯಲ್ಲಿ ಬ್ರಿಟಿಷ್ ಚಕ್ರಾಧಿಪತ್ಯದೊಳಗೆ ಅದರ ಅನುಮತಿ ಇಲ್ಲದೆ ರಚಿಸಲ್ಪಟ್ಟ ನ್ಯಾಯಾಲಯಕ್ಕೆ ಇರುವ ಸ್ಥಾನವೇ ಇದೆ. ಈ ನ್ಯಾಯಾಲಯಗಳ ನ್ಯಾಯಾಧೀಶರು, ಗುಮಾಸ್ತರು ಮತ್ತು ವಕೀಲರು ಹಾಗೂ ಅವರಿಂದ ತೀರ್ಪು ಮಾಡಿಸುವವರು ಆಂಗ್ಲ ಕಾನೂನಿನ ದೃಷ್ಟಿಯಲ್ಲಿ ಬಂಡುಕೋರರು ಮತ್ತು ಶಿಕ್ಷಾರ್ಹ ಅಪರಾಧಿಗಳೆನಿಸುವಂತೆಯೇ ಇಸ್ಲಾಮೀ ಕಾನೂನಿನ ದೃಷ್ಟಿಯಲ್ಲಿ ಭೂಮಿ-ಆಕಾಶಗಳ ಅಧಿಪತಿಯ ಪರವಾನಗಿ (Charter) ಇಲ್ಲದೆ, ಅವನಿಂದ ಅಂಗೀಕೃತ ಕಾನೂನನ್ನು ಬಿಟ್ಟು ಇತರರ ಕಾನೂನಿನ ಮೇರೆಗೆ ತೀರ್ಮಾನ ಮಾಡಲು ರಚಿಸಲ್ಪಡುವ ಸಂಪೂರ್ಣ ನ್ಯಾಯಾಂಗ

ವ್ಯವಸ್ಥೆಯು ಸಾದ್ಯಂತ ಅಪರಾಧವಾಗಿದೆ. ಅದರ ನ್ಯಾಯಾಧೀಶರೂ ಗುಮಾಸ್ತರೂ ವಕೀಲರೂ ಹಾಗೂ ಅದರಲ್ಲಿ ತಮ್ಮ ವ್ಯಾಜ್ಯಗಳನ್ನು ಕೊಂಡೊಯ್ಯುವವರೂ ಅಪರಾಧಿಗಳಾಗುತ್ತಾರೆ. ಅವುಗಳ ಎಲ್ಲ ತೀರ್ಮಾನವೂ ಅಸಿಂಧುವಾಗುತ್ತದೆ. ಯಾವುದಾದರೊಂದು ವಿಷಯದಲ್ಲಿ ಆ ನ್ಯಾಯಾಂಗದ ತೀರ್ಪು ಇಸ್ಲಾಮೀ ಶರೀಅತ್‌ಗೆ ಅನುಗುಣವಾಗಿದ್ದರೂ ಮೂಲತಃ ಅದು ತಪ್ಪಾಗಿದೆ. ಏಕೆಂದರೆ ಅದರ ಬುನಾದಿಯೇ ಬಂಡಾಯದ ಮೇಲಿದೆ. ಒಂದು ವೇಳೆ ಅದು ಕಳ್ಳನಿಗೆ ಕೈ ಕತ್ತರಿಸುವ ಮತ್ತು ವ್ಯಭಿಚಾರಿಗೆ ಛಡಿಯೇಟು ಅಥವಾ ಕಲ್ಲೇಟಿನ ಶಿಕ್ಷೆ ವಿಧಿಸಿದರೂ, ಮದ್ಯಪಾನಿಗೆ ಇಸ್ಲಾಮೀ ಶಿಕ್ಷೆ ಜಾರಿಗೊಳಿಸಿದರೂ ಕೂಡಾ ಇಸ್ಲಾಮೀ ದೃಷ್ಟಿಕೋನದಿಂದ ಕಳ್ಳ, ವ್ಯಭಿಚಾರಿ ಮತ್ತು ಕುಡುಕರು ಈ ಶಿಕ್ಷೆಯ ಕಾರಣದಿಂದ ತಮ್ಮ ಅಪರಾಧದಿಂದ ಮುಕ್ತರಾಗಲಾರರು. ಇದಕ್ಕೆ ವ್ಯತಿರಿಕ್ತವಾಗಿ ಸ್ವಯಂ ಆ ನ್ಯಾಯಾಲಯಗಳು ತಮಗೆ ಅಧಿಕಾರವಿಲ್ಲದೆಯೇ ಒಬ್ಬನ ಕೈ ಕತ್ತರಿಸಿದ, ಅಥವಾ ಅವನಿಗೆ ಛಡಿಯೇಟು ಅಥವಾ ಕಲ್ಲೇಟು ಶಿಕ್ಷೆ ವಿಧಿಸಿದ ಅಪರಾಧ ಎಸಗಿದಂತಾಗುವುದು. ಏಕೆಂದರೆ ಅವರು ದೇವರ ಕಾನೂನಿನ ಪ್ರಕಾರ ತಮಗೆ ಲಭ್ಯವಿಲ್ಲದ ಅಧಿಕಾರವನ್ನು ದೇವನ ಪ್ರಜೆಗಳ ಮೇಲೆ ಉಪಯೋಗಿಸಿದಂತಾಗುವುದು.*

ಶರೀಅತ್ ಪ್ರಕಾರ ನ್ಯಾಯಾಧೀಶರ ಸ್ಥಾನದಲ್ಲಿ ಮುಸ್ಲಿಮೇತರನ ಬದಲು ಮುಸ್ಲಿಮ್ ನಾಮಧಾರಿಯು ಕುಳಿತಿದ್ದರೂ ಈ ನ್ಯಾಯಾಲಯಗಳ ಪ್ರಸ್ತುತ ಸ್ಥಿತಿಯು ಬದಲಾಗುವುದಿಲ್ಲ. ದೇವ ಧಿಕ್ಕಾರಿಯಾದ ಸರಕಾರದಿಂದ ತೀರ್ಪು ಜಾರಿಗೊಳಿಸುವ ಅಧಿಕಾರ ಪಡೆದು ಮೊಕದ್ದಮೆಗಳ ವಿಚಾರಣೆ ನಡೆಸುವವನು ಹಾಗೂ ಮಾನವ ನಿರ್ಮಿತ ಕಾನೂನಿನ ಪ್ರಕಾರ ತೀರ್ಪು ವಿಧಿಸುವವನು ಕನಿಷ್ಠ ಪಕ್ಷ ನ್ಯಾಯಾಧೀಶನೆಂಬ ನೆಲೆಯಲ್ಲಾದರೂ ಮುಸಲ್ಮಾನನಾಗಿ ಉಳಿಯುವುದಿಲ್ಲ. ಆತ ಸ್ವಯಂ ಬಂಡುಕೋರನಾಗಿರುತ್ತಾನೆ. ಹೀಗಿರುತ್ತಾ ಆತನ ತೀರ್ಮಾನಗಳು ಅಸಿಂಧುವಾಗದಿರುವುದು ಹೇಗೆ?

ಒಂದು ವೇಳೆ ಸರಕಾರವು ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಮುಸಲ್ಮಾನರು ಸಹಭಾಗಿಗಳಾಗಿದ್ದರೂ ಕಾನೂನಿನ ದೃಷ್ಟಿಯಿಂದ ಅದರ ಸ್ಥಾನವು ಮೇಲೆ ಹೇಳಿದಂತೆಯೇ ಇರುವುದು. ಮುಸಲ್ಮಾನರು ಅಲ್ಲಿ ಅಲ್ಪಸಂಖ್ಯಾತರಾಗಿರಲಿ ಬಹುಸಂಖ್ಯಾತರಾಗಿರಲಿ ಅಥವಾ ಪ್ರಜಾಸತ್ತೆ ಮತ್ತು ಧರ್ಮಬಾಹಿರ ತತ್ವಗಳ ಆಧಾರದಲ್ಲಿ ಸರಕಾರ ಸ್ಥಾಪನೆ ಮಾಡಿದ ಎಲ್ಲರೂ ಮುಸಲ್ಮಾನರಾಗಿರಲಿ ಅದರ ಕಾನೂನುಪರ ಸ್ಥಾನಮಾನವಂತೂ ಬದಲಾಗುವುದಿಲ್ಲ. ಪ್ರಜೆಗಳು

* 1945ರ ಕೊನೆಯಲ್ಲಿ ಮತ್ತು 1946ರ ಆದಿಯಲ್ಲಿ ಅಂದಿನ ಭಾರತ ಸರಕಾರವು, ಬರ್ಮಾ ಮತ್ತು ಮಲಯಾಗಳ ಮೇಲೆ ಜಪಾನಿನ ಆಕ್ರಮಣದ ವೇಳೆ 'ಆಝಾದ್ ಹಿಂದ್ ರಾಷ್ಟ್ರ' ಮತ್ತು 'ಆಝಾದ್ ಹಿಂದ್ ಸೇನೆ'ಯನ್ನು ರಚಿಸಿದ ಸೇನಾಧಿಕಾರಿಗಳ ಮೇಲೆ ನಡೆಸಿದ ಮೊಕದ್ದಮೆಗಳು ಈ ವಿಷಯದ ಮೇಲೆ ಇನ್ನಷ್ಟು ಬೆಳಕು ಚೆಲ್ಲುತ್ತವೆ. ವಿಶೇಷವಾಗಿ ಶಾಸವಾಝ್, ಸೆಹಗಲ್ ಮತ್ತು ಧಿಲ್ಲೋನ್‌ರವರ ಮೊಕದ್ದಮೆಯಲ್ಲಿ ಭಾರತದ ಅಡ್ವಕೇಟ್ ಜನರಲ್‌ರವರು ಹೂಡಿದ ವಾದವು ಗಮನವಿಟ್ಟು ಅಭ್ಯಸಿಸಲು ಯೋಗ್ಯವಾಗಿದೆ. ಯಾಕೆಂದರೆ ಅದರಲ್ಲಿ ತಥಾಕಥಿತ 'ಬಂಡುಕೋರ'ರ ವಿರುದ್ಧ ಭಾರತ ಸರಕಾರದ ಕಾನೂನುಪರ ನಿಲುವನ್ನು ಸ್ಪಷ್ಟಪಡಿಸಲಾಗಿದೆ. ವಾಸ್ತವದಲ್ಲಿ ಎಲ್ಲ ರೀತಿಯ ನೈಜ ದಂಗೆಕೋರರ ವಿರುದ್ಧ ಸರ್ವಲೋಕ ಪರಿಪಾಲಕನ ನಿಲುವೂ ಅದುವೇ ಆಗಿದೆ.

ಸ್ವಯಂ ಸಾರ್ವಭೌಮರಾಗಿದ್ದು ದೇವ ಶಾಸನದಿಂದ ಸ್ವತಂತ್ರವಾಗಿ ತಮಗಾಗಿ ತಾವೇ ಕಾನೂನನ್ನು ರಚಿಸಿಕೊಳ್ಳುವ ಅಧಿಕಾರ ಅವರಿಗೆ ಇದೆ ಎಂಬ ನಿಲುವಿನ ಬುನಾದಿಯಲ್ಲಿ ನಿರ್ಮಿತವಾದ ಸರಕಾರವು ಇಸ್ಲಾಮಿನ ದೃಷ್ಟಿಯಲ್ಲಿ ಬಂಡುಕೋರ ಸರಕಾರವೆನಿಸುತ್ತದೆ. ಒಬ್ಬ ಅರಸನ ಪ್ರಜೆಗಳು ಆತನ ವಿರುದ್ಧ ದಂಗೆ ಎದ್ದು ಆತನ ಉಪಸ್ಥಿತಿಯಲ್ಲಿ ತಮ್ಮದೇ ಆದ ಸಾರ್ವಭೌಮ ಸರಕಾರವನ್ನು ಸ್ಥಾಪಿಸಿದರೆ ಯಾವ ರೀತಿ ಆ ಅರಸನು ಆ ಸರಕಾರವನ್ನು ಅಂಗೀಕರಿಸಲಾರನೋ ಅದೇ ರೀತಿ ಇಂತಹ ಪ್ರಜಾಸತ್ತಾತ್ಮಕ ಸರಕಾರವನ್ನು ದೇವಶಾಸನವು ಅಂಗೀಕರಿಸುವುದಿಲ್ಲ. ಇಂತಹ ಪ್ರಜಾಸತ್ತಾತ್ಮಕ ಸರಕಾರದ ವತಿಯಿಂದ ಸ್ಥಾಪಿಸಲ್ಪಡುವ ನ್ಯಾಯಾಲಯಗಳು-ಅವುಗಳ ನ್ಯಾಯಾಧೀಶರು ಜನ್ಮತಃ ಮುಸಲ್ಮಾನರಾಗಿದ್ದರೂ ಮುಸ್ಲಿಮೇತರರಾಗಿದ್ದರೂ- ವಿಧಿಸುವ ತೀರ್ಮಾನಗಳು ಕೂಡಾ ಈ ಹಿಂದೆ ವಿವರಿಸಿದಂತೆ ಅಸಿಂಧುವೆಂದು ಪರಿಗಣಿಸಲ್ಪಡುವವು.

ಈ ತನಕ ವಿವರಿಸಿರುವ ವಿಷಯಗಳು ಸರಿಯೆಂಬುದು ಸಂಪೂರ್ಣ ಕುರ್‌ಆನ್ ಆಧಾರವಾಗಿದೆ. ಆದರೂ ಪ್ರಶ್ನೆ ಕೇಳುವವರು ಕುರ್‌ಆನ್ ಮತ್ತು ಹದೀಸ್‌ನಿಂದ ಆಧಾರ ಪ್ರಮಾಣ ಕೇಳಿರುವುದರಿಂದ ಕೆಲವು ಕುರ್‌ಆನ್ ಸೂಕ್ತಗಳನ್ನು ಇಲ್ಲಿ ಉದ್ಧರಿಸುತ್ತಿದ್ದೇವೆ.

1. ಕುರ್‌ಆನ್‌ನ ಪ್ರಕಾರ ಲೋಕದ ನೈಜ ಒಡೆಯ ಅಲ್ಲಾಹನಾಗಿರುವನು. ಸೃಷ್ಟಿ ಅವನದೇ, ಆದ್ದರಿಂದ ಸಹಜವಾಗಿಯೇ ಆಧಿಪತ್ಯದ ಅಧಿಕಾರ (Right to Rule) ಕೂಡಾ ಅವನಿಗೇ ಸಲ್ಲುತ್ತದೆ. ಅವನ ಸಾಮ್ರಾಜ್ಯ (Dominion)ದಲ್ಲಿ ಅವನ ಹೊರತು ಇತರರ ಆಜ್ಞೆ ಜಾರಿಗೊಳ್ಳುವುದು ಮೂಲತಃ ತಪ್ಪು.*

**"ಹೇಳಿರಿ- ಓ ಅಲ್ಲಾಹ್, ಸಕಲ ವಿಶ್ವಾಧಿಪತ್ಯದ ಒಡೆಯನೇ, ನೀನು ನಿನಗಿಷ್ಟ ಬಂದವರಿಗೆ ರಾಜ್ಯಾಧಿಕಾರ ನೀಡುವೆ..." (ಆಲಿ ಇಮ್ರಾನ್ : 26)**

**"...ಅಲ್ಲಾಹನೇ ನಿಮ್ಮ ಪ್ರಭು. ಸಾರ್ವಭೌಮತೆ ಅವನದೇ ಆಗಿರುತ್ತದೆ..." (ಅಲ್‌ಫಾತಿರ್ : 13)**

**"...ಅವನ ಪ್ರಭುತ್ವದಲ್ಲಿ ಯಾರೂ ಸಹಭಾಗಿಯಿಲ್ಲ..." (ಬನೀ ಇಸ್ರಾಈಲ್ : 111)**

**"...ಈಗ ತೀರ್ಮಾನವು ಅತ್ಯುನ್ನತನೂ ಮಹಾನನೂ ಆದ ಅಲ್ಲಾಹನ ಕೈಯಲ್ಲಿದೆ." (ಅಲ್‌ಮೂಮಿನ್ : 12)**

**"...ಅವನು ತನ್ನ ಆಜ್ಞಾಧಿಕಾರದಲ್ಲಿ ಯಾರನ್ನೂ ಭಾಗೀದಾರನಾಗಿ ಮಾಡುವುದಿಲ್ಲ." (ಅಲ್‌ಕಹ್ಫ್ : 26)**

**"...ಎಚ್ಚರಿಕೆ! ಅವನದೇ ಸೃಷ್ಟಿ. ಅವನದೇ ಅಪ್ಪಣೆ."(ಅಲ್‌ಅಲ್‌ರಾಫ್ : 54)**

* ಯಾವನಾದರೂ ಖಲೀಫ ಅಥವಾ ಪ್ರತಿನಿಧಿ ಎಂಬ ನೆಲೆಯಲ್ಲಿ ಶರೀಅತ್ ಕಾನೂನಿನ ಪ್ರಕಾರ ನಡೆಸಿದರೆ ಅಥವಾ ತೀರ್ಪು ನೀಡಿದರೆ ಅದು ಸಿಂಧುವಾಗುತ್ತದೆ. ವಿವರಗಳು ಮುಂದೆ ಬರುತ್ತವೆ.

...ಈ ಕಾರ್ಯವೆಸಗುವುದರಲ್ಲಿ ನಮ್ಮ ಪಾಲೇನಾದರೂ ಇದೆಯೇ? ಎಂದು ಈಗ ಅವರು ಕೇಳುತ್ತಾರೆ. ಅವರೊಡನೆ, "(ಯಾರದೂ ಯಾವ ಪಾಲೂ ಇಲ್ಲ) ಈ ಕಾರ್ಯ ಸಂಪೂರ್ಣವಾಗಿ ಅಲ್ಲಾಹನ ಅಧೀನವಿದೆ..." (ಆಲಿ ಇಮ್‌ರಾನ್ : 154)

2. ಈ ಮೂಲತತ್ವದ ಆಧಾರದಲ್ಲಿ ಕಾನೂನು ರಚಿಸುವ ಅಧಿಕಾರವನ್ನು ಮನುಷ್ಯನಿಂದ ಪೂರ್ಣವಾಗಿ ಕಿತ್ತುಕೊಳ್ಳಲಾಗಿದೆ. ಏಕೆಂದರೆ ಮನುಷ್ಯನು ದಾಸನೂ ಪ್ರಜೆಯೂ ಆಳೂ ಆಗಿರುವನು. ಆಧಿಪತ್ಯದ ಒಡೆಯನು ರಚಿಸಿದ ಕಾನೂನಿನ ಅನುಸರಣೆ ಮಾಡುವುದು ಮಾತ್ರ ಅವನ ಕೆಲಸ* ಆತನ ಕಾನೂನನ್ನು ಬಿಟ್ಟು ಯಾವುದೇ ವ್ಯಕ್ತಿ ಅಥವಾ ಸಂಸ್ಥೆ ಬೇರೆ ಕಾನೂನು ರಚಿಸಿದರೆ ಅಥವಾ ಇತರರು ರಚಿಸಿದ ಕಾನೂನನ್ನು ಅಂಗೀಕರಿಸಿ ಅದರಂತೆ ತೀರ್ಪು ನೀಡಿದರೆ ಅವರು 'ತಾಗೂತ್' (ವಿದ್ರೋಹಿ) ಎನಿಸಿಕೊಳ್ಳುತ್ತಾರೆ. ಅವರನ್ನು ಬಂಡುಕೋರರು ಮತ್ತು ಸತ್ಯಾನುಸರಣೆಯಿಂದ ಹೊರಹೋದವರು ಎಂದು ಪರಿಗಣಿಸಲಾಗುತ್ತದೆ. ಅವರಿಂದ ತೀರ್ಪು ಪಡೆಯುವವರೂ ಆ ತೀರ್ಪಿನಂತೆ ವರ್ತಿಸುವವರೂ ವಿದ್ರೋಹದ ಅಪರಾಧಿಗಳಾಗುತ್ತಾರೆ.

"...ನಿಮ್ಮ ನಾಲಿಗೆಗಳು ಸುಳ್ಳು ವಿಧಿಗಳನ್ನು ಹೇಳುತ್ತಿವೆ. ಇಂತಹ ವಿಧಿಗಳನ್ನು ಹೇಳಿ ಅಲ್ಲಾಹನ ಮೇಲೆ ಸುಳ್ಳು ಸೃಷ್ಟಿಸಬೇಡಿರಿ. ಅಲ್ಲಾಹನ ಮೇಲೆ ಸುಳ್ಳನ್ನು ಹೊರಿಸುವವರು ಎಂದಿಗೂ ಯಶಸ್ವಿಗಳಾಗು ವುದಿಲ್ಲ." (ಅನ್ನಹ್ಲ್: 116)

"...ನಿಮ್ಮ ಪ್ರಭುವಿನ ಕಡೆಯಿಂದ ಅವತೀರ್ಣ ಗೊಳಿಸಲ್ಪಟ್ಟಿರುವುದನ್ನೆಲ್ಲ ಅನುಸರಿಸಿರಿ ಮತ್ತು ನಿಮ್ಮ ಪಾಲಕ ಪ್ರಭುವನ್ನು ಬಿಟ್ಟು ಇತರ ಸಂರಕ್ಷಕರನ್ನು ಅನುಸರಿಸಬೇಡಿರಿ." (ಅಲ್‌ಅಅ್‌ರಾಫ್ : 3)

"...ಅಲ್ಲಾಹನು ಅವತೀರ್ಣಗೊಳಿಸಿದ ಕಾನೂನಿನ ಪ್ರಕಾರ ತೀರ್ಮಾನ ಮಾಡದವರೇ ಸತ್ಯನಿಷೇಧಿಗಳು." (ಅಲ್‌ಮಾಇದ : 44)

"ಓ ಪೈಗಂಬರರೇ, ನಿಮ್ಮ ಮೇಲೆ ಅವತೀರ್ಣಗೊಳಿಸಲ್ಪಟ್ಟ ಗ್ರಂಥದ ಮೇಲೂ ನಿಮಗಿಂತ ಮೊದಲು ಅವತೀರ್ಣಗೊಳಿಸಲ್ಪಟ್ಟ ಗ್ರಂಥಗಳ ಮೇಲೂ ನಾವು ವಿಶ್ವಾಸವಿಟ್ಟೆವೆಂದು ಕಂಠೋಕ್ತ ವಾದಿಸುವವರನ್ನು ನೀವು ನೋಡಿಲ್ಲವೇ? ಆದರೆ ಅವರು ತಮ್ಮ ವ್ಯವಹಾರಗಳ ತೀರ್ಮಾನ ಮಾಡಿಸಲು 'ತಾಗೂತ'ನ್ನು ಸಮೀಪಿಸುತ್ತಾರೆ. ವಸ್ತುತಃ ಅವರಿಗೆ ತಾಗೂತನ್ನು ನಿರಾಕರಿಸಲು ಆಜ್ಞಾಪಿಸಲಾಗಿತ್ತು..." (ಅನ್ನಿಸಾ : 60)

---

* ದೇವಶಾಸನದ ಪರಿಧಿಯಲ್ಲಿದ್ದುಕೊಂಡು ಸಂಶೋಧನೆ ನಡೆಸುವ ಮತ್ತು ಕರ್ಮಶಾಸ್ತ್ರದ ಆಂಶಿಕ ವಿಧಿಗಳನ್ನು ಸಂಕಲನ ಮಾಡುವ ವಿಚಾರ ಇದಕ್ಕಿಂತ ಭಿನ್ನವಾಗಿದೆ. ಅದು ಇಲ್ಲಿನ ಚರ್ಚಾ ವಿಷಯವಲ್ಲ. ಯಾವ ವಿಷಯಗಳಲ್ಲಿ ಅಲ್ಲಾಹನು ಮತ್ತು ಆತನ ಪ್ರವಾದಿ(ಸ) ಸ್ಪಷ್ಟವಾದ ವಿಧಿಯನ್ನು ನೀಡಿಲ್ಲವೋ ಅವುಗಳ ಕುರಿತು ಶರೀಅತ್ ಸ್ಫೂರ್ತಿ ಮತ್ತು ಇಸ್ಲಾಮಿನ ಮೂಲತತ್ವಕ್ಕೆ ಬದ್ಧವಾಗಿದ್ದುಕೊಂಡು ಕಾನೂನು ರಚಿಸುವ ಅಧಿಕಾರ ಸತ್ಯವಿಶ್ವಾಸಿಗಳಿಗಿದೆ. ಏಕೆಂದರೆ ಇಂತಹ ವಿಷಯಗಳಲ್ಲಿ ಸ್ಪಷ್ಟವಾದ ವಿಧಿ ಇಲ್ಲದಿರುವುದೇ ಅವುಗಳ ಬಗ್ಗೆ ವಿಧಿ ನಿಯಮಗಳನ್ನು ನಿಶ್ಚಯಿಸುವ ಅಧಿಕಾರವನ್ನು ಸತ್ಯವಿಶ್ವಾಸಿಗಳಿಗೆ ನೀಡಲಾಗಿದೆ ಎಂಬುದಕ್ಕೆ ಪುರಾವೆಯಾಗಿದೆ.

3. ಅಲ್ಲಾಹನ ಭೂಮಿಯಲ್ಲಿ ಅವನು ತನ್ನ ಪ್ರವಾದಿಗಳ ಮೂಲಕ ಕಳುಹಿಸಿದ ಕಾನೂನಿನ ಬುನಾದಿಯಲ್ಲಿ ರಚಿತವಾದ ಸರಕಾರ ಮತ್ತು ನ್ಯಾಯಾಲಯಗಳು ಮಾತ್ರ ಸರಿಯಾದ ಸರಕಾರ ಮತ್ತು ಸರಿಯಾದ ನ್ಯಾಯಾಲಯಗಳಾಗಿವೆ. ಅದನ್ನೇ 'ಖಿಲಾಫತ್'ಎಂದು ಹೆಸರಿಸಲಾಗುತ್ತದೆ.

"...ನಾವು ಪ್ರತಿಯೊಬ್ಬ ಸಂದೇಶವಾಹಕನನ್ನೂ ಅಲ್ಲಾಹನ ಆಜ್ಞೆ ಪ್ರಕಾರ ಅನುಸರಿಸಲ್ಪಡಲಿಕ್ಕಾಗಿಯೇ ಕಳುಹಿಸಿರುತ್ತೇವೆ." (ಅನ್ನಿಸಾ : 64)

"ಓ ಪೈಗಂಬರರೇ ಅಲ್ಲಾಹ್ ನಿಮಗೆ ತೋರಿಸಿಕೊಟ್ಟ ಪ್ರಕಾರ ಜನರ ನಡುವೆ ತೀರ್ಪು ನೀಡಲಿಕ್ಕಾಗಿ ನಾವು ನಿಮ್ಮ ಮೇಲೆ ಈ ಗ್ರಂಥವನ್ನು ಸತ್ಯ ಸಹಿತ ಅವತೀರ್ಣಗೊಳಿಸಿದ್ದೇವೆ..." (ಅನ್ನಿಸಾ : 105)

"...ನೀವು ಅಲ್ಲಾಹನಿಂದ ಅವತೀರ್ಣಗೊಂಡ ಕಾನೂನಿನ ಪ್ರಕಾರ ಇವರ ವ್ಯವಹಾರಗಳ ತೀರ್ಮಾನ ಮಾಡಿರಿ ಮತ್ತು ಇವರ ಅಭೀಷ್ಟಗಳನ್ನು ಅನುಸರಿಸಬೇಡಿರಿ. ಇವರು ನಿಮ್ಮನ್ನು 'ಗೊಂದಲ'ದಲ್ಲಿ ಸಿಲುಕಿಸಿ, ಅಲ್ಲಾಹನು ನಿಮ್ಮ ಮೇಲೆ ಅವತೀರ್ಣಗೊಳಿಸಿದ ಈ ಮಾರ್ಗದರ್ಶನದಿಂದ ಕಿಂಚಿತ್ತೂ ವಿಮುಖಗೊಳಿಸದಂತೆ ಬಹಳ ಜಾಗರೂಕರಾಗಿರಿ. (ಇವರು ದೇವಶಾಸನವನ್ನು ನಿರಾಕರಿಸುತ್ತಿದ್ದಾರೆ) ಇನ್ನೇನು ಇವರು ಅಜ್ಞಾನದ ತೀರ್ಮಾನವನ್ನು ಬಯಸುತ್ತಾರೆಯೇ? ವಸ್ತುತಃ ಅಲ್ಲಾಹನ ಮೇಲೆ ದೃಢವಿಶ್ವಾಸವಿರಿಸುವವರ ದೃಷ್ಟಿಯಲ್ಲಿ ಅಲ್ಲಾಹನ ತೀರ್ಮಾನಕ್ಕಿಂತ ಶ್ರೇಷ್ಠ ತೀರ್ಮಾನ ಮಾಡುವವನು ಇನ್ನಾರಿರಬಹುದು!" (ಅಲ್‌ಮಾಇದ : 49-50)

"...ದಾವೂದ್, ನಾವು ನಿಮ್ಮನ್ನು ಭೂಮಿಯಲ್ಲಿ ಪ್ರತಿನಿಧಿಯಾಗಿ ಮಾಡಿದ್ದೇವೆ. ಆದುದರಿಂದ ನೀವು ಜನರ ನಡುವೆ ಸತ್ಯದೊಂದಿಗೆ ಆಳ್ವಿಕೆ ನಡೆಸಿರಿ. ಸ್ವೇಚ್ಛೆ ಯನ್ನು ಅನುಸರಿಸಬೇಡಿರಿ. ಅದು ನಿಮ್ಮನ್ನು ಅಲ್ಲಾಹನ ಮಾರ್ಗ ದಿಂದ ತಪ್ಪಿಸಿಬಿಡುವುದು..." (ಸ್ವಾದ್ : 26)

4. ಇದಕ್ಕೆ ವ್ಯತಿರಿಕ್ತವಾಗಿ ಸರ್ವಲೋಕ ಪರಿಪಾಲಕನ ವತಿಯಿಂದ ಅವನ ಪ್ರವಾದಿಗಳು ತಂದ ಕಾನೂನಿನ ಬದಲು ಇತರ ಬುನಾದಿಗಳ ಮೇಲೆ ಸ್ಥಾಪಿತವಾದ ಎಲ್ಲ ಸರಕಾರಗಳು ಮತ್ತು ಎಲ್ಲ ನ್ಯಾಯಾಲಯಗಳು ವಿದ್ರೋಹಿಗಳಾಗಿವೆ. ವಿಶದಾಂಶಗಳಲ್ಲಿ ಇಂತಹ ಸರಕಾರ ಮತ್ತು ನ್ಯಾಯಾಲಯಗಳ ಮಧ್ಯೆ ಎಷ್ಟು ಭಿನ್ನತೆಗಳಿದ್ದರೂ ಸರಿಯೆ. ಅವುಗಳ ಎಲ್ಲ ಕ್ರಿಯೆಗಳು ನಿರಾಧಾರ ಮತ್ತು ಅಸಿಂಧುವಾಗಿವೆ. ಅವುಗಳ ವಿಧಿ ಮತ್ತು ತೀರ್ಮಾನಗಳಿಗೆ ಯಾವುದೇ ಸಕ್ರಮ ಆಧಾರವಿಲ್ಲ. ನೈಜ ಆಧಿಪತ್ಯದ ಒಡೆಯನು ಅವುಗಳಿಗೆ ಯಾವ ಪ್ರಮಾಣವನ್ನೂ(Charter) ನೀಡದಿರುವಾಗ ಅವು ಅಧಿಕೃತ ಸರಕಾರ ಮತ್ತು ನ್ಯಾಯಾಲಯಗಳಾಗುವುದಾದರೂ ಹೇಗೆ?* ಅವುಗಳು ಮಾಡುವುದೆಲ್ಲವೂ ಅಲ್ಲಾಹನ ಕಾನೂನಿನ

* ಯಾವ ಸರಕಾರ ಮತ್ತು ನ್ಯಾಯಾಲಯ ಅಲ್ಲಾಹನನ್ನು ಆಧಿಪತ್ಯದ ಒಡೆಯನೆಂದೂ ಮತ್ತು ತನ್ನನ್ನು ಆತನ ಖಲೀಫಾ ಅಥವಾ ಪ್ರತಿನಿಧಿಯೆಂದೂ ಒಪ್ಪುತ್ತದೋ, ಪ್ರವಾದಿಯನ್ನು ಅಲ್ಲಾಹನ ಪ್ರವಾದಿಯೆಂದೂ ಗ್ರಂಥವನ್ನು ಅವನ ಕುರ್‌ಆನನ್ನು ಅಂಗೀಕರಿಸುತ್ತದೋ ಮತ್ತು ಶರೀಅತ್‌ನ ಪರಿಧಿಯೊಳಗಿದ್ದುಕೊಂಡು

ದೃಷ್ಟಿಯಲ್ಲಿ ಅಸಿಂಧುವೆನಿಸುತ್ತವೆ. ಸತ್ಯವಿಶ್ವಾಸಿಗಳು (ದೇವನಿಗೆ ನಿಷ್ಠರಾಗಿರುವ ಪ್ರಜೆಗಳು) ಅವುಗಳ ಅಸ್ತಿತ್ವವನ್ನು ಒಂದು ಪ್ರತ್ಯಕ್ಷ ವಾಸ್ತವಿಕತೆ** ಎಂಬ ರೂಪದಲ್ಲಿ ಅಂಗೀಕರಿಸಬಹುದು. ಆದರೆ ಒಂದು ಅಧಿಕೃತ ಕಾರ್ಯಾಂಗ ಅಥವಾ ನ್ಯಾಯಾಂಗದ ರೂಪದಲ್ಲಿ*** ಅದನ್ನು ಅಂಗೀಕರಿಸಲಾರರು. ಅಲ್ಲಾಹನ ವಿದ್ರೋಹಿಗಳ ಅನುಸರಣೆ ಮಾಡುವುದು ಮತ್ತು ಅವರಿಂದ ತಮ್ಮ ವ್ಯವಹಾರಗಳನ್ನು ಇತ್ಯರ್ಥಗೊಳಿಸುವುದು ಅವರ ಕೆಲಸವಲ್ಲ. ಹೀಗೆ ಮಾಡುವವರು ತಮ್ಮ ಈಮಾನ್ ಮತ್ತು ಇಸ್ಲಾಮ್‌ನ ಘೋಷಣೆಗಳ ಹೊರತಾಗಿಯೂ ಅಲ್ಲಾಹನಿಗೆ ನಿಷ್ಠಾವಂತರಾಗಿರುವವರ ಸಾಲಿನಿಂದ ಹೊರ ಹಾಕಲ್ಪಡುವರು. ಒಂದು ಸರಕಾರವು ಒಂದು ವಿಭಾಗವನ್ನು ವಿದ್ರೋಹಿ ಎಂದು ಸಾರುತ್ತದೆ ಮತ್ತು ಅದೇ ವೇಳೆ ತನ್ನ ಪ್ರಜೆಗಳ ಮೇಲೆ ಆ ವಿದ್ರೋಹಿಗಳ ಅಧಿಕಾರವನ್ನು ಸರಿ ಎಂದು ಮಾನ್ಯ ಮಾಡುತ್ತದೆ ಹಾಗೂ ತನ್ನ ಪ್ರಜೆಗಳಿಗೆ ಅವರ ಆಜ್ಞಾಪಾಲನೆಯ ಅನುಮತಿ ನೀಡುತ್ತದೆ- ಎಂಬುದು ಬುದ್ಧಿಗೆ ನಿಲುಕುವ ವಿಷಯವಲ್ಲ.

"ಓ ಪೈಗಂಬರರೇ, ಇವರೊಡನೆ ಹೇಳಿರಿ; ತಮ್ಮ ಕರ್ಮಗಳಲ್ಲಿ ಅತ್ಯಧಿಕ ವಿಫಲರು ಯಾರೆಂದು ನಿಮಗೆ ತಿಳಿಸಲೇ? ಲೌಕಿಕ ಜೀವನದಲ್ಲಿ ಯಾರ ಸಕಲ ಪರಿಶ್ರಮಗಳು ಸನ್ಮಾರ್ಗದಿಂದ ತಪ್ಪಿಹೋಗಿದ್ದು ತಾವು ಮಾಡುತ್ತಿರುವುದೆಲ್ಲವೂ ಸರಿಯೇ ಎಂದು ತಿಳಿದುಕೊಂಡಿದ್ದರೋ ಅವರು. ಇವರು ತಮ್ಮ ಪ್ರಭುವಿನ ವಚನಗಳನ್ನೂ ಅವನ ಮುಂದೆ ಹಾಜರಾಗಲಿಕ್ಕಿದೆ ಎಂಬುದನ್ನೂ ನಿರಾಕರಿಸಿದವರು. ಆದುದರಿಂದ ಇವರ ಸಕಲ ಕರ್ಮಗಳೂ ವ್ಯರ್ಥವಾಗಿ ಬಿಟ್ಟುವು. ಪುನರುತ್ಥಾನದ ದಿನ ನಾವು ಅವರಿಗೆ ಏನೂ ಮಹತ್ವ ನೀಡಲಾರೆವು."(ಕುರ್‌ಆನ್, 18 : 103-105)

"ಇವರೇ ಆದ್ ಜನಾಂಗದವರು. ಇವರು ತಮ್ಮ ಪ್ರಭುವಿನ ನಿದರ್ಶನಗಳನ್ನು ನಿರಾಕರಿಸಿದರು, ಅವರು ರಸೂಲರನ್ನು ಧಿಕ್ಕರಿಸಿದರು. ಪ್ರತಿಯೊಬ್ಬ ಮದೋನ್ಮತ್ತ ಸತ್ಯ ವಿರೋಧಿಯನ್ನು ಅನುಸರಿಸುತ್ತ ಸಾಗಿದರು." (ಪವಿತ್ರ ಕುರ್‌ಆನ್, 11 : 59)

"ನಾವು ಮೂಸಾರನ್ನು ನಮ್ಮ ನಿದರ್ಶನಗಳೊಂದಿಗೂ (ನೇಮಕದ) ಸುವ್ಯಕ್ತ ಆಧಾರದೊಂದಿಗೂ ಕಳುಹಿಸಿದೆವು- ಫಿರ್‌ಔನ್ ಮತ್ತು ಅವನ ರಾಜಮಾನ್ಯ ಸರದಾರರ ಕಡೆಗೆ- ಆದರೆ, ಆ ಜನರು ಫಿರ್‌ಔನನ ಆಜ್ಞೆಯನ್ನು ಅನುಸರಿಸಿದರು. ವಸ್ತುತಃ ಫಿರ್‌ಔನನ ಆಜ್ಞೆಯು ಸನ್ಮಾರ್ಗಪರವಾಗಿರಲಿಲ್ಲ." (ಕುರ್‌ಆನ್, 11 : 96-97)

"...ತಮ್ಮ ಪ್ರಭುವಿನ ಸಂಪ್ರೀತಿಯ ಪ್ರಾಪ್ತಿಯನ್ನು ಬಯಸಿ ಬೆಳಗು ಬೈಗುಗಳಲ್ಲಿ ಅವನನ್ನು ಪ್ರಾರ್ಥಿಸುತ್ತಿರುವವರ ಸಹವಾಸ ದಲ್ಲಿರಲು ನಿಮ್ಮ ಮನಸ್ಸನ್ನು ಸಂತೃಪ್ತಗೊಳಿಸಿಕೊಳ್ಳಿರಿ ಮತ್ತು ಅವರ ಕಡೆಯಿಂದ ನಿಮ್ಮ ದೃಷ್ಟಿಯನ್ನೆಂದೂ (ಬೇರೆ ಕಡೆಗೆ) ತಿರುಗಿಸಬೇಡಿರಿ. ನೀವು ಇಹಲೋಕದ ಸೊಬಗನ್ನು ಬಯಸು ತ್ತೀರಾ? ನಾವು ನಮ್ಮ

ಕಾರ್ಯವೆಸಗಲು ಸಿದ್ಧವಾಗುತ್ತದೋ ಅಂತಹ ಸರಕಾರ ಮತ್ತು ನ್ಯಾಯಾಲಯಗಳಿಗೆ ಮಾತ್ರ ಅಲ್ಲಾಹನ ವತಿಯಿಂದ ಪ್ರಮಾಣ (Charter) ಲಭ್ಯವಿದೆ. ಈ ಸನದನ್ನು ಕುರ್‌ಆನ್‌ನಲ್ಲೇ ನೀಡಲಾಗಿದೆ: 'ಅಲ್ಲಾಹನು ಅವತೀರ್ಣಗೊಳಿಸಿದ ಕಾನೂನಿನ ಪ್ರಕಾರ ಜನರ ಮಧ್ಯೆ ಆಡಳಿತ ನಡೆಸಿರಿ.'

1. De-facto 2. De-jure

ಸ್ಮರಣೆಯಿಂದ ಬೋಧಶೂನ್ಯವಾಗಿ ಮಾಡಿರುವಂಥವನನ್ನೂ ತನ್ನ ದೇಹೇಚ್ಛೆಗಳ ಅನುಸರಣೆಯನ್ನು ಸ್ವೀಕರಿಸಿಕೊಂಡಿರುವವನನ್ನೂ ಮಿತಿತಪ್ಪಿ ವರ್ತಿಸುವಂಥವನನ್ನೂ ಅನುಸರಿಸಬೇಡಿರಿ." (ಪವಿತ್ರ ಕುರ್‌ಆನ್, 18 : 28)

"ಓ ಪೈಗಂಬರರೇ, ಇವರೊಡನೆ, ಹೇಳಿರಿ, "ನನ್ನ ಪ್ರಭು ನಿಷಿದ್ಧಗೊಳಿಸಿದ ವಿಷಯಗಳಿವು:- ಲಜ್ಜಾಹೀನ ಕಾರ್ಯಗಳು - ಅವು ಪ್ರತ್ಯಕ್ಷವಾದವುಗಳಿರಲಿ ಅಥವಾ ರಹಸ್ಯವಾದವುಗಳಿರಲಿ- ಪಾಪ ಕಾರ್ಯಗಳು, ಸತ್ಯಕ್ಕೆ ವಿರುದ್ಧವಾದ ಅತಿರೇಕ, ಅಲ್ಲಾಹನು ಯಾರ ಪರವಾಗಿ ಯಾವುದೇ ಆಧಾರ ಅವತೀರ್ಣಗೊಳಿಸಿಲ್ಲವೋ ಅಂಥವರನ್ನು ಅವನೊಂದಿಗೆ ಸಹಭಾಗಿಯಾಗಿಸುವುದು ಮತ್ತು (ವಾಸ್ತವದಲ್ಲಿ ಅಲ್ಲಾಹನೇ ಹೇಳಿರುತ್ತಾನೆಂದು) ನಿಮಗೆ ತಿಳುವಳಿಕೆ ಇಲ್ಲದಿರುವ ಮಾತನ್ನು ಅಲ್ಲಾಹನ ಹೆಸರಲ್ಲಿ ಹೇಳುವುದು."

(ಪವಿತ್ರ ಕುರ್‌ಆನ್, 7 : 33)

"ಅವನನ್ನು ಬಿಟ್ಟು, ನೀವು ಯಾರ ದಾಸ್ಯ-ಆರಾಧನೆ ಮಾಡುತ್ತಿ ರುವಿರೋ ಅವರೆಲ್ಲಾ ನೀವೂ ನಿಮ್ಮ ಪೂರ್ವಿಕರೂ ಇರಿಸಿಕೊಂಡಿ ರುವ ಕೆಲವು ಹೆಸರುಗಳ ವಿನಾ ಇನ್ನೇನೂ ಅಲ್ಲ. ಅಲ್ಲಾಹನು ಅವುಗಳ ಬಗ್ಗೆ ಯಾವ ಪ್ರಮಾಣವನ್ನೂ ಇಳಿಸಿರುವುದಿಲ್ಲ. ಆಜ್ಞಾಧಿಕಾರವು ಅಲ್ಲಾಹನಿಗೆ ಹೊರತು ಇನ್ನಾರಿಗೂ ಇಲ್ಲ. ಅವನ ಹೊರತು ನೀವು ಯಾರ ದಾಸ್ಯ-ಆರಾಧನೆಯನ್ನೂ ಮಾಡಬಾರದೆಂದು ಅವನ ಕಟ್ಟಪ್ಪಣೆ ಇದೆ. ಇದೇ ಅಪ್ಪಟ ಋಜು ಜೀವನ ಮಾರ್ಗ. ಆದರೆ ಹೆಚ್ಚಿನ ಜನರು ಅರಿಯುವುದಿಲ್ಲ."(ಪವಿತ್ರ ಕುರ್‌ಆನ್, 12 : 40)

"ಆದರೆ ಸನ್ಮಾರ್ಗವು ವ್ಯಕ್ತವಾದ ಬಳಿಕವೂ ಸಂದೇಶವಾಹಕರ ವಿರುದ್ಧ ಟೊಂಕ ಕಟ್ಟಿಕೊಂಡವನನ್ನೂ ಸತ್ಯವಿಶ್ವಾಸಿಗಳ ಮಾರ್ಗದ ಹೊರತು ಅನ್ಯ ಮಾರ್ಗಗಳಲ್ಲಿ ನಡೆಯುವವನನ್ನೂ ಅವನು ತಾನಾಗಿ ತಿರುಗಿಕೊಂಡ ಕಡೆಗೇ ನಾವು ತಿರುಗಿಸಿ ಬಿಡುವೆವು ಮತ್ತು ಅವನನ್ನು ಅತ್ಯಂತ ನಿಕೃಷ್ಟ ಸ್ಥಾನವಾಗಿರುವ ನರಕಕ್ಕೆ ತಳ್ಳಿಬಿಡುವೆವು."

(ಪವಿತ್ರ ಕುರ್‌ಆನ್, 4 : 115)

"ಓ ಮುಹಮ್ಮದರೇ! ನಿಮ್ಮ ಪ್ರಭುವಿನಾಣೆ, ಇವರು ತಮ್ಮೊಳಗಿನ ಭಿನ್ನಾಭಿಪ್ರಾಯಗಳಲ್ಲಿ ನಿಮ್ಮನ್ನು ತೀರ್ಪು ನೀಡುವವರೆಂದು ಒಪ್ಪಿಕೊಂಡು ಆ ಬಳಿಕ ನೀವು ಕೊಟ್ಟ ತೀರ್ಪಿನ ಬಗ್ಗೆ ತಮ್ಮ ಮನಸ್ಸಿನಲ್ಲೂ ಯಾವುದೇ ಸಂಕೋಚ ಪಡದೆ ಅದನ್ನು ಸರ್ವ ಸಂಪೂರ್ಣವಾಗಿ ಒಪ್ಪಿಕೊಳ್ಳುವವರೆಗೂ ಅವರು ಖಂಡಿತ ಸತ್ಯವಿಶ್ವಾಸಿಗಳಾಗಲಾರರು..."

(ಪವಿತ್ರ ಕುರ್‌ಆನ್, 4 : 65)

"ಅಲ್ಲಾಹನು ಅವತೀರ್ಣಗೊಳಿಸಿದುದರ ಕಡೆಗೆ ಬನ್ನಿರಿ ಮತ್ತು ಸಂದೇಶವಾಹಕರ ಕಡೆಗೆ ಬನ್ನಿರಿ ಎಂದು ಅವರೊಡನೆ ಹೇಳಿದಾಗ ಈ ಕಪಟ ವಿಶ್ವಾಸಿಗಳು ನಿಮ್ಮ ಬಳಿಗೆ ಬರುವುದರಿಂದ ಜಾರಿಕೊಳ್ಳುತ್ತಿರುವುದನ್ನು ನೀವು ನೋಡುತ್ತೀರಿ." (ಪವಿತ್ರ ಕುರ್‌ಆನ್, 4 : 61)

"...ಅಲ್ಲಾಹನು ಸತ್ಯವಿಶ್ವಾಸಿಗಳಿಗೆದುರಾಗಿ ಸತ್ಯನಿಷೇಧಿಗಳಿಗೆ ವಿಜಯದ ಯಾವ ದಾರಿಯನ್ನೂ ಇರಿಸಿರುವುದೇ ಇಲ್ಲ." (ಪವಿತ್ರ ಕುರ್‌ಆನ್, 4 : 141)

ಇವು ಕುರ್‌ಆನ್‌ನ ಸ್ಪಷ್ಟ ಆದೇಶಗಳು. ಇವುಗಳಲ್ಲಿ ಯಾವುದೂ ಸಂಶಯಾಸ್ಪದವಲ್ಲ. ಯಾವ ಮೂಲ ವಿಶ್ವಾಸದ ಬುನಾದಿಯ ಮೇಲೆ ಇಸ್ಲಾಮಿನ ನೈತಿಕ ಪದ್ಧತಿ ಮತ್ತು ನಾಗರಿಕ ವ್ಯವಸ್ಥೆಯನ್ನು ರಚಿಸಲಾಗಿದೆಯೋ ಅದುವೇ ಸಂಶಯಾಸ್ಪದವಾದರೆ ಕುರ್‌ಆನ್‌ನ ಅವತರಣವೇ ನಿರರ್ಥಕವೆನಿಸೀತು. (ಮಆಝುಲ್ಲಾಹ್) ಆದ್ದರಿಂದಲೇ ಕುರ್‌ಆನ್ ಈ ವಿಷಯವನ್ನು ಎಷ್ಟೊಂದು ಸ್ಪಷ್ಟವಾಗಿ ಮತ್ತು ನೇರವಾಗಿ ವಿವರಿಸಿದೆಯೆಂದರೆ ಅದರಲ್ಲಿ ಎರಡು ಅಭಿಪ್ರಾಯಗಳಿಗೆ ಎಡೆಯೇ ಇಲ್ಲ. ಕುರ್‌ಆನ್‌ನ ಇಷ್ಟು ಸ್ಪಷ್ಟ ಆದೇಶಗಳಿರುವಾಗ ಈ ಬಗ್ಗೆ ಹದೀಸ್ ಅಥವಾ ಕರ್ಮಶಾಸ್ತ್ರದ ಕಡೆಗೂ ಗಮನಹರಿಸುವ ಅಗತ್ಯ ಉಳಿಯುವುದಿಲ್ಲ.

ಯಾವುದರ ಬಗ್ಗೆ ಅಲ್ಲಾಹನು ಪ್ರಮಾಣ ಇಳಿಸಿಲ್ಲವೋ ಅದು ನಿರಾಧಾರವಾದುದು ಮತ್ತು ಅಲ್ಲಾಹನ ಪ್ರಮಾಣವನ್ನು ನಿರ್ಲಕ್ಷಿಸಿಕೊಂಡು ಸ್ಥಾಪಿಸಲಾದ ಯಾವುದೇ ವಸ್ತುವಿನ ಅಸ್ತಿತ್ವವು ಕಾನೂನಿನ ದೃಷ್ಟಿಯಲ್ಲಿ ಸಂಪೂರ್ಣ ಅಸಿಂಧುವಾಗಿದೆ- ಎಂಬ ವಿಶ್ವಾಸದ ತಳಹದಿಯಲ್ಲಿ ಇಸ್ಲಾಮಿನ ಸಂಪೂರ್ಣ ಸೌಧವು ನಿಂತಿರುವಾಗ ಯಾವುದಾದರೊಂದು ನಿರ್ದಿಷ್ಟ ವಿಷಯದ ಬಗ್ಗೆ ಯಾವುದೇ ಇಸ್ಲಾಮೇತರ ಸರಕಾರದ ನ್ಯಾಯಾಲಯವು ನೀಡಿದ ತೀರ್ಪು ಶರೀಅತ್ ದೃಷ್ಟಿಯಿಂದ ಜಾರಿಗೊಳ್ಳುವುದೋ ಇಲ್ಲವೋ ಎಂಬ ಪ್ರಶ್ನೆಗೆ ಅವಕಾಶವೇ ಇರುವುದಿಲ್ಲ. ಯಾವ ಮಗುವಿನ ಗರ್ಭವೇ ಧರ್ಮಬಾಹಿರವೆಂದು ಪರಿಗಣಿಸಲ್ಪಟ್ಟಿದೆಯೋ ಅದರ ವಿಷಯದಲ್ಲಿ 'ಆ ಮಗುವಿನ ಕೂದಲು ಧರ್ಮ ಬಾಹಿರವೆನಿಸುವುದೇ?' ಎಂಬ ಪ್ರಶ್ನೆ ಉದ್ಭವಿಸುವುದಿಲ್ಲ. ಹಂದಿ ಮಾಂಸವು ಸಂಪೂರ್ಣ ಧರ್ಮಬಾಹಿರವಾಗಿರುವಾಗ ಅದರ ಒಂದು ತುಂಡಿನ ಬಗ್ಗೆ ಅದು ಧರ್ಮಬಾಹಿರವೇ ಅಲ್ಲವೇ ಎಂಬ ಪ್ರಶ್ನೆ ಉದ್ಭವಿಸಲು ಸಾಧ್ಯವೇ? ಆದ್ದರಿಂದ ವಿವಾಹ ವಿಚ್ಛೇದನ, ಪತಿ-ಪತ್ನಿಯ ನ್ಯಾಯಾಂಗ ಬೇರ್ಪಡೆ ಮತ್ತು ತಲಾಕ್ ಜಾರಿಯ ಬಗ್ಗೆ ಇಸ್ಲಾಮೇತರ ನ್ಯಾಯಾಲಯಗಳ ತೀರ್ಪು ಜಾರಿಗೊಳ್ಳುವುದೇ ಇಲ್ಲವೇ ಎಂಬ ಪ್ರಶ್ನೆಯು ಇಸ್ಲಾಮಿನ ಕುರಿತಾದ ಅಜ್ಞಾನದ ಸಂಕೇತವಾಗಿದೆ. ಕೇವಲ ಮುಸ್ಲಿಮೇತರ ನ್ಯಾಯಾಧೀಶರ ಬಗ್ಗೆ ಕೇಳುವುದಂತೂ ಇನ್ನಷ್ಟು ಅಜ್ಞಾನದ ಸಂಕೇತವಾಗಿದೆ. ಹೀಗೆ ಕೇಳುವವರು ಅವರ ದೃಷ್ಟಿಯಲ್ಲಿ ದೇವೇತರ ನ್ಯಾಯಾಂಗ ವ್ಯವಸ್ಥೆಯ ಅಂಗಗಳಾಗಿ ಕಾರ್ಯವೆಸಗುತ್ತಿರುವ ಮುಸ್ಲಿಮ್ ನಾಮಧಾರಿಗಳು ಇಸ್ಲಾಮೇತರ ನ್ಯಾಯಾಲಯಗಳ ನ್ಯಾಯಧೀಶರಾದರೂ ಅವರ ತೀರ್ಪು ಜಾರಿಗೊಂಡೇ ತೀರುವವು ಎಂದು ಭಾವಿಸಿಕೊಂಡಂತಿದೆ. ವಾಸ್ತವದಲ್ಲಿ ಹಂದಿಮಾಂಸದ ತುಂಡಿಗೆ ಆಡಿನ ಮಾಂಸ ಎಂದು ಹೆಸರಿಟ್ಟ ಮಾತ್ರಕ್ಕೆ ಅದು ಆಡಿನ ಮಾಂಸವೂ ಆಗುವುದಿಲ್ಲ, ಧರ್ಮಸಮ್ಮತವೂ ಅಗುವುದಿಲ್ಲ.

ಈ ಮೂಲತತ್ವವನ್ನು ಅಂಗೀಕರಿಸುವುದರಿಂದ ಇಸ್ಲಾಮೇತರ ಸರಕಾರದಲ್ಲಿ ಮುಸ್ಲಿಮರ ಜೀವನವು ಕಷ್ಟಕರವಾಗುತ್ತದೆಂಬುದು ನಿಜ. ಆದರೆ ಮುಸ್ಲಿಮರ ಜೀವನವನ್ನು ಸುಲಭಗೊಳಿಸುವ ಸಲುವಾಗಿ ಇಸ್ಲಾಮಿನ ಪ್ರಥಮ ಮೂಲಭೂತ ತತ್ವವನ್ನು ಬದಲಾಯಿಸುವಂತಿಲ್ಲ. ಒಂದು ವೇಳೆ ಮುಸ್ಲಿಮರು ಇಸ್ಲಾಮೇತರ ಸರಕಾರದಡಿಯಲ್ಲಿ ಸುಲಭವಾಗಿ ಬಾಳ ಬಯಸುವುದಾದರೆ

ಅದಕ್ಕಾಗಿ ಇಸ್ಲಾಮಿನ ತತ್ವಗಳಲ್ಲಿ ಬದಲಾವಣೆ ಮಾಡುವ ಅಥವಾ ಇಸ್ಲಾಮನ್ನು ಇಸ್ಲಾಮೇತರಗೊಳಿಸಿ ಬಿಡುವ ಹಕ್ಕು ಅವರಿಗಿಲ್ಲ. ಆದರೆ ಇಸ್ಲಾಮ್ ಧರ್ಮವನ್ನು ತೊರೆಯುವ ಅಧಿಕಾರ ಅವರಿಗಿದೆ. ಅವರನ್ನು ಅದರಿಂದ ತಡೆಯುವ ಯಾವ ವಿಷಯವೂ ಇಲ್ಲಿಲ್ಲ. ಅವರು ಇಸ್ಲಾಮ್ ಧರ್ಮವನ್ನು ತೊರೆದು ಯಾವುದಾದರೂ ಸುಲಭದ ಜೀವನ ಕ್ರಮವನ್ನು ಸ್ವೀಕರಿಸಬಹುದು. ಆದರೆ ಒಂದು ವೇಳೆ ಅವರು ಮುಸ್ಲಿಮರಾಗಿಯೇ ಉಳಿಯ ಬಯಸುವುದಾದರೆ, ಇಸ್ಲಾಮೇತರ ಸರಕಾರದಡಿಯಲ್ಲಿ ತಮಗಾಗಿ ಸೌಲಭ್ಯಗಳನ್ನು ಸೃಷ್ಟಿಸಿಕೊಳ್ಳುವ ಉದ್ದೇಶದಿಂದ ಇಸ್ಲಾಮಿನ ಮೂಲಭೂತ ತತ್ವಗಳಿಗೆ ವಿರುದ್ಧವಾದಂತಹ ನೆಪಗಳನ್ನು ಹುಡುಕುವುದು ಸರಿಯಲ್ಲ. ಅದಕ್ಕೆ ಅವರ ಮುಂದಿರುವ ಏಕೈಕ ದಾರಿ ಸರಕಾರದ ಬದಲಾವಣೆಗೆ ಪ್ರಯತ್ನಿಸುವುದು ಮತ್ತು ತಾವು ಬಯಸುವಂತಹ ಸ್ವರೂಪದ ಸರಕಾರವನ್ನು ತರುವುದಕ್ಕಾಗಿ ಅವಿಶ್ರಾಂತವಾಗಿ ದುಡಿಯುವುದಾಗಿದೆ.

ಅನುಬಂಧ - 1

# ತಲಾಕ್ ಮತ್ತು ವಿವಾಹ ವಿಚ್ಛೇದನದ ಐರೋಪ್ಯ ಕಾನೂನುಗಳು

("ವಸ್ತುಗಳನ್ನು ಅವುಗಳಿಗೆ ತದ್ವಿರುದ್ಧವಾದವುಗಳ ಮೂಲಕ ಗುರುತಿಸಲಾಗುತ್ತದೆ." ಹಿಂದಿನ ಪುಟಗಳಲ್ಲಿ ನೀಡಲಾಗಿರುವ ಇಸ್ಲಾಮೀ ದಾಂಪತ್ಯ ಕಾನೂನುಗಳ ವಿವರಣೆಯಿಂದ, ಆ ಕಾನೂನಿನ ಶ್ರೇಷ್ಠತೆಯು ಪೂರ್ಣವಾಗಿ ಅರ್ಥವಾಗದು. ಅದು ಪೂರ್ಣವಾಗಿ ಅರ್ಥವಾಗಬೇಕಾದರೆ ಪ್ರಗತಿಪರವೆಂದು ಪರಿಗಣಿಸಲ್ಪಡುವ ಹಾಗೂ ಇಂದು ಜಗತ್ತಿನಲ್ಲಿ ಜಾರಿಯಲ್ಲಿರುವ ಇತರ ಕಾನೂನುಗಳ ತುಲನಾತ್ಮಕ ಅಧ್ಯಯನವನ್ನೂ ನಡೆಸಬೇಕು. ದೇವ ಶಾಸನದಿಂದ ವಿಮುಖನಾಗಿ ಮಾನವನು ತನಗೆ ತಾನೇ ಕಾನೂನು ನಿರ್ಮಾತೃ ಆದಾಗ ಎಷ್ಟೆಷ್ಟು ಎಡವಿ ಬೀಳುತ್ತಾನೆಂಬುದೂ ಈ ಅಧ್ಯಯನದಿಂದ ತಿಳಿದು ಬರುವುದು.)

ಇಸ್ಲಾಮೀ ಕಾನೂನಿನ ಒಂದು ಪ್ರಮುಖ ವೈಶಿಷ್ಟ್ಯವೇನೆಂದರೆ ಅದರ ತತ್ವಗಳಲ್ಲಿ ಮತ್ತು ಮೂಲಭೂತ ಆಜ್ಞೆಗಳಲ್ಲಿ ಅತ್ಯುನ್ನತ ಮಟ್ಟದ ಸಮತೋಲನವಿದೆ. ಅದು ಒಂದೆಡೆ ಅದು ಅತ್ಯುನ್ನತ ಮಟ್ಟದ ನೈತಿಕತೆಯನ್ನು ತನ್ನ ಧ್ಯೇಯವಾಗಿರಿಸಿಕೊಳ್ಳುತ್ತದೆ. ಇನ್ನೊಂದೆಡೆ ಅದು ಮಾನವ ಸಹಜ ದೌರ್ಬಲ್ಯಗಳನ್ನು ಕೂಡಾ ಕಡೆಗಣಿಸುವುದಿಲ್ಲ. ಒಂದೆಡೆ ಅದು ನಾಗರಿಕತೆಯ ಮತ್ತು ಸಾಮೂಹಿಕ ಹಿತಾಸಕ್ತಿಗಳನ್ನು ಗಣನೆಗೆ ತೆಗೆದುಕೊಂಡರೆ ಇನ್ನೊಂದೆಡೆ ವ್ಯಕ್ತಿಗಳ ಹಕ್ಕುಗಳಿಗೆ ಚ್ಯುತಿಯಾಗದಂತೆ ನೋಡಿಕೊಳ್ಳುತ್ತದೆ. ಒಂದೆಡೆ ಅದು ನೈಜ ಪರಿಸ್ಥಿತಿಯ ಮೇಲೆ ದೃಷ್ಟಿ ಇರಿಸಿದರೆ ಇನ್ನೊಂದೆಡೆ ಅದು ಮುಂದೆ ಅಸ್ತಿತ್ವಕ್ಕೆ ಬರಬಹುದಾದ ಯಾವುದೇ ಸಂಭವನೀಯ ಪರಿಸ್ಥಿತಿಗಳನ್ನೂ ನಿರ್ಲಕ್ಷಿಸುವುದಿಲ್ಲ. ಒಟ್ಟಿನಲ್ಲಿ ಇದು ಯಾವುದೇ ರೀತಿ ಏರುಪೇರುಗಳಿಗೆ ಅವಕಾಶವಿಲ್ಲದ ಸಂತುಲಿತ ಕಾನೂನಾಗಿದೆ. ಕಾನೂನು ನಿರ್ಮಾಣದಲ್ಲಿ ಯಾವ ವಿಭಿನ್ನ ಅಂಶಗಳನ್ನು ಪರಿಗಣಿಸಬೇಕೋ ಆ ಎಲ್ಲ ಅಂಶಗಳನ್ನು ಇಸ್ಲಾಮ್ ಧರ್ಮದಲ್ಲಿ ಕೇವಲ ತಾತ್ವಿಕವಾಗಿ ಮಾತ್ರವಲ್ಲ ಕಾರ್ಯ ರೂಪದಲ್ಲಿಯೂ ಪರಿಗಣಿಸಲಾಗಿದೆ. ಅವುಗಳ ಮಧ್ಯೆ ಪೂರ್ಣ ಸಮತೋಲನವನ್ನು ಕಾಪಾಡಲಾಗಿದೆ. ಯಾವುದಾದರೂ ಒಂದು ಕಡೆಗೆ ವಿಪರೀತವಾಗ ಒಲವು ಮತ್ತು ಇನ್ನೊಂದು ಕಡೆಗೆ ಅಕ್ಷಮ್ಯವಾದ ನಿರ್ಲಕ್ಷ್ಯ ತೋರುವಂತಹ ಅಸಮತೋಲನ ಅದರಲ್ಲಿ ಕಂಡು ಬರುವುದಿಲ್ಲ. ಆದ್ದರಿಂದಲೇ ಕಳೆದ 14

ಶತಮಾನಗಳಿಂದೀಚೆಗೆ ವಿಭಿನ್ನ ಕಾಲಗಳಲ್ಲಿ, ವಿಭಿನ್ನ ನಾಗರಿಕ ಪರಿಸ್ಥಿತಿಗಳಲ್ಲಿ ಭಿನ್ನ ಭಿನ್ನವಾದ ಶೈಕ್ಷಣಿಕ ಮಟ್ಟವನ್ನು ಹೊಂದಿದ ಜನಾಂಗಗಳಲ್ಲಿ, ವಿಭಿನ್ನ ಅಭಿರುಚಿ ಮತ್ತು ಆಸಕ್ತಿಗಳಿರುವ ಸಮಾಜಗಳಲ್ಲಿ ಈ ಕಾನೂನು ಜಾರಿಯಲ್ಲಿದ್ದರೂ ಯಾವುದೇ ವೈಯಕ್ತಿಕ ಅಥವಾ ಸಾಮಾಜಿಕ ಅನುಭವದ ಆಧಾರದಲ್ಲಿ ಅದರ ಯಾವುದೇ ಮೂಲಭೂತ ಆಜ್ಞೆಯು ತಪ್ಪು ಅಥವಾ ಪರಿವರ್ತನೀಯವೆಂದು ಸಾಬೀತಾಗಿಲ್ಲ. ಮನುಷ್ಯ ಚಿಂತನೆಯು ತನ್ನೆಲ್ಲಾ ಅವಿಶ್ರಾಂತ ಶ್ರಮಗಳ ಹೊರತಾಗಿಯೂ ನ್ಯಾಯ, ಸಂತುಲನೆ ಮತ್ತು ಸಮಂಜಸತೆಯಲ್ಲಿ ಇಸ್ಲಾಮಿನ ಯಾವುದಾದರೊಂದು ನಿಯಮಕ್ಕೆ ಕಿಂಚಿತ್ತಾದರೂ ಸರಿಸಾಟಿಯಾಗುವ ಒಂದು ನಿಯಮವನ್ನು ರಚಿಸುವಲ್ಲಿ ಸಫಲವಾಗಿಲ್ಲ.

ಇಸ್ಲಾಮೀ ಕಾನೂನಿನಲ್ಲಿ ಕಂಡು ಬರುವ ಈ ವಿಶೇಷತೆಯು ಕೇವಲ ದೈವಿಕ ಯುಕ್ತಿ ಮತ್ತು ದೂರದೃಷ್ಟಿಯ ಫಲಶ್ರುತಿಯಾಗಿರಲು ಸಾಧ್ಯ. ಮನುಷ್ಯನ, ಸೀಮಿತ ಜ್ಞಾನ ಮತ್ತು ಸಹಜ ಪರಿಮಿತಿಗಳಿಂದಾಗಿ ಅವನಿಗೆ ಯಾವುದಾದರೊಂದು ಸಮಸ್ಯೆಯ ಎಲ್ಲ ಮುಖಗಳನ್ನು ಗ್ರಹಿಸಲು ವರ್ತಮಾನ ಮತ್ತು ಭವಿಷ್ಯಗಳನ್ನು ಸಮಾನ ರೀತಿಯಲ್ಲಿ ವೀಕ್ಷಿಸಲು ಎಂದೂ ಸಾಧ್ಯವಾಗುವುದಿಲ್ಲ. ಸ್ವತಃ ತನ್ನ ಮತ್ತು ಇತರ ಮಾನವರ ಪ್ರಕೃತಿಯಲ್ಲಿ ಗೋಚರ ಮತ್ತು ಅಗೋಚರವಾಗಿರುವ ಎಲ್ಲ ವಿಶೇಷತೆಗಳನ್ನು ಪೂರ್ಣವಾಗಿ ಗಣನೆಗೆ ತೆಗೆದುಕೊಳ್ಳಲು ಆತನಿಂದ ಸಾಧ್ಯವಿಲ್ಲ. ತನ್ನ ಪರಿಸರದ ಪ್ರಭಾವದಿಂದ ಸಂಪೂರ್ಣ ಮುಕ್ತನಾಗಿ ತನ್ನ ಭಾವನೆಗಳು, ಸ್ವಾಭಾವಿಕ ಒಲವುಗಳು, ಬೌದ್ಧಿಕ ನ್ಯೂನತೆಗಳು ಮತ್ತು ಜ್ಞಾನದ ಕೊರತೆಯಿಂದ ಪೂರ್ಣ ಮುಕ್ತನಾಗಿ ಎಲ್ಲ ಕಾಲಗಳಿಗೆ, ಎಲ್ಲ ಸ್ಥಿತಿಗಳಿಗೆ ಮತ್ತು ಎಲ್ಲ ಅಗತ್ಯಗಳಿಗೆ ಸರಿಯಾಗಿ ಅನ್ವಯವಾಗಬಲ್ಲ ಸಮಂಜಸವೂ ಸಂತುಲಿತವೂ ಆದ ಒಂದು ನಿಯಮವನ್ನು ರಚಿಸಲು ಆತನಿಗೆ ಸಾಧ್ಯವಿಲ್ಲ. ಆದ್ದರಿಂದಲೇ ಮಾನವ ನಿರ್ಮಿತ ಕಾನೂನುಗಳ ಪೈಕಿ ಯಾವುದರಲ್ಲಿಯೂ ಸರಿಯಾದ ಸಮತೋಲನ ಕಾಣ ಸಿಗುವುದಿಲ್ಲ. ಒಂದೆಡೆ ಸಿದ್ಧಾಂತದ ಬಗ್ಗೆ ಅಸಮತೋಲನ ಇದ್ದರೆ ಇನ್ನೊಂದೆಡೆ ಮನುಷ್ಯ ಪ್ರಕೃತಿಯ ವಿವಿಧ ಅಂಶಗಳನ್ನು ಪರಿಗಣಿಸುವಲ್ಲಿ ಕೊರತೆಯಾಗಿರುತ್ತದೆ. ಒಂದೆಡೆ ವ್ಯಕ್ತಿಗಳ ಹಕ್ಕು ಬಾಧ್ಯತೆಗಳನ್ನು ನಿರ್ಣಯಿಸುವಲ್ಲಿ ನ್ಯಾಯ ಪಾಲಿಸಲಾಗುವುದಿಲ್ಲ. ಇನ್ನೊಂದೆಡೆ ವ್ಯಕ್ತಿ ಮತ್ತು ಸಮಾಜದ ಮಧ್ಯೆ ಹಕ್ಕು ಬಾಧ್ಯತೆಗಳ ವಿತರಣೆಯಲ್ಲಿ ಅನ್ಯಾಯವಾಗಿರುತ್ತದೆ. ಒಟ್ಟಿನಲ್ಲಿ ಪ್ರತಿಯೊಂದು ಹೊಸ ಅನುಭವಗಳು ಬದಲಾದ ಪರಿಸ್ಥಿತಿ ಮತ್ತು ಕಾಲದ ಬದಲಾವಣೆಯು ಈ ಕಾನೂನುಗಳ ಅನೇಕ ಕೊರತೆಗಳನ್ನು ಬಯಲುಗೊಳಿಸುತ್ತಲೇ ಇರುತ್ತವೆ. ಹಾಗೆ ಆದಾಗಲೆಲ್ಲಾ ಮನುಷ್ಯನು ಅದನ್ನು ತಿದ್ದಲು ಅಥವಾ ತಾತ್ವಿಕವಾಗಿ ಅದೇ ಕಾನೂನಿನ ಅಭಿಮಾನಿಯಾಗಿ ಮುಂದುವರಿದರೂ ಕಾರ್ಯ ರೂಪದಲ್ಲಿ ಅದನ್ನು ಪಾಲಿಸದೆ ಇರಲು ನಿರ್ಬಂಧಿತನಾಗುವನು.

ಈಗ ದೈವಿಕ ಕಾನೂನು ಮತ್ತು ಮಾನವ ನಿರ್ಮಿತ ಕಾನೂನುಗಳಲ್ಲಿರುವ ಈ ಮೂಲಭೂತ ಅಂತರವು ಕಣ್ಣಿರುವ ಪ್ರತಿಯೊಬ್ಬ ವ್ಯಕ್ತಿಗೂ ಗೋಚರವಾಗುವಷ್ಟು ಸ್ಪಷ್ಟವಾಗಿ ಬಿಟ್ಟಿದೆ. ನಿನ್ನೆಯ ವರೆಗೆ ಅಜ್ಞಾನ ಅಥವಾ ಪೂರ್ವಗ್ರಹದಿಂದ ಇಸ್ಲಾಮೀ ಕಾನೂನಿನ ಅನೇಕ ನಿಯಮಗಳ ಬಗ್ಗೆ

ವಿರೋಧ ವ್ಯಕ್ತಪಡಿಸಲಾಗುತ್ತಿತ್ತು ಮತ್ತು ಅವುಗಳಿಗೆದುರಾಗಿ ಮಾನವ ನಿರ್ಮಿತ ಕಾನೂನುಗಳಲ್ಲಿನ ನಿಯಮಗಳ ಬಗ್ಗೆ ಅಭಿಮಾನ ಪ್ರಕಟಿಸಲಾಗುತ್ತಿತ್ತು. ಆದರೆ ಇಂದು ಯಾವ ಸಂವಾದವೂ ಇಲ್ಲದೆ ಕೇವಲ ನೈಜ ಘಟನೆಗಳ ನಿರಾಕರಿಸಲಾದ ಪುರಾವೆಗಳಿಂದಾಗಿ, ಇಸ್ಲಾಮ್ ಏನನ್ನು ಕಲಿಸಿತೋ ಅದುವೇ ಸರಿಯೆಂದು ಸಾಬೀತಾಗಿ ಬಿಟ್ಟಿದೆ. ಹಾಗೆಯೇ ಇದಕ್ಕೆದುರಾಗಿ ಜಾರಿಯಲ್ಲಿದ್ದ ಮಾನವ ನಿರ್ಮಿತ ಕಾನೂನುಗಳೆಲ್ಲವೂ ತಪ್ಪು. ಹಾಗೂ ಅವ್ಯವಹಾರಿಕವಾಗಿವೆಯೆಂವುದೂ ಸಾಬೀತುಗೊಂಡಿದೆ. ಕಲ್ಪನೆಗಳ ಜಗತ್ತಿನಲ್ಲಿ ಈ ಕಾನೂನುಗಳು ಈಗಲೂ ಕೆಲವರಿಗೆ ಬಹಳ ಉಜ್ವಲವಾಗಿ ಗೋಚರಿಸುತ್ತಿವೆ ಮತ್ತು ಅವುಗಳು ಸೋತು ಹೋಗಿವೆ ಎಂಬುದನ್ನು ಸ್ಪಷ್ಟವಾಗಿ ಒಪ್ಪಲು ಈಗಲೂ ಅನೇಕ ನಾಲಿಗೆಗಳು ನಿರಾಕರಿಸುತ್ತಿವೆ ಎಂಬುದೇನೋ ನಿಜ. ಆದರೆ ವಾಸ್ತವಿಕವಾಗಿ ನಿನ್ನೆಯ ತನಕ ಯಾವ ಕಾನೂನನ್ನು ಜಗತ್ತು ಅತ್ಯಂತ ಪವಿತ್ರ ಮತ್ತು ಅಪರಿವರ್ತನೀಯವೆಂದು ಪರಿಗಣಿಸುತ್ತಿತ್ತೋ ಅದನ್ನೇ ಇಂದು ಸಕ್ರಿಯವಾಗಿ ಮುರಿಯುತ್ತಾ ಇದೆ ಮತ್ತು ಇಸ್ಲಾಮ್ ಧರ್ಮವು ನಿಶ್ಚಯಿಸಿಕೊಟ್ಟಂತಹ ಕಾನೂನು ಮತ್ತು ನಿಯಮಗಳತ್ತ ಮೆಲ್ಲ ಮೆಲ್ಲನೆ ವಾಲುತ್ತಿದೆ. ಸಾಕಷ್ಟು ಕೆಟ್ಟ ಬಳಿಕ ಬುದ್ಧಿ ಬಂದಂತಿದೆ.

ಉದಾಹರಣೆಗೆ ತಲಾಕ್‌ನ ವಿಷಯವನ್ನೇ ತೆಗೆದುಕೊಳ್ಳಿರಿ. ಇತ್ತೀಚಿನ ವರೆಗೂ ಕ್ರೈಸ್ತ ಜಗತ್ತು ತಲಾಕ್ ಪದ್ಧತಿಯ ವಿಷಯದಲ್ಲಿ ಮುಸ್ಲಿಮರನ್ನು ವಿಧ ವಿಧವಾಗಿ ನಿಂದಿಸುತ್ತಿತ್ತು. ಅನೇಕ ಮುಸಲ್ಮಾನರು ಅದರಿಂದ ಪ್ರಭಾವಿತರಾಗಿ, ಉತ್ತರ ನೀಡಲಾಗದೆ ನಾಚಿಕೊಳ್ಳುತ್ತಿದ್ದರು. ಆದರೆ ಕಾಲ ಕ್ರಮೇಣ ಅದರ ಯುಕ್ತಿ ಜಗತ್ತಿಗೆ ಮನವರಿಕೆಯಾಯಿತು. ವಿವಾಹದ ಪವಿತ್ರ ಬಂಧನವನ್ನು ಅಭೇದ್ಯವೆಂದು ಪರಿಗಣಿಸುವುದು ಮತ್ತು ಯಾವ ಕಾರಣಕ್ಕೂ ತಲಾಕ್, ಖುಲಾ ಮತ್ತು ವಿಚ್ಛೇದನಗಳಿಗೆ ಅವಕಾಶವೇ ನೀಡದಿರುವುದು ಕ್ರೈಸ್ತ ಸಿದ್ಧಾಂತದ ಒಂದು ಯುಕ್ತಿಪೂರ್ಣ ಭಾಗವಾಗಿರಲಿಲ್ಲವೆಂದೂ ಅದು ಕೇವಲ ಮಾನವ ಚಿಂತನೆಯ ಅಸಮತೋಲನದ ಪರಿಣಾಮವಾಗಿತ್ತೆಂದೂ, ಅದರಲ್ಲಿ ನೈತಿಕತೆ, ಮಾನವೀಯತೆ ಮತ್ತು ನಾಗರಿಕ ವ್ಯವಸ್ಥೆಯ ಪಾಲಿಗೆ ಕಲ್ಯಾಣದ ಬದಲು ವಿನಾಶವೇ ಅಡಕವಾಗಿದೆಯೆಂದೂ ನೈಜ ಘಟನೆಗಳಿಂದಲೇ ಸಾಬೀತಾಗಿ ಬಿಟ್ಟಿತು. ಏಸುಕ್ರಿಸ್ತರ ಈ ಮಾತು ಎಷ್ಟು ಅಮೋಘವಾಗಿದೆ:

'ಯಾವುದನ್ನು ದೇವನು ಜೋಡಿಸಿರುವನೋ ಅದನ್ನು ಮಾನವನು ಬೇರ್ಪಡಿಸದಿರಲಿ.' (ಮತ್ತಾಯ 19 : 6)

ಆದರೆ ಕ್ರೈಸ್ತರು ತಮ್ಮ ಪ್ರವಾದಿಯ ಈ ಮಾತುಗಳ ತಾತ್ಪರ್ಯವನ್ನು ತಿಳಿಯಲಿಲ್ಲ. ಅವರು ಅದನ್ನು ನೈತಿಕ ಮಾರ್ಗದರ್ಶನದ ಬದಲಿಗೆ ದಾಂಪತ್ಯ ಕಾನೂನಿನ ತಳಹದಿಯೆಂದು ಪರಿಗಣಿಸಿದರು. ಪರಿಣಾಮವೇನಾಯಿತು? ಕ್ರೈಸ್ತ ಜಗತ್ತು ಶತಮಾನಗಳ ವರೆಗೆ ನೆಪ, ಕಾಪಟ್ಯ ಮತ್ತು ವಂಚನೆಗಳೊಂದಿಗೆ ಈ ಅವ್ಯವಹಾರಿಕ ಕಾನೂನಿನ ವಿರುದ್ಧ ವರ್ತಿಸುತ್ತಾ ಇತ್ತು. ಕಾನೂನು ಮುರಿಯುವ ಈ ಚಾಳಿಯು ಕ್ರಮೇಣ ಬೆಳೆಯುತ್ತಾ ಎಷ್ಟೇ ಪ್ರಗತಿ ಸಾಧಿಸಿತೆಂದರೆ, ದಾಂಪತ್ಯ ಬಂಧನಕ್ಕಿಂತಲೂ ಪವಿತ್ರವಾದಂತಹ ಅನೇಕ ನೈತಿಕ ಮೇರೆಗಳನ್ನು ಕೂಡಾ ಬಹಿರಂಗವಾಗಿ ಉಲ್ಲಂಘಿಸಲು ಆರಂಭಿಸಲಾಯಿತು. ಜನರು ತಪ್ಪಾಗಿ ದೇವ ಶಾಸನವೆಂದು

ತಾವು ತಿಳಿದಿದ್ದ ಆ ಕಾನೂನಿನಲ್ಲಿಯೂ ಕೆಲವು ಆಂಶಿಕ ಮತ್ತು ದೋಷಪೂರ್ಣ ತಿದ್ದುಪಡಿಗಳನ್ನು ಮಾಡಲು ನಿರ್ಬಂಧಿತರಾದರು. ಆದರೆ ಈ ಸುಧಾರಣಾ ಕ್ರಮ ಜಾರಿಯಾಗುವ ಹೊತ್ತಿಗೆ ಕಾನೂನುಗಳನ್ನು ಉಲ್ಲಂಘಿಸುವ ಅಭ್ಯಾಸವಾಗಿ ಹೋಗಿದ್ದ ಕ್ರೈಸ್ತ ಜನಮನಗಳಲ್ಲಿ ದೇವಶಾಸಿತವಾದ ಯಾವ ಬಂಧನದ ಬಗ್ಗೆ ಗೌರವಭಾವ ಉಳಿದಿರಲಿಲ್ಲ. ಆದ್ದರಿಂದಲೇ ಈ ತಿದ್ದುಪಡಿಗಳ ಪರಿಣಾಮವಾಗಿ ಕ್ರೈಸ್ತ ಜಗತ್ತಿನಲ್ಲಿ ವಿವಾಹ ವಿಚ್ಛೇದನ ಮತ್ತು ಬೇರ್ಪಡೆಗಳ ಒಂದು ಬಿರುಗಾಳಿಯೇ ಎದ್ದು ಬಿಟ್ಟಿತು. ಅದರ ತೀವ್ರತೆಯಿಂದಾಗಿ ಕುಟುಂಬ ವ್ಯವಸ್ಥೆಯ 'ಪವಿತ್ರ ಗೋಡೆಗಳು' ಕುಸಿದು ಬಿದ್ದುವು. 1871ರಲ್ಲಿ ಕೇವಲ 166 ವಿಚ್ಛೇದನಗಳಾದ ಇಂಗ್ಲೆಂಡಿನಲ್ಲಿ 1933ರಲ್ಲಿ 4 ಸಾವಿರಕ್ಕಿಂತಲೂ ಅಧಿಕ ವಿವಾಹ ವಿಚ್ಛೇದನಗಳಾದುವು. ಈ ರೀತಿ ದೇವನಿಂದ ಬಂಧಿತವಾದ ಪ್ರತಿ 71 ಸಂಬಂಧಗಳ ಪೈಕಿ ಒಂದನ್ನು ಮಾನವನು ಮುರಿದಂತಾಯಿತು. 1886ರಲ್ಲಿ ಅಮೇರಿಕದಲ್ಲಿ 35 ಸಾವಿರ ವಿಚ್ಛೇದನಗಳಾಗಿದ್ದುವು. 1931ರಲ್ಲಿ ಆ ಸಂಖ್ಯೆ 1,83,000ಕ್ಕೆ ತಲುಪಿತು. ಫ್ರಾನ್ಸಿನಲ್ಲಿಯಂತೂ ಸುಮಾರು ಪ್ರತಿ 15 ವಿವಾಹಗಳ ಪೈಕಿ ಒಂದು ವಿಚ್ಛೇದನದಲ್ಲಿ ಪರ್ಯಾವಸಾನಗೊಳ್ಳುತ್ತದೆ. ಇತರ ಎಲ್ಲ ಪಾಶ್ಚಿಮಾತ್ಯ ರಾಷ್ಟ್ರಗಳ ಸ್ಥಿತಿಯೂ ಸರಿಸುಮಾರು ಇದುವೇ ಆಗಿದೆ.

ಏಸುಕ್ರಿಸ್ತರು ನೀಡಿದ ಬೋಧನೆಗೆ ಸಮಾನವಾದ ಒಂದು ಬೋಧನೆಯು ಕುರ್‌ಆನಿನಲ್ಲಿಯೂ ಇದೆ. ಕುರ್‌ಆನ್ ಈ ರೀತಿ ಹೇಳುತ್ತದೆ:

**"ಅಲ್ಲಾಹನ ಜೊತೆ ದೃಢವಾದ ಅಹ್ದ್ (ಕರಾರು) ಮಾಡಿಕೊಂಡ ಬಳಿಕ ಅದನ್ನು ಮುರಿದು ಹಾಕುವವರು, ಅಲ್ಲಾಹನು ಜೋಡಿಸಲು ಆಜ್ಞಾಪಿಸಿದುದನ್ನು ಮುರಿದು ಹಾಕುವವರು ಮತ್ತು ಭೂಮಿಯ ಮೇಲೆ ಕ್ಷೋಭೆಯನ್ನುಂಟು ಮಾಡುವವರು. ಯಥಾರ್ಥವಾಗಿ ಇವರೇ ನಷ್ಟಕ್ಕೊಳಗಾಗುವವರು." (ಅಲ್‌ಬಕರ : 27)**

ಏಸುಕ್ರಿಸ್ತರು ಯಹೂದಿಗಳ ಕಠೋರ ಹೃದಯ ಮತ್ತು ತಲಾಕ್‌ನ ಬಾಹುಳ್ಯವನ್ನು ತಡೆಯುವ ಸಲುವಾಗಿ ಈ ರೀತಿ ಹೇಳಿದ್ದರು:

ಯಾವನಾದರೂ ತನ್ನ ಪತ್ನಿಯನ್ನು ವ್ಯಭಿಚಾರದ ಹೊರತು ಇತರ ಯಾವುದಾದರೂ ಕಾರಣಕ್ಕೆ ತೊರೆದು ಇನ್ನೊಂದು ಮದುವೆಯಾದರೆ ಅವನು ವ್ಯಭಿಚಾರವೆಸಗಿದಂತೆಯೇ ಸರಿ. (ಮತ್ತಾಯ : 19-9)

ಪ್ರವಾದಿ ಮುಹಮ್ಮದ್(ಸ) ಅವರೂ ಇದೇ ಉದ್ದೇಶದಿಂದ, ಇದಕ್ಕಿಂತ ಹೆಚ್ಚು ಎಚ್ಚರಿಕೆಯಿಂದ ಆರಿಸಿಕೊಂಡ ಮಾತುಗಳಲ್ಲಿ ತಲಾಕ್ ಎಂಬುದು ಧರ್ಮಸಮ್ಮತ ಕಾರ್ಯಗಳ ಪೈಕಿ ಅತ್ಯಂತ ಕೆಟ್ಟ ಕಾರ್ಯವಾಗಿದೆ ಎಂದಿರುವರು. ಅವರು, ಕೇವಲ ವಿಷಯಾಸಕ್ತಿಗಾಗಿ ತಲಾಕ್ ನೀಡುವುದನ್ನು ಬಲವಾಗಿ ಖಂಡಿಸಿರುವರು.

ಆದರೆ ನೈತಿಕತೆಯ ಈ ಉನ್ನತ ತತ್ವಗಳನ್ನು, ವ್ಯಕ್ತಿಗಳು ತಮ್ಮ ನಡವಳಿಕೆಯಲ್ಲಿ ತಮ್ಮ ಮುಂದಿಟ್ಟುಕೊಳ್ಳಬೇಕೆಂದು ಅವರಿಗೆ ಬೋಧಿಸಲಿಕ್ಕಾಗಿ ಅವರ ಮುಂದಿಡಲಾಗಿತ್ತೇ ಹೊರತು ಅದಕ್ಕೆ ಯಥಾವತ್ತಾಗಿ ಕಾನೂನಿನ ರೂಪ ಕೊಡಲು ಉದ್ದೇಶಿಸಲಾಗಿರಲಿಲ್ಲ.

ಮುಹಮ್ಮದ್(ಸ)ರವರು ಕೇವಲ ನೀತಿಬೋಧಕರಾಗಿರದೆ ಕಾನೂನು ನೀಡುವವರು ಕೂಡಾ ಆಗಿದ್ದರು. ಆದ್ದರಿಂದ ಅವರು ನೈತಿಕ ತತ್ವಗಳನ್ನು ವಿವರಿಸುವುದರ ಜೊತೆಗೇ ಆ ನೈತಿಕ ತತ್ವಗಳನ್ನು ಯಾವ ಅನುಪಾತದಲ್ಲಿ ಕಾನೂನಿನೊಂದಿಗೆ ಸೇರಿಸಬೇಕು ಹಾಗೂ ನೈತಿಕ ತತ್ವಗಳು ಮತ್ತು ಪ್ರಾಕೃತಿಕ ಬೇಡಿಕೆಗಳ ಮಧ್ಯೆ ಸಮತೋಲನವನ್ನು ಹೇಗೆ ಕಾಪಾಡಬೇಕು ಎಂಬುದನ್ನು ಅವರು ಸ್ಪಷ್ಟಪಡಿಸಿದರು. ಇದಕ್ಕೆ ವ್ಯತಿರಿಕ್ತವಾಗಿ ಪ್ರವಾದಿ ಈಸಾ(ಅ) ಕಾನೂನು ನೀಡುವವರಾಗಿರಲಿಲ್ಲ. ಒಂದು ಧರ್ಮಶಾಸ್ತ್ರವನ್ನು ಜಾರಿಗೊಳಿಸುವಂತಹ ಸನ್ನಿವೇಶ ಬರುವ ಮೊದಲೇ ಲೋಕದಲ್ಲಿ ಅವರ ಪ್ರವಾದಿತ್ವದ ಹ ಣೆಗಾರಿಕೆಯು ಸಮಾಪ್ತಗ ಂಡಿತು: ಆದ್ದರಿಂದ ಅವರ ಬೋಧನೆಗಳಲ್ಲಿ ನೈತಿಕತೆಯ ಪ್ರಾಥಮಿಕ ತತ್ವಗಳ ಹೊರತು ಬೇರೇನೂ ಕಾಣ ಸಿಗುವುದಿಲ್ಲ. ಜೀವನದ ವ್ಯಾವಹಾರಿಕ ಸಮಸ್ಯೆಗಳಿಗೆ ಆ ನೀತಿಗಳನ್ನು ಅನ್ವಯಿಸುವ ಕೆಲಸವು ಪ್ರವಾದಿ ಮೂಸಾ(ಅ)ರವರ ಧರ್ಮಶಾಸ್ತ್ರದ ಹಿನ್ನೆಲೆಯಲ್ಲೇ ಆಗಬೇಕಿತ್ತು. ಆದರೆ ಕ್ರೈಸ್ತರು ತಮಗೆ ಈ ನೈತಿಕ ತತ್ವಗಳು ಸಿಕ್ಕಿದ ಬಳಿಕ ತಮಗಿನ್ನೂ ದೈವೀಕ ಧರ್ಮಶಾಸ್ತ್ರದ ಅಗತ್ಯವೇ ಉಳಿದಿಲ್ಲ ಎಂದು ಭಾವಿಸಿದರು ಮತ್ತು ಈ ತತ್ವಗಳ ಆಧಾರದಲ್ಲಿ ಕಾನೂನು ನಿರ್ಮಾಣ ಮಾಡುವುದು ಚರ್ಚ್‌ನ ಕೆಲಸವೇ ಹೊರತು ದೇವ ಮತ್ತು ಪ್ರವಾದಿಯ ಕೆಲಸವಲ್ಲ ಎಂದು ಭಾವಿಸಿಕೊಂಡರು. ಸಂತಪೌಲರು ಕೂಡಾ ಅವರಿಗೆ ಇದನ್ನು ಬೋಧಿಸಿದರು.

ಈ ಮಹಾ ತಪ್ಪು ತಿಳುವಳಿಕೆಯು ಚರ್ಚ್ ಮತ್ತು ಅದರ ಅನುಯಾಯಿಗಳನ್ನು ಶಾಶ್ವತವಾಗಿ ಪಥಭ್ರಷ್ಟತೆಯಲ್ಲಿ ಸಿಲುಕಿಸಿತು. ಪ್ರವಾದಿ ಈಸಾ(ಅ) ಅವರು ಬೋಧಿಸಿದ ಧರ್ಮದ ತತ್ವಗಳ ಪೈಕಿ ಯಾವೊಂದರ ಆಧಾರದಲ್ಲಿಯೂ ಒಂದು ಸರಿಯಾದ ಕಾನೂನನ್ನು ರಚಿಸುವಲ್ಲಿ ಚರ್ಚ್ ಸಫಲವಾಗಿಲ್ಲವೆಂಬುದಕ್ಕೆ ಕ್ರೈಸ್ತರ ಎರಡು ಸಾವಿರ ವರ್ಷಗಳ ಇತಿಹಾಸವೇ ಸಾಕ್ಷಿಯಾಗಿದೆ. ಆದ್ದರಿಂದಲೇ ಕ್ರೈಸ್ತ ಜಗತ್ತು ಆ ತತ್ವಗಳನ್ನೇ ತಿರಸ್ಕರಿಸುವುದು ಅನಿವಾರ್ಯವಾಯಿತು.

ಪ್ರವಾದಿ ಈಸಾ(ಅ) ಅವರು ತಲಾಕನ್ನು ಖಂಡಿಸುವಾಗ ವ್ಯಭಿಚಾರದ ಕಾರಣವನ್ನು ಅದರಿಂದ ಹೊರತುಪಡಿಸುವುದರ ಮೂಲಕ ತಲಾಕ್ ವಸ್ತುತಃ ಕೆಟ್ಟದಲ್ಲವೆಂದೂ ಸಕಾರಣವಲ್ಲದ ತಲಾಕ್ ಮಾತ್ರ ಕೆಟ್ಟದೆಂದೂ ಸೂಚಿಸಿರುವರು. ಆದರೆ ಕ್ರೈಸ್ತರು ಅದನ್ನು ಗ್ರಹಿಸಲಿಲ್ಲ. ಅವರು ಇದನ್ನು "ಯಾವುದನ್ನು ದೇವನು ಜೋಡಿಸಿರುವನೋ ಅದನ್ನು ಮಾನವನು ಬೇರ್ಪಡಿಸದಿರಲಿ" ಎಂಬ ಸೂಕ್ತಕ್ಕೆ ವ್ಯತಿರಿಕ್ತವೆಂದು ಪರಿಗಣಿಸಿದರು. ಕೆಲವರಂತೂ ಅದನ್ನು ಕಾಲ ಕ್ರಮೇಣ ಬೈಬಲಿನಲ್ಲಿ ಮಾಡಲಾದ ಸೇರ್ಪಡೆಯೆಂದು ಪರಿಗಣಿಸಿದರು. ಇನ್ನು ಕೆಲವರು ಇದರ ಆಧಾರದಲ್ಲಿ, ವ್ಯಭಿಚಾರದ ವಿಷಯದಲ್ಲಿ ದಂಪತಿಗಳನ್ನು ಪರಸ್ಪರ ಬೇರ್ಪಡಿಸಬಹುದಾದರೂ ಅವರ ಮಧ್ಯೆ ವಿವಾಹ ಬಂಧನವು ಊರ್ಜಿತದಲ್ಲಿರುತ್ತದೆಂದೂ ಪತಿ-ಪತ್ನಿಯರಿಬ್ಬರೂ ಬೇರ್ಪಡೆಯ ಬಳಿಕವೂ ಬೇರೆ ವಿವಾಹ ಮಾಡಿಕೊಳ್ಳುವಂತಿಲ್ಲವೆಂದೂ ವಾದಿಸಿದರು. ಶತಮಾನಗಳ ವರೆಗೆ ಕ್ರೈಸ್ತ ಜಗತ್ತು ಈ ಅಭಿಪ್ರಾಯದಂತೆಯೇ ವರ್ತಿಸಿತು. ಇತರ ಕಾನೂನುಗಳ ಜೊತೆಗೆ ಈ ಕಾನೂನು ಕೂಡಾ ಕ್ರೈಸ್ತ ಜನಾಂಗಗಳಲ್ಲಿ ಅನೈತಿಕತೆ ವ್ಯಾಪಿಸುವುದಕ್ಕೆ ಕಾರಣವಾಯಿತು.

ಚರ್ಚ್‌ನ ಪ್ರಭಾವದಿಂದ ಮುಕ್ತವಾಗಿ ಕೇವಲ ವೈಚಾರಿಕ ತತ್ವಗಳ ಆಧಾರದಲ್ಲಿ ಕಾನೂನು ರಚನೆ ಮಾಡಿದ ಬಳಿಕವೂ ಇಂಗ್ಲೆಂಡ್ ಮತ್ತು ಅಮೇರಿಕಗಳಲ್ಲಿ ನ್ಯಾಯಾಂಗ ಬೇರ್ಪಡೆ(Judicial Seperation) ಎಂದರೆ ಕೇವಲ ದಂಪತಿಗಳನ್ನು ಪರಸ್ಪರರಿಂದ ಬೇರ್ಪಡಿಸುವುದು ಮಾತ್ರವೆಂದು ಅರ್ಥೈಸಲಾಗುತ್ತಿರುವುದು ಸ್ವಾರಸ್ಯಕರ ಅಂಶ. ಅಲ್ಲಿ ಇಬ್ಬರಿಗೂ ದ್ವಿತೀಯ ವಿವಾಹದ ಅನುಮತಿ ಇಲ್ಲ. ಇದು ಮನುಷ್ಯ ಬುದ್ಧಿಯ ನ್ಯೂನತೆಗೆ ಸ್ಪಷ್ಟ ನಿದರ್ಶನವಾಗಿದೆ. ರೋಮನ್ ಕೆಥೋಲಿಕ್ ಚರ್ಚ್‌ನ ಧಾರ್ಮಿಕ ಕಾನೂನಿನಲ್ಲಿ (Canon Law) ಮೇಲ್ಕಾಣಿಸಿದ ತತ್ವದ ಆಧಾರದಲ್ಲಿ ರಚಿಸಿದ ನಿಯಮಗಳಂತೆ ತಲಾಕ್ ಅಥವಾ ವಿವಾಹ ವಿಚ್ಛೇದನ(ಇಬ್ಬರಿಗೂ ಬೇರೆ ವಿವಾಹ ಮಾಡುವ ಹಕ್ಕು ದೊರಕುವಂತಹ ಬೇರ್ಪಡೆ) ಸಂಪೂರ್ಣ ನಿಷಿದ್ಧವಾಗಿತ್ತು. ಆದರೆ ದಂಪತಿಗಳ ನಡುವೆ ಕೇವಲ ಪರಸ್ಪರ ಬೇರ್ಪಡೆಗೆ ಕೆಲವು ಅವಕಾಶಗಳನ್ನು ನೀಡಲಾಗಿತ್ತು:

1. ವ್ಯಭಿಚಾರ ಅಥವಾ ಪ್ರಕೃತಿಗೆ ವಿರುದ್ಧವಾದ ಅಪರಾಧ.
2. ನಪುಂಸಕತೆ.
3. ಅಕ್ರಮ ವರ್ತನೆ.
4. ಧರ್ಮಭ್ರಷ್ಟತೆ.
5. ಧರ್ಮತ್ಯಾಗ.
6. ಪತಿ-ಪತ್ನಿಯರ ಮಧ್ಯೆ ವಿವಾಹ ನಿಷಿದ್ಧವಾದ ರಕ್ತ ಸಂಬಂಧವಿದೆಯೆಂದು ತಿಳಿದು ಬರುವುದು.

ಮೇಲ್ಕಾಣಿಸಿದ ಆರು ಸಂದರ್ಭಗಳಲ್ಲಿ ಒದಗಿಸಲಾದ ಪರಿಹಾರವೇನೆಂದರೆ ದಂಪತಿಗಳು ಪರಸ್ಪರ ಬೇರ್ಪಟ್ಟು ಜೀವನ ಪರ್ಯಂತ ಏಕಾಂತವಾಗಿಯೇ ಉಳಿಯಬೇಕು. ಯಾವ ವಿಚಾರವಂತನಾದರೂ ಈ ಕಾನೂನು ಬುದ್ಧಿಗೆ ನಿಲುಕುವಂತಹದ್ದು ಎಂದು ಹೇಳಿಯಾನೇ? ವಾಸ್ತವದಲ್ಲಿ ಇದೊಂದು ಕಾನೂನಿನ ಪರಿಹಾರವಾಗಿದೆ, ಒಂದು ರೀತಿಯ ಶಿಕ್ಷೆಯಾಗಿತ್ತು. ಈ ಶಿಕ್ಷೆಗೆ ಹೆದರಿ ಯಾರೂ ತಮ್ಮ ವಿವಾಹ ವಿಚ್ಛೇದನದ ದಾವೆಗಳನ್ನು ಕೋರ್ಟಿಗೆ ಒಯ್ಯುತ್ತಿರಲಿಲ್ಲ. ಏಕೆಂದರೆ ಒಂದು ವೇಳೆ ಯಾರಾದರೂ ದುರದೃಷ್ಟ ಪೀಡಿತ ದಂಪತಿಯರ ನಡುವೆ ಬೇರ್ಪಡೆ ಆದರೆ ಆ ಬಳಿಕ ಅವರು ಜೀವನ ಪರ್ಯಂತ ಸನ್ಯಾಸಿಗಳಂತೆ ಜೀವಿಸಬೇಕಿತ್ತು ಅಥವಾ ಜೀವನ ಪರ್ಯಂತ ವ್ಯಭಿಚಾರದಲ್ಲಿ ಸಿಲುಕಿರಬೇಕಾಗಿತ್ತು.

ಇಂತಹ ಕಠಿಣ ಮತ್ತು ವ್ಯಾವಹಾರಿಕವಲ್ಲದ ಕಾನೂನಿನಿಂದ ಮುಕ್ತಿ ಪಡೆಯಲು ಕ್ರೈಸ್ತ ಪಂಡಿತರು ಅನೇಕ ಧಾರ್ಮಿಕ ನೆಪಗಳನ್ನು ಕಂಡು ಕೊಂಡಿದ್ದರು. ಅವುಗಳ ಆಧಾರದಲ್ಲಿ ಚರ್ಚ್ ಕಾನೂನು ಅಂತಹ ನತದೃಷ್ಟ ದಂಪತಿಗಳನ್ನು ಬೇರ್ಪಡಿಸುತ್ತಿತ್ತು. ಈ ಪೈಕಿ ಒಂದು ನೆಪವೇನೆಂದರೆ ಹೇಗಾದರೂ ಮಾಡಿ ದಂಪತಿಗಳು ಜೀವನ ಪರ್ಯಂತ ಪರಸ್ಪರ ಜೊತೆಗಿರುವುದಾಗಿ ಮಾಡಿಕೊಂಡ ಒಡಂಬಡಿಕೆಯು ಪ್ರಜ್ಞಾಪೂರ್ವಕ ಮಾಡಿದ ಒಪ್ಪಂದವಾಗಿರಲಿಲ್ಲ. ನಿಜವಾಗಿ ಅವರು ಕೇವಲ ಒಂದು ನಿರ್ದಿಷ್ಟ ಅವಧಿಗೆ ಮಾತ್ರ ಜೊತೆಗಿರಲು ಬಯಸಿದ್ದರು ಎಂದು

ಸಾಬೀತುಪಡಿಸುವುದು ಮತ್ತು ಈ ಸನ್ನಿವೇಶದಲ್ಲಿ ಅವರ ಧಾರ್ಮಿಕ ನ್ಯಾಯಾಲಯವು ಅವರ ವಿವಾಹವನ್ನು ಅಸಿಂಧು (Null)ವೆಂದು ಘೋಷಿಸುವುದಾಗಿತ್ತು. ಆದರೆ, ಕ್ರೈಸ್ತ ಕಾನೂನಿನ ಪ್ರಕಾರ, ಈ ವಿವಾಹದ ಅಸಿಂಧುತ್ವದ ಅರ್ಥವೇನೆಂದು ಗೊತ್ತೆ? ಅವರ ಮಧ್ಯೆ ವಿವಾಹ ಏರ್ಪಡಲೇ ಇಲ್ಲ. ಅಂದರೆ ಈ ತನಕ ಅವರ ಮಧ್ಯೆ ಇದ್ದ ಸಂಬಂಧ ಕಾನೂನು ಬಾಹಿರವಾದದ್ದು ಮತ್ತು ಅದರಿಂದ ಹುಟ್ಟಿದ ಸಂತಾನವೂ ಜಾರಸಂತಾನವಾಗಿದೆ ಎಂದೇ ಇದರ ಅರ್ಥವಾಗಿತ್ತು. ಈ ಅರ್ಥದ ದೃಷ್ಟಿಯಿಂದ ಈ ದ್ವಿತೀಯ ಕಾನೂನುಪರ ಪರಿಹಾರವು ಮೊದಲಿಗಿಂತ ಹೀನವಾದುದಾಗಿದೆ.

ರೋಮನ್ ಚರ್ಚ್‌ಗೆ ಹೋಲಿಸಿದರೆ, ಇಸ್ಲಾಮೀ ಕರ್ಮಶಾಸ್ತ್ರದಿಂದ ಪ್ರಭಾವಿತವಾಗುವ ಹೆಚ್ಚು ಅವಕಾಶಗಳನ್ನು ಪಡೆದಿದ್ದ ಸಂಪ್ರದಾಯವಾದಿ ಪೌರ್ವಾತ್ಯ ಚರ್ಚ್ (Orthodox Eastern Church) ತುಲನಾತ್ಮಕವಾಗಿ ಇದಕ್ಕಿಂತ ಉತ್ತಮವಾದ ಮತ್ತು ಪ್ರಾಯೋಗಿಕವಾದ ಕಾನೂನು ರಚಿಸಿದೆ. ಅದರ ಪ್ರಕಾರ ಈ ಕೆಳಗಿನ ಕಾರಣಗಳಿಗಾಗಿ ದಂಪತಿಗಳಲ್ಲಿ ವಿವಾಹ ವಿಚ್ಛೇದನ ಏರ್ಪಡಿಸಬಹುದಾಗಿದೆ.

1. ವ್ಯಭಿಚಾರ ಮತ್ತು ಅದರ ಮೊಕದ್ದಮೆಗಳು.
2. ಧರ್ಮ ತ್ಯಾಗ.
3. ಪತಿಯು ಪಾದ್ರಿಯಾಗಿ ತನ್ನ ಜೀವನವನ್ನು ಧಾರ್ಮಿಕ ಸೇವೆಗೆ ಮುಡಿಪಾಗಿಡುವುದು.
4. ವಿದ್ರೋಹ.
5. ಬಂಡಾಯ.
6. ನಪುಂಸಕತೆ.
7. ಮತಿ ಭ್ರಮಣೆ.
8. ಕುಷ್ಠ ಅಥವಾ ತೊನ್ನು.
9. ದೀರ್ಘಾವಧಿಯ ಸೆರೆವಾಸ.
10. ಪರಸ್ಪರ ದ್ವೇಷ ಅಥವಾ ತೀವ್ರ ಪ್ರತಿಕೂಲ ಸ್ವಭಾವ.

ಆದರೆ ಪಾಶ್ಚಿಮಾತ್ಯ ದೇಶಗಳ ಧಾರ್ಮಿಕ ನಾಯಕರು ಈ ಕಾನೂನನ್ನು ಒಪ್ಪುವುದಿಲ್ಲ. ಅವರು ರೋಮನ್ ಚರ್ಚ್‌ನ ಕರ್ಮಶಾಸ್ತ್ರದ ಮೇಲೆ ವಿಶ್ವಾಸವಿರಿಸಿದವರಾಗಿದ್ದು, ಅದರಲ್ಲಿ ಮರಣದ ಹೊರತು ಬೇರಾವ ಕಾರಣದಿಂದಲೂ ದಾಂಪತ್ಯ ಬಂಧನ ಮುರಿಯುವುದಿಲ್ಲವೆಂದು ಖಚಿತವಾಗಿ ಸಾರಲಾಗಿದೆ. ಈ ಧರ್ಮ ವಿಧಿಯ ಉಪಸ್ಥಿತಿಯಲ್ಲಿ ತಮ್ಮ ಬುದ್ಧಿಯನ್ನು ಉಪಯೋಗಿಸುವುದಂತಿರಲಿ. ತಮ್ಮದೇ ಧರ್ಮದ ಇನ್ನೊಂದು ಕರ್ಮಶಾಸ್ತ್ರವನ್ನೂ ಕೊನೆಗೆ ತೆಗೆದುಕೊಳ್ಳುವುದು ಕೂಡಾ ಅವರಿಗೆ ನಿಷಿದ್ಧವಾಗಿದೆ. 1912ರಲ್ಲಿ ಬಿಷಪ್ ಗೋರ್ ಎಂಬವರು ರಾಯಲ್ ಕಮೀಷನ್‌ನ ಮುಂದೆ, ಪೌರ್ವಾತ್ಯ ಚರ್ಚ್‌ನ ಕರ್ಮಶಾಸ್ತ್ರದಿಂದ ಕೆಲವು ಸಮಸ್ಯೆಗಳಿಗೆ ಪರಿಹಾರ ಪಡೆಯುವುದನ್ನು ವಿರೋಧಿಸುತ್ತಾ ಬ್ರಿಟಿಷ್ ಚರ್ಚ್ ರೋಮನ್ ಚರ್ಚ್‌ನ ಕರ್ಮಶಾಸ್ತ್ರದ ಅನುಯಾಯಿಯಾಗಿದೆ ಎಂಬ ಒಂದೇ ಆಧಾರದಲ್ಲಿ ವಾದಿಸಿದ್ದರು. 1930ರ

ಲಾಂಬೆದ್ ಸಮ್ಮೇಳನದಲ್ಲಿ 'ಯಾರ ಮಾಜಿ ಜೀವನ ಸಂಗಾತಿ ಜೀವಂತವಿರುವರೋ ಅಂತಹ ಯಾವ ಸ್ತ್ರೀ ಪುರುಷರ ವಿವಾಹ ವಿಧಿಯನ್ನೂ ನಾವು ನೆರವೇರಿಸಲಾರೆವು' ಎಂಬ ಸ್ಪಷ್ಟ ತೀರ್ಮಾನ ಕೈಗೊಳ್ಳಲಾಯಿತು. 1935ರಲ್ಲಿ ಇಂಗ್ಲೆಂಡಿನ ಧಾರ್ಮಿಕ ನಾಯಕರ ಒಂದು ಅಧಿವೇಶನವು (Joint Committee of Convocation) ಈ ಕಾನೂನಿನಲ್ಲಿ ಒಂದು ಅಂತಿಮ ಸುಧಾರಣೆ ಮಾಡುವುದಕ್ಕೆ ಒಪ್ಪಿಗೆ ನೀಡಿತ್ತು. ಅದೇನೆಂದರೆ ವಿವಾಹಕ್ಕಿಂತ ಮೊದಲು ದಂಪತಿಗಳ ಪೈಕಿ ಯಾರಾದರೊಬ್ಬರು ಗುಹ್ಯರೋಗಗಳಲ್ಲಿ ಸಿಲುಕಿದ್ದರೆ ಅಥವಾ ಮಹಿಳೆಯು ಬಸುರಿಯಾಗಿದ್ದು ಆಕೆ ತನ್ನ ಗರ್ಭದ ಬಗ್ಗೆ ವಿವಾಹದ ವೇಳೆ ಪತಿಗೆ ತಿಳಿಸದೆ ಇದ್ದರೆ ಅಂತಹ ವಿವಾಹವನ್ನು ಅಸಿಂಧುಗೊಳಿಸಬಹುದು. ಆದರೆ ಮದುವೆಯ ಬಳಿಕ ಇಂತಹ ಸನ್ನಿವೇಶಗಳು ಒದಗಿದರೆ ಪತಿಗಾಗಲೀ ಪತ್ನಿಗಾಗಲೀ ಯಾವುದೇ ಪರಿಹಾರೋಪಾಯ ಇರುವುದಿಲ್ಲ.

ಇದು, ಅನೇಕ ಶತಮಾನಗಳಲ್ಲಿ ಆಗಾಗ ದೊಡ್ಡ ದೊಡ್ಡ ವಿದ್ವಾಂಸರೂ ಧರ್ಮಶಾಸ್ತ್ರಜ್ಞರೂ ಹುಟ್ಟಿ ಬಂದಂತಹ ಧಾರ್ಮಿಕ ವಿಭಾಗದ ವಿಷಯವಾಯಿತು. ಆರಂಭ ಕಾಲದಲ್ಲಿ ಹ. ಈಸಾ(ಅ) ಅವರ ಒಂದು ವಚನದ ತಾತ್ಪರ್ಯವನ್ನು ಮತ್ತು ಅದರ ಕಾನೂನು ಪರ ನೆಲೆಯನ್ನು ನಿರ್ಧರಿಸುವಲ್ಲಿ ಆದ ತಪ್ಪಿನ ಪ್ರಭಾವವು ಅವರ ಮನ ಮಸ್ತಿಷ್ಕಗಳಲ್ಲಿ ಎಷ್ಟು ಆಳವಾಗಿ ಬೇರೂರಿತ್ತೆಂದರೆ ಕಾಲದ ಬದಲಾವಣೆ, ಪರಿಸ್ಥಿತಿಯ ಮಾರ್ಪಾಟು, ವಿದ್ಯೆ ಮತ್ತು ಬುದ್ಧಿಯ ಪ್ರಗತಿ, ಮನುಷ್ಯ ಪ್ರಕೃತಿಯ ಅಧ್ಯಯನ, ನೂರಾರು ವರ್ಷಗಳ ಅನುಭವ, ಬುದ್ಧಿಯ ಸ್ಪಷ್ಟ ತೀರ್ಮಾನ, ಇನ್ನಿತರ ಉತ್ತಮ ಕಾನೂನುಗಳ ಮಾದರಿ ಇತ್ಯಾದಿ ಎಲ್ಲವೂ ಸೇರಿಯೂ ಅವರನ್ನು ಆ ಪ್ರಭಾವದಿಂದ ಮುಕ್ತಗೊಳಿಸಲು ಶಕ್ತವಾಗಲಿಲ್ಲ. ಎರಡು ಸಹಸ್ರ ವರ್ಷಗಳ ದೀರ್ಘಾವಧಿಯಲ್ಲೂ ರೋಮನ್ ಚರ್ಚ್‌ನ ಅತ್ಯುತ್ತಮ ಬುದ್ಧಿವಂತರು ತಮ್ಮ ಈ ಕಾನೂನನ್ನು ಸಂತುಲಿತಗೊಳಿಸುವಲ್ಲಿ ಮತ್ತು ಅದನ್ನು ಸರಿಯಾದ ಸ್ಥಾನದಲ್ಲಿ ತಂದು ನಿಲ್ಲಿಸುವಲ್ಲಿ ಯಶಸ್ವಿಯಾಗಲಿಲ್ಲ.

ಈಗ ನಾವು ಧರ್ಮದ ಕಾನೂನುಗಳಿಂದ ಮುಕ್ತವಾಗಿ ತಮ್ಮ ಜನಾಂಗಗಳಿಗಾಗಿ ಸ್ವತಃ ತಮ್ಮದೇ ವಿದ್ಯೆ ಮತ್ತು ಬುದ್ಧಿಯ ಆಧಾರದಲ್ಲಿ ದಾಂಪತ್ಯ ಕಾನೂನುಗಳನ್ನು ರಚಿಸಿದ ಪ್ರಗತಿಪರ ಚಿಂತಕರಾದ, ವಿದ್ಯಾ ಸಂಪನ್ನರಾದ ಕಾನೂನು ನಿರ್ಮಾತೃಗಳ ಮಹತ್ಸಾಧನೆಗಳನ್ನು ಒಮ್ಮೆ ನೋಡೋಣ.

ಫ್ರೆಂಚ್ ಕ್ರಾಂತಿಯ ಮೊದಲು ಯೂರೋಪಿನ ಹೆಚ್ಚಿನೆಲ್ಲಾ ದೇಶಗಳಲ್ಲಿ ರೋಮನ್ ಕ್ಯಾಥೋಲಿಕ್ ಚರ್ಚ್‌ನ ಕಾನೂನೇ ಜಾರಿಯಲ್ಲಿತ್ತು. ಅದು ಮತ್ತು ಅದರಂತಹ ಇತರ ಕಾನೂನುಗಳು ಸೇರಿ ಪಾಶ್ಚಿಮಾತ್ಯ ಜನಾಂಗಗಳ ಸಾಮಾಜಿಕ ಮತ್ತು ನೈತಿಕ ಜೀವನದಲ್ಲಿ ತೀವ್ರ ಸ್ವರೂಪದ ಅನೇಕ ಕೆಡುಕುಗಳಿಗೆ ಜನ್ಮ ನೀಡಿದ್ದುವು. ಕ್ರಾಂತಿಯ ಕಾಲದಲ್ಲಿ ಸ್ವತಂತ್ರ ವಿಮರ್ಶೆ ಮತ್ತು ಮುಕ್ತ ಚಿಂತನೆಯ ಫಲವಾಗಿ ಮೊಟ್ಟ ಮೊದಲು ಫ್ರೆಂಚರೇ ಈ ಕಾನೂನಿನ ಕುಂದು ಕೊರತೆಗಳನ್ನು ಕಂಡು ಕೊಂಡರು. ಧರ್ಮ ಪಂಡಿತರು ಅದರಲ್ಲಿ ಯಾವುದೇ ರೀತಿಯ ಸುಧಾರಣೆಗೆ ಮುಂದಾಗಲಾರರೆಂದು ಮನಗಂಡ ಬಳಿಕ ಅವರು ಆ ಕಾನೂನಿನ ನೊಗವನ್ನೇ

ತಮ್ಮ ಕೊರಳಿನಿಂದ ಕಿತ್ತೆಸೆದರು. 1792ರ ಬಳಿಕ ಇದೇ ಗಾಳಿ ಇತರ ದೇಶಗಳಲ್ಲಿಯೂ ಬೀಸತೊಡಗಿತು. ಕ್ರಮೇಣ ಇಂಗ್ಲೆಂಡ್, ಜರ್ಮನಿ, ಆಸ್ಟ್ರೇಲಿಯಾ, ಬೆಲ್ಜಿಯಂ, ಹಾಲೆಂಡ್, ಸ್ವೀಡನ್, ಡೆನ್ಮಾರ್ಕ್, ಸ್ವಿಝರ್‌ಲೇಂಡ್ ಇತ್ಯಾದಿ ರಾಷ್ಟ್ರಗಳು ಧಾರ್ಮಿಕ ಕಾನೂನನ್ನು ತೊರೆದು ತಂತಮ್ಮ ಪ್ರತ್ಯೇಕ ದಾಂಪತ್ಯ ಕಾನೂನುಗಳನ್ನು ರಚಿಸಿಕೊಂಡವು. ಅವುಗಳಲ್ಲಿ ವಿವಾಹವನ್ನು ಮುರಿಯುವುದಕ್ಕೆ ಮತ್ತು ನ್ಯಾಯಾಂಗ ಬೇರ್ಪಡಿಗೆ ಮಾತ್ರವಲ್ಲದೆ ವಿಚ್ಛೇದನಕ್ಕೆ ಕೂಡಾ ಅವಕಾಶವನ್ನು ಇರಿಸಲಾಗಿತ್ತು.

ಈ ರೀತಿ ಕ್ರೈಸ್ತ ಜನಾಂಗಗಳ ಒಂದು ಬಹು ದೊಡ್ಡ ವಿಭಾಗವು ತಮ್ಮ ಕಾನೂನಿಂದ ಸ್ವತಂತ್ರ್ಯವಾಯಿತು. ಇದು ಕ್ರೈಸ್ತ ವಿದ್ವಾಂಸರು ತಮ್ಮ ಸಂಕುಚಿತ ಮನೋಭಾವ, ಅಜ್ಞಾನ ಮತ್ತು ಪಕ್ಷಪಾತಗಳಿಂದಾಗಿ ಒಂದು ವ್ಯಾವಹಾರಿಕವಲ್ಲದ ಅಪ್ರಾಕೃತಿಕ ಮತ್ತು ಅತ್ಯಂತ ಹಾನಿಕಾರಕ ಕಾನೂನನ್ನು ಧಾರ್ಮಿಕ ಶಕ್ತಿಯ ಬಲದಿಂದ ಜನರ ಮೇಲೆ ಒತ್ತಾಯ ಪೂರ್ವಕ ಹೇರುವಂತಹ ಹಠಮಾರಿತನವನ್ನು ತೋರಿದ್ದ ನೇರ ಪರಿಣಾಮವಾಗಿತ್ತು. ಇದು ದೈವಿಕ ಶಾಸನವಾಗಿರಲಿಲ್ಲ. ಕೇವಲ ಕೆಲವು ಮನುಷ್ಯರ ಸಂಶೋಧನೆಯ ಫಲವಾಗಿತ್ತು. ಆದರೆ ಪಾದ್ರಿಗಳು ಅದನ್ನು ದೈವಿಕ ಶಾಸನದಂತೆ ಪವಿತ್ರ ಮತ್ತು ಅಪರಿವರ್ತನೀಯವೆಂದು ಸಾರಿದರು. ಅವರು ಅದರಲ್ಲಿರುವ ಸ್ಪಷ್ಟ ತಪ್ಪುಗಳನ್ನೂ ಹಾನಿಗಳನ್ನೂ ವಿವೇಕಹೀನತೆಯನ್ನೂ ನೋಡಲು ಮತ್ತು ತಿಳಿಯಲು ನಿರಾಕರಿಸಿದ್ದರು. ಸೈಂಟ್‌ಪಾಲ್ ಮತ್ತಿತರ ಆರಂಭ ಕಾಲದ ವಿದ್ವಾಂಸರು ರಚಿಸಿದ ಕಾನೂನಿನಲ್ಲಿ ತಪ್ಪು ಇರುವ ಸಾಧ್ಯವಿದೆಯೆಂದು ಅನುಮಾನಿಸಿದರೂ ಎಲ್ಲಿ ತಮ್ಮ ಧರ್ಮ ವಿಶ್ವಾಸವೇ ಕಸಿಯಲ್ಪಡುವುದೋ ಎಂದು ಅವರಿಗೆ ಭಯವಿತ್ತು. ಕೊನೆಗೆ ಅವರು ತಮ್ಮದೇ ಧರ್ಮದ ಇನ್ನೊಂದು ಕರ್ಮಶಾಸ್ತ್ರದ ಅನುಕರಣೆಯನ್ನು ಕೂಡಾ ವಿರೋಧಿಸಿದರು. ಅದು ಕೂಡಾ ಪಾಶ್ಚಿಮಾತ್ಯ ಚರ್ಚ್‌ನ ಕಾನೂನು ಪೌರ್ವಾತ್ಯ ಚರ್ಚ್‌ನ ಕಾನೂನಿಗಿಂತ ಉತ್ತಮವಿದೆ ಎಂಬ ಆಧಾರದಲ್ಲಿ ಅಲ್ಲ, ಕೇವಲ ನಾವು ಪಾಶ್ಚಿಮಾತ್ಯ(ರೋಮನ್) ಚರ್ಚ್‌ನ ಅನುಯಾಯಿಗಳು ಎಂಬ ಕಾರಣಕ್ಕಾಗಿ! ಧಾರ್ಮಿಕ ನಾಯಕರ ಈ ಪ್ರವೃತ್ತಿಯಿಂದಾಗಿ ಪಾಶ್ಚಾತ್ಯ ಜನಾಂಗಗಳಿಗೆ ಹಾನಿಗಳು ಬಹಿರಂಗಗೊಂಡ ಬಳಿಕವೂ ಸುಧಾರಣೆಯ ಅಗತ್ಯವನ್ನು ಮನಗಾಣದ ಕಾನೂನನ್ನೇ ಕಿತ್ತೆಸೆಯುವ ಹೊರತು ಅನ್ಯ ಮಾರ್ಗವೇ ಇಲ್ಲದಾಯಿತು.

ಕೇವಲ ದಾಂಪತ್ಯ ಕಾನೂನಿನ ಮಾತೇಕೆ? ನಿಜವಾಗಿ ಈ ಪೌರೋಹಿತ್ಯ ನೀತಿಯೇ ಯುರೋಪಿನ ಜನಾಂಗಗಳನ್ನು ನಾಸ್ತಿಕತೆ ಮತ್ತು ಧರ್ಮರಾಹಿತ್ಯದೆಡೆಗೂ ಕೊಂಡೊಯ್ಯಿತು.

ಧಾರ್ಮಿಕ ಕಾನೂನುನಿಂದ ಮುಕ್ತವಾಗಿ ಪಾಶ್ಚಿಮಾತ್ಯ ರಾಷ್ಟ್ರಗಳು ಕಳೆದ ಎಪ್ಪತ್ತು ಎಂಭತ್ತು ವರ್ಷಗಳಲ್ಲಿ ರಚಿತವಾಗಿರುವ ದಾಂಪತ್ಯ ಕಾನೂನುಗಳ ನಿರ್ಮಾಣದಲ್ಲಿ ಸಹಸ್ರಾರು ಬುದ್ಧಿಜೀವಿಗಳು ತಮ್ಮ ಅತ್ಯುತ್ತಮ ಪ್ರತಿಭೆಗಳನ್ನು ತೊಡಗಿಸಿದ್ದಾರೆ ಮತ್ತು ಅದರಲ್ಲಿ ಕಾಲ ಕಾಲಕ್ಕೆ ತಮ್ಮ ಅನುಭವಗಳ ಆಧಾರದಲ್ಲಿ ಅನೇಕ ಬದಲಾವಣೆ ಮತ್ತು ಸುಧಾರಣೆಗಳನ್ನು ಮಾಡಿದ್ದಾರೆ. ಆದರೆ ಇಷ್ಟಾಗಿಯೂ ಅರೇಬಿಯಾದ ಓರ್ವ ನಿರಕ್ಷರಿ ಪ್ರವಾದಿ(ಸ) ಸಮರ್ಪಿಸಿದ ಕಾನೂನಿನಲ್ಲಿ ಕಂಡು ಬರುವಂತಹ ಸಮತೋಲನ ಮತ್ತು ನ್ಯಾಯನಿಷ್ಠೆ ಅದರಲ್ಲಿ ಕಂಡು

ಬರುವುದಿಲ್ಲ. ಮಾತ್ರವಲ್ಲ ಧಾರ್ಮಿಕ ಕಾನೂನಿನಿಂದ ಮುಕ್ತವಾದ ಬಳಿಕವೂ ಐರೋಪ್ಯರಿಗೆ, ತಾವು ರೋಮನ್ ಚರ್ಚ್‌ನ ಸ್ಥಾಪಕರಿಂದ ಅನುವಂಶಿಕವಾಗಿ ಪಡೆದ ವಿಚಾರಗಳಿಂದ ತಮ್ಮ ಮನ ಮಸ್ತಿಷ್ಕಗಳನ್ನು ಮುಕ್ತಗೊಳಿಸಲು ಸಾಧ್ಯವಾಗಿಲ್ಲ.

ಉದಾಹರಣೆಗೆ ಇಂಗ್ಲೆಂಡಿನ ಕಾನೂನನ್ನೇ ತೆಗೆದುಕೊಳ್ಳಿ. 1857ರ ತನಕ ಅಲ್ಲಿ ಕೇವಲ ವ್ಯಭಿಚಾರ ಮತ್ತು ಅಕ್ರಮ ವ್ಯವಹಾರಗಳನ್ನು ಮಾತ್ರ ನ್ಯಾಯಾಂಗ ಬೇರ್ಪಡೆಗೆ ಸರಿಯಾದ ಕಾರಣವೆಂದು ಪರಿಗಣಿಸಲಾಗುತ್ತಿತ್ತು. ದಂಪತಿಗಳು ಮರು ವಿವಾಹಕ್ಕೆ ಸ್ವತಂತ್ರರಾಗುವಂತಹ ತಲಾಕ್ ಅಥವಾ ವಿವಾಹ ವಿಚ್ಛೇದನ ಅಲ್ಲಿಯ ವರೆಗೆ ಅಲ್ಲಿ ನಿಷಿದ್ಧವಾಗಿತ್ತು. 1857ರ ಕಾನೂನಿನಲ್ಲಿ ಮೇಲ್ಕಾಣಿಸಿದ ಎರಡು ಕಾರಣಗಳಲ್ಲದೆ 'ಈಲಾ' ಅಥವಾ ಸಂಬಂಧ ತೊರೆಯುವುದನ್ನು(Desertion) ಕೂಡಾ ನ್ಯಾಯಾಂಗ ಬೇರ್ಪಡೆಗೆ ಒಂದು ಸಕಾರಣವೆಂದು ಪರಿಗಣಿಸಲಾಯಿತು. ಆದರೆ ಇದಕ್ಕೆ ಒಂದು ಶರತ್ತನ್ನು ಒಡ್ಡಲಾಗಿತ್ತು. ಅದೇನೆಂದರೆ ಈ ಸಂಬಂಧ ತೊರೆಯುವಿಕೆಯು ಎರಡು ವರ್ಷ ಅಥವಾ ಅದಕ್ಕಿಂತ ಹೆಚ್ಚಿನ ಅವಧಿಯ ವರೆಗೆ ಜಾರಿಯಲ್ಲಿರಬೇಕು.

ಇದೇ ಕಾನೂನಿನಲ್ಲಿ ತಲಾಕನ್ನು (ಅಂದರೆ ವಿವಾಹ ಬಂಧನದಿಂದ ಪೂರ್ಣ ಬಿಡುಗಡೆಯನ್ನು) ಕೂಡಾ ಕಾನೂನುಬದ್ಧಗೊಳಿಸಲಾಯಿತು. ಆದರೆ ಪತಿಯು ಸ್ವಯಂ ತಲಾಕ್ ನೀಡಬಾರದು. ಅದಕ್ಕಾಗಿ ಕೋರ್ಟಿಗೆ ಹೋಗಬೇಕು ಎಂಬ ನಿಯಮವನ್ನು ಹೇರಲಾಯಿತು. ಅಂತೆಯೇ ಪತ್ನಿ ತಲಾಕ್ ಪಡೆಯ ಬಯಸಿದರೂ ಮನೆಯಲ್ಲೇ ಅದನ್ನು ಇತ್ಯರ್ಥಗೊಳಿಸುವಂತಿಲ್ಲ. ಅದಕ್ಕೂ ಅವಳು ನ್ಯಾಯಾಲಯವನ್ನೇ ಸಂಪರ್ಕಿಸಬೇಕು. ನ್ಯಾಯಾಲಯಕ್ಕೂ ತಲಾಕ್ ನೀಡಲು ಕೇವಲ ಒಂದು ಸನ್ನಿವೇಶದಲ್ಲಿ ಮಾತ್ರ ಅವಕಾಶ ನೀಡಲಾಗಿತ್ತು. ಅದೇನೆಂದರೆ ಪತಿ ತಲಾಕ್ ನೀಡ ಬಯಸಿದರೆ ಆತ ಪತ್ನಿಯ ವ್ಯಭಿಚಾರವನ್ನು ಸಾಬೀತುಗೊಳಿಸಬೇಕು. ಪತ್ನಿ ತಲಾಕ್ ಪಡೆಯ ಬಯಸಿದರೆ ಆಕೆ ಪತಿಯ ವ್ಯಭಿಚಾರವನ್ನು ಅಥವಾ ಅತಿರೇಕವನ್ನು ಸಾಬೀತುಗೊಳಿಸಬೇಕು. ಈ ರೀತಿ ಪತಿ-ಪತ್ನಿಯರು ಯಾವ ಕಾರಣಕ್ಕಾಗಿ ವಿವಾಹ ವಿಚ್ಛೇದನ ನಡೆಸ ಬಯಸಿದರೂ ಅವರು ಪರಸ್ಪರ ವ್ಯಭಿಚಾರದ ಆರೋಪ ಹೊರಿಸುವುದನ್ನು ಕಡ್ಡಾಯಗೊಳಿಸಿದಂತಾಯಿತು. ಮಾತ್ರವಲ್ಲ ಅದನ್ನು ಒಂದು ಬಹಿರಂಗ ನ್ಯಾಯಾಲಯದಲ್ಲಿ ಅದರ ಪುರಾವೆ ನೀಡಿ ಸಮಾಜದಲ್ಲಿ ಓರ್ವ ವ್ಯಕ್ತಿಯ ಜೀವನವನ್ನು ಶಾಶ್ವತವಾಗಿ ಕಳಂಕಿತಗೊಳಿಸುವುದು ಕೂಡಾ ಅನಿವಾರ್ಯವಾಗಿತ್ತು. ಈ ಕಾನೂನಿಂದಾಗಿ ವ್ಯಭಿಚಾರದ ಮಿಥ್ಯಾರೋಪಗಳನ್ನು ಹೊರಿಸುವ ಸರಮಾಲೆಯೇ ಆರಂಭವಾಯಿತು. ನ್ಯಾಯಾಲಯಗಳನ್ನು, ಸಮಾಜದ ಎಲ್ಲಾ ಕೊಳಕುಗಳನ್ನು ಒಗೆಯುವ ಸ್ಥಳವಾಗಿ ಮಾರ್ಪಡಿಸಲಾಯಿತು. ನ್ಯಾಯಾಲಾಯಗಳಲ್ಲಿನ ಇಂತಹ ವಿಚ್ಛೇದನ ಮೊಕದ್ದಮೆಗಳ ಪ್ರಕಟನೆಯೇ ಅಶ್ಲೀಲತೆಯ ಪ್ರಚಾರಕ್ಕೆ ಹೇತುವಾಯಿತು. ಮಾತ್ರವಲ್ಲ ಈ ಕಾನೂನು ಪತಿಯಂದಿರಿಗೆ ತಮ್ಮ ಪತ್ನಿಯರಿಂದ ಸೂಳೆಗಾರಿಕೆ ಮಾಡಿಸುವ ವಿದ್ಯೆಯನ್ನು ಕಲಿಸಿತು. ಏಕೆಂದರೆ ಈ ಕಾನೂನಿನ ಪ್ರಕಾರ ತನ್ನ ಪತ್ನಿಯೊಡನೆ ಅನೈತಿಕ ಸಂಬಂಧ ಇಟ್ಟುಕೊಂಡವನಿಂದ ಪತಿಯು

ಪರಿಹಾರ ಧನವನ್ನು ಕೇಳಬಹುದಾಗಿತ್ತು. ಪರಿಹಾರ ಧನವೆಂದರೆ ತನ್ನ ಪತ್ನಿಯ ಶೀಲದ ಬೆಲೆ! ದಲ್ಲಾಳಿಗಳ ಆದಾಯವಾಗಿರುವ ಅನೈತಿಕ ಸಂಬಂಧದ ಬೆಲೆ!!

1886ರ ಕಾನೂನಿನ ಪ್ರಕಾರ ನ್ಯಾಯಾಲಯಕ್ಕೆ ವಿವಾಹ ವಿಚ್ಛೇದನ ಮಾಡಿಸುವ ಜೊತೆಗೆ ತಪ್ಪಿತಸ್ಥ ಪತಿಯ ಮೇಲೆ ಪತ್ನಿಗೆ ಜೀವನಾಂಶ ನೀಡುವ ಭಾರವನ್ನು ಹಾಕುವ ಅಧಿಕಾರವಿತ್ತು. 1907ರ ಕಾನೂನಿನಲ್ಲಿ ತಪ್ಪಿತಸ್ಥ ಪತಿ ಎಂಬ ಶರ್ತವನ್ನು ತೆಗೆದು ಹಾಕಲಾಯಿತು. ನ್ಯಾಯಾಲಯವು ತನಗೆ ಸರಿಕಂಡಲ್ಲಿ, ಯಾವ ಪತಿಯ ಮೇಲೂ ವಿಚ್ಛೇದಿತ ಪತ್ನಿಯ ಜೀವನಾಂಶವನ್ನು ಹೊರಿಸಬಹುದಾಗಿತ್ತು. ಇದು ಮಹಿಳೆಯರ ಪರ ಸ್ಪಷ್ಟವಾದ ಪಕ್ಷಪಾತವಾಗಿತ್ತು. ಇಲ್ಲಿ ಸಮತೋಲನವು ಪೂರ್ಣವಾಗಿ ಮಾಯವಾದಂತೆ ಗೋಚರಿಸುತ್ತದೆ. ಸ್ತ್ರೀ-ಪುರುಷರ ಮಧ್ಯೆ ಯಾವ ಸಂಬಂಧವೂ ಉಳಿಯದಿರುವಾಗ ಕೇವಲ ಹಿಂದಿನ ಸಂಬಂಧದ ಆಧಾರದಲ್ಲಿ ಓರ್ವ ಪರ ಪುರುಷನಿಂದ ಪರ ಸ್ತ್ರೀಗೆ ಜೀವನಾಂಶ ಕೊಡಿಸುವುದು- ಈ ಜೀವನಾಂಶಕ್ಕೆ ಪ್ರತಿಯಾಗಿ ಆತನಿಗೇನೂ ಸಿಗದಿರುವಾಗ ಹೀಗೆ ಮಾಡುವುದು ಬುದ್ಧಿಗೆ ನಿಲುಕುವಂತಹದ್ದೂ ಅಲ್ಲ, ಅದನ್ನು ನ್ಯಾಯ ಪೂರ್ಣವೆನ್ನಲೂ ಸಾಧ್ಯವಿಲ್ಲ.

1895ರ ಕಾನೂನು ಪ್ರಕಾರ ಪತಿಯ ಅಕ್ರಮ ಅನ್ಯಾಗಳಿಂದಾಗಿ ಪತ್ನಿಯು ಆತನ ಮನೆ ಬಿಟ್ಟು ಹೊರಟರೆ ಮತ್ತು ಆತನಿಂದ ದೂರವಾಗಿಯೇ ಉಳಿದರೆ ನ್ಯಾಯಾಲಯವು ಆತನನ್ನು ಆಕೆಯ ಬಳಿ ಹೋಗದಂತೆ ತಡೆಯಬಹುದೆಂದು ನಿರ್ಣಯಿಸಲಾಯಿತು. ಮಾತ್ರವಲ್ಲ ನ್ಯಾಯಾಲಯವು ಆತನಿಂದ ಆಕೆಗೆ ಜೀವನಾಂಶವನ್ನು ಕೊಡಿಸುವುದು. ಮಕ್ಕಳನ್ನು ತನ್ನ ಬಳಿಯೇ ಇಟ್ಟುಕೊಳ್ಳುವ ಹಕ್ಕು ಕೂಡಾ ತಾಯಿಗೆ ಇರುವುದು ಎಂದೂ ತೀರ್ಮಾನಿಸಲಾಯಿತು. ಇದೇ ಕಾನೂನಿನ ಪ್ರಕಾರ ಪತಿಯ ಕೆಟ್ಟವರ್ತನೆ ಅಥವಾ ನಿರ್ಲಕ್ಷ್ಯದ ಕಾರಣ ಪತ್ನಿಯು ವ್ಯಭಿಚಾರವೆಸಗಿದರೆ ಆ ಕಾರಣಕ್ಕಾಗಿ ಆಕೆಯನ್ನು ವಿಚ್ಛೇದಿಸಲು ಪತಿಯು ಹೂಡುವ ದಾವೆಯನ್ನು ಕೋರ್ಟು ಆಲಿಸದು. ಇದರ ಅರ್ಥವೇನೆಂದರೆ ತುಸು ಗಮನಿಸಿರಿ. ಪತಿಯ ಅಕ್ರಮವನ್ನು ತಡೆಯಲಾರದೆ ಪತ್ನಿಯು ಸಹವಾಸ ತೊರೆದರೆ ಪತಿಯು ಆಕೆಯನ್ನು ಸಮೀಪಿಸುವಂತಿಲ್ಲ. ಖರ್ಚಿಗೆ ಹಣ ಆತನಿಂದ ಪಡೆದು ಜೀವನದ ಸುಖವನ್ನೂ ಸ್ನೇಹಿತರಿಂದ ಪಡೆಯಬಹುದು! ಒಂದು ವೇಳೆ ಪತಿಯು ಇಂತಹ ಪತ್ನಿಯನ್ನು ತೊರೆಯ ಬಯಸಿದರೆ ಆತನಿಗೆ ಅದಕ್ಕೆ ಆಸ್ಪದವಿಲ್ಲ. ಇದು 19ನೇ ಶತಮಾನದ ಕೊನೆಯಲ್ಲಿ 50 ವರ್ಷಗಳ ಸತತ ವಿಚಾರ ಮಂಥನಗಳ ಬಳಿಕ ಬ್ರಿಟನ್‌ನ ಅತ್ಯುತ್ತಮ ಬುದ್ಧಿವಂತರು ರಚಿಸಿದ ದಾಂಪತ್ಯ ಕಾನೂನು.

1910ರಲ್ಲಿ ತಲಾಕ್ ಮತ್ತು ದಾಂಪತ್ಯ ವ್ಯವಹಾರಗಳ ಬಗ್ಗೆ ಸಮಾಲೋಚನೆ ನಡೆಸಲಿಕ್ಕಾಗಿ ಒಂದು ರೋಯಲ್ ಕಮೀಷನ್ ನೇಮಕಗೊಂಡಿತು. ಮೂರು ವರ್ಷಗಳ ಪರಿಶ್ರಮದ ಬಳಿಕ1912ರ ಕೊನೆಯಲ್ಲಿ ಅದು ತನ್ನ ವರದಿಯನ್ನು ಸಮರ್ಪಿಸಿತು. ಆ ವರದಿಯಲ್ಲಿ ಮುಂದಿಡಲಾದ ಸಲಹೆಗಳ ಪೈಕಿ ಕೆಲವು ಈ ಕೆಳಗಿನಂತಿವೆ;

1. ತಲಾಕ್‌ನ ಕಾರಣಗಳ ವಿಷಯದಲ್ಲಿ ಸ್ತ್ರೀ-ಪುರುಷರನ್ನು ಸಮಾನರೆಂದು ಪರಿಗಣಿಸಬೇಕು. ಅರ್ಥಾತ್ ಯಾವ ಕಾರಣಕ್ಕಾಗಿ ಪತಿಯು ತಲಾಕ್‌ನ ಅನುಮತಿ ಪಡೆಯಲು ಅರ್ಹನಾಗುತ್ತಾನೋ

ಆದೇ ಕಾರಣಕ್ಕಾಗಿ ಪತ್ನಿಯೂ ತಲಾಕ್ ಪಡೆಯಲು ಅರ್ಹಳಾಗಿರಬೇಕು. ಉದಾ: ಪತಿಯು ಒಮ್ಮೆಯಾದರೂ ವ್ಯಭಿಚಾರವೆಸಗಿದರೆ ಪತ್ನಿಯು ಆತನಿಂದ ತಲಾಕ್ ಪಡೆಯಲು ಅರ್ಹಳಾಗಬೇಕು.

2. ತಲಾಕ್‌ಗೆ ಈ ಹಿಂದೆ ಇದ್ದ ಕಾರಣಗಳಿಗೆ ಈ ಕೆಳಗಿನ ಸೇರ್ಪಡೆಯನ್ನು ಶಿಫಾರಸ್ಸು ಮಾಡಲಾಯಿತು:

ಮೂರು ವರ್ಷಗಳ ತನಕ ಸಂಬಂಧ ತೊರೆಯುವುದು, ದುರ್ವರ್ತನೆ, ಐದು ವರ್ಷಗಳ ತನಕ ವಾಸಿಯಾಗದ ಹುಚ್ಚು, ವಾಸಿ ಮಾಡಲು ಅಸಾಧ್ಯವಾದಂತಹ ಮದ್ಯಪಾನ ಚಟ (ಪಾಶ್ಚಿಮಾತ್ಯ ಪಾರಿಭಾಷಿಕದಲ್ಲಿ ಮದ್ಯಪಾನ ಚಟವೆಂದರೆ ಕೇವಲ ಮದ್ಯಪಾನದ ಅಭ್ಯಾಸವಾಗಿ ಬಿಡುವುದು ಅಲ್ಲ. ಮಿತಿಮೀರಿ ಮದ್ಯಪಾನ ಮಾಡಿ ರಂಪಾಟ ಮಾಡುವುದು, ಹೊಡೆಯುವುದು, ಬಡಿಯುವುದು, ಬಯ್ಯುವುದು ಮತ್ತು ಬೀದಿಯಲ್ಲಿ ಅಸಹ್ಯವಾಗಿ ವರ್ತಿಸುವುದನ್ನು ಮಾತ್ರ ಅಲ್ಲಿ ಮದ್ಯಪಾನ ಚಟವೆನ್ನುತ್ತಾರೆ.) ಹಾಗೂ ಮರಣ ದಂಡನೆಯಿಂದ ಕಡಿತಗೊಂಡು ಸಿಕ್ಕಿದ ಜೈಲುವಾಸ.

3. ಮದ್ಯಪಾನ ಚಟದ ಕಾರಣ ಮೂರು ವರ್ಷಗಳ ಮಟ್ಟಿಗೆ ದಂಪತಿಗಳನ್ನು ಬೇರ್ಪಡಿಸಬೇಕು. ಈ ಅವಧಿಯಲ್ಲಿ ಆ ಚಟ ಬಿಟ್ಟು ಹೋಗದಿದ್ದರೆ ತೊಂದರೆಗೀಡಾದವರಿಗೆ ತಲಾಕ್‌ನ ವಿಧಿ ಪಡೆಯುವ ಹಕ್ಕು ಇರಬೇಕು.

4. ವಿವಾಹಕ್ಕಿಂತ ಮೊದಲು ದಂಪತಿಗಳ ಪೈಕಿ ಯಾರಿಗಾದರೂ ಹುಚ್ಚು ಅಥವಾ ಗುಹ್ಯರೋಗವಿದ್ದು ಅದನ್ನು ಬಾಳ ಸಂಗಾತಿಗೆ ತಿಳಿಸದೇ ಇದ್ದರೆ ಅಥವಾ ಸ್ತ್ರೀಯು ಬಸುರಿಯಾಗಿದ್ದು ತನ್ನ ಗರ್ಭಧಾರಣೆಯನ್ನು, ರಹಸ್ಯವಾಗಿ ಇರಿಸಿದ್ದರೆ ಅದನ್ನು ವಿಚ್ಛೇದನಕ್ಕೆ ಸಕಾರಣವೆಂದು ಪರಿಗಣಿಸಲಾಗುವುದು.

5. ತಲಾಕ್ ವ್ಯಾಜ್ಯಗಳ ವರದಿಯನ್ನು ಮೊಕದ್ದಮೆ ನಡೆಯುತ್ತಿರುವಾಗ ಪ್ರಕಟಿಸಬಾರದು ತೀರ್ಪಾದ ಬಳಿಕ ನ್ಯಾಯಾಲಯ ಯಾವುದನ್ನು ಪ್ರಕಟಿಸುವ ಅನುಮತಿ ನೀಡುತ್ತದೋ ಅದನ್ನು ಮಾತ್ರ ಪ್ರಕಟಿಸಬಹುದು.

ಈ ಸಲಹೆಗಳ ಪೈಕಿ ಅತ್ಯಂತ ಅಸಮಂಜಸವಾದ ಪ್ರಥಮ ಸಲಹೆಯನ್ನು ಮಾತ್ರ ಅಂಗೀಕರಿಸಿ ಅದನ್ನು 1923ರ ದಾಂಪತ್ಯ ವ್ಯವಹಾರಗಳ ಕಾನೂನಿ(Matrimonial Cases Act)ನಲ್ಲಿ ಪ್ರಕಟಿಸಲಾಯಿತು. ಉಳಿದ ಯಾವ ಸಲಹೆಗೂ ಕಾನೂನಿನ ರೂಪ ನೀಡಲಾಗಿಲ್ಲ. ಏಕೆಂದರೆ ಕೇಂಟರ್‌ಬರಿಯ ಬಿಷಪರು ಮತ್ತು ಇತರ ಕೆಲವು ಪ್ರಭಾವಶಾಲಿ ವ್ಯಕ್ತಿಗಳು ಅದಕ್ಕೆ ವಿರುದ್ಧವಾಗಿದ್ದರು.

ಸ್ತ್ರೀ ಮತ್ತು ಪುರುಷನ ವ್ಯಭಿಚಾರದ ನಡುವಣ ಕಾನೂನು ಪರ ಮತ್ತು ಸ್ವಾಭಾವಿಕ ವ್ಯತ್ಯಾಸವನ್ನು ಇಂಗ್ಲೆಂಡಿನ ದೊಡ್ಡ ದೊಡ್ಡ ಕಾನೂನು ತಜ್ಞರು ತಿಳಿಯದಾದರು. ಇದರಿಂದ ಕಾನೂನಿನಲ್ಲಿ ಅವರ ಪ್ರಾವೀಣ್ಯತೆ ಎಷ್ಟೆಂಬುದನ್ನು ಊಹಿಸಬಹುದಾಗಿದೆ. ಈ ರೀತಿಯ ತಪ್ಪು ಕಾನೂನು ಜಾರಿ ಮಾಡಿದುದರಿಂದ ಪತಿಯಂದಿರ ವಿರುದ್ಧ ಪತ್ನಿಯರ ವಿಚ್ಛೇದನ ಮೊಕದ್ದಮೆಗಳು

ನ್ಯಾಯಾಲಯಗಳಲ್ಲಿ ತುಂಬಿ ಹೋದವು. 1928ರಲ್ಲಿ ಲಾರ್ಡ್ ಮೆರಿವೇಲ್ ಅವರು ಇದನ್ನು ತಡೆಯಲು ಕ್ರಮಗೊಳ್ಳಬೇಕಾಯಿತು.

ರೋಮನ್ ಚರ್ಚ್‌ನ ಪ್ರಭಾವ ವಲಯದಲ್ಲಿರುವ ಐರೋಪ್ಯ ರಾಷ್ಟ್ರಗಳಲ್ಲಿ ಇಂದಿಗೂ ದಾಂಪತ್ಯ ಸಂಬಂಧವು ಮುರಿಯಲಾರದ ಸಂಬಂಧವೆನಿಸಿದೆ. ಕೇವಲ ಕೆಲವು ವಿಶೇಷ ಸಂದರ್ಭಗಳಲ್ಲಿ ನ್ಯಾಯಾಂಗ ಬೇರ್ಪಡೇ (Judicial Seperation) ಮಾಡಬಹುದಾಗಿದೆ. ಆದರೆ ಇಂತಹ ಬೇರ್ಪಡೆಯ ಬಳಿಕ ಪರಸ್ಪರ ಒಗ್ಗೂಡಿ ಬಾಳುವಂತೆಯೂ ಇಲ್ಲ; ಬೇರ್ಪಟ್ಟು ಮರು ವಿವಾಹ ಮಾಡುವಂತೆಯೂ ಇಲ್ಲ. ಐರ್‌ಲೇಂಡ್ ಮತ್ತು ಇಟಲಿಯ ಕಾನೂನುಗಳು ಕೂಡಾ ಈ ನಿಯಮದ ಮೇಲೆ ಆಧಾರಿತವಾಗಿವೆ.

ಫ್ರಾನ್ಸ್‌ನಲ್ಲಿ ದಾಂಪತ್ಯ ಕಾನೂನು ಬಹಳ ಏರಿಳಿತಗಳನ್ನು ಕಂಡಿದೆ. ಕ್ರಾಂತಿಯ ಬಳಿಕ ಅಲ್ಲಿ ವಿವಾಹ ವಿಚ್ಛೇದನವನ್ನು ಅತ್ಯಂತ ಸರಳಗೊಳಿಸಲಾಗಿದೆ. ನೆಪೊಲಿಯನ್‌ನ ಕಾನೂನಿ(Code of Nepolian)ನಲ್ಲಿ ಅದಕ್ಕೆ ಕೆಲವು ನಿರ್ಬಂಧಗಳನ್ನು ಹೇರಲಾಯಿತು. 1816ರಲ್ಲಿ ಅದನ್ನು ಪೂರ್ಣವಾಗಿ ನಿಷೇಧಿಸಲಾಯಿತು. 1884ರಲ್ಲಿ ಮತ್ತೆ ಅದು ಕಾನೂನುಬದ್ಧವಾಯಿತು. ತರುವಾಯ 1886, 1907 ಮತ್ತು 1924ರಲ್ಲಿ ಅದಕ್ಕೆ ಅನೇಕ ಕಾನೂನುಗಳನ್ನು ರಚಿಸಲಾಯಿತು ಮತ್ತು ತಲಾಕ್‌ಗೆ ಈ ಕೆಳಗಿನ ಕಾರಣಗಳನ್ನು ಮಾನ್ಯ ಮಾಡಲಾಯಿತು.

ದಂಪತಿಗಳ ಪೈಕಿ ಯಾರಾದರೊಬ್ಬರು ವ್ಯಭಿಚಾರವೆಸಗುವುದು, ಅಕ್ರಮ ವ್ಯವಹಾರ, ದಂಪತಿಗಳು ಪರಸ್ಪರ ಮಾನ ಹಾನಿ ಮಾಡುವುದು, ದಾಂಪತ್ಯ ಕರ್ತವ್ಯವನ್ನು ನಿರ್ವಹಿಸಲು ನಿರಾಕರಿಸುವುದು, ಮದ್ಯ ವ್ಯಸನ, ನ್ಯಾಯಾಲಯದಿಂದ ನಿಂದನಾತ್ಮಕ ಶಿಕ್ಷೆ.

ಇದಲ್ಲದೆ ನ್ಯಾಯಾಲಯದಿಂದ ವಿವಾಹ ವಿಚ್ಛೇದನದ ವಿಧಿ ಪಡೆದ ಬಳಿಕ ಮಹಿಳೆಯು 300 ದಿನಗಳ ಇದ್ದತ್ ಆಚರಿಸಬೇಕೆಂದು ನಿಶ್ಚಯಿಸಲಾಯಿತು. ಇದು ಇಸ್ಲಾಮೀ ಕಾನೂನಿನ ಅಪೂರ್ಣ ಅನುಕರಣೆಯಾಗಿದೆ.*

ಯೂರೋಪಿನ ಇತರ ರಾಷ್ಟ್ರಗಳಲ್ಲಿ ತಲಾಕ್‌ನ ಕಾನೂನು ಪರಸ್ಪರ ತೀರ ಭಿನ್ನವಾಗಿದೆ. ಆದರೆ ಅವೆಲ್ಲವೂ ಅಪಕ್ವತೆ ಮತ್ತು ಅಸಂತುಲಿತೆಯಲ್ಲಿ ಸಮಾನವಾಗಿದೆ.

ಆಸ್ಟ್ರೇಲಿಯಾ, ಬೆಲ್ಜಿಯಂ, ಸ್ವಿಝರ್‌ಲೇಂಡ್ ಮತ್ತು ನಾರ್ವೆಯಲ್ಲಿ ದಂಪತಿಗಳು ಪರಸ್ಪರ ಒಮ್ಮತದಿಂದ ತಲಾಕ್‌ನ ವಿಧಿ ಪಡೆಯಬಹುದಾಗಿದೆ. ಇದು ಖುಲಾದಂತಹ ಒಂದು ವ್ಯವಸ್ಥೆ. ಆದರೆ ಅದರ ಅಪೂರ್ಣ ಅನುಕರಣೆಯಾಗಿದೆ.

---

* ಒಬ್ಬ ಪತಿಯಿಂದ ಬೇರ್ಪಟ್ಟು ಇನ್ನೊಬ್ಬ ಪತಿಯ ಪತ್ನಿಯಾಗುವುದಕ್ಕಿಂತ ಮುಂಚೆ ಆಕೆ ಗರ್ಭವತಿ ಅಲ್ಲವೆಂಬುದನ್ನು ಖಾತ್ರಿ ಪಡಿಸುವುದೇ ಇದ್ದತ್‌ನ ಮುಖ್ಯ ಉದ್ದೇಶ. ಈ ಉದ್ದೇಶಕ್ಕಾಗಿ ಇಸ್ಲಾಮ್ ಧರ್ಮವು ತೀರಾ ಸಹಜ ಮಾರ್ಗವನ್ನು ಅವಲಂಭಿಸಿದೆ. ಮೂರು ಸಲ ಮುಟ್ಟಾದ ಬಳಿಕ ಈ ಬಗ್ಗೆ ಖಾತ್ರಿಯಾಗುತ್ತದೆ. ಒಂದು ವೇಳೆ ಮಹಿಳೆಯು ಗರ್ಭವತಿಯಾಗಿದ್ದರೆ ಆಕೆಯು ಇದ್ದತ್ ಪ್ರಸವದ ತನಕ ಇರುವುದು. ಪ್ರಸವವು ತಲಾಕ್‌ನ ಹತ್ತು ದಿನದ ಬಳಿಕ ಆದರೂ ಸರಿಯೆ. ಇದಕ್ಕೆ ಹೋಲಿಸುವಾಗ 300 ದಿನ ಅಥವಾ 10 ತಿಂಗಳ ಇದ್ದತ್‌ಗೆ ಯಾವ ಸಹಜ ಬುನಾದಿಯೂ ಗೋಚರಿಸುವುದಿಲ್ಲ.

ಜರ್ಮನಿಯಲ್ಲಿ ದಂಪತಿಗಳು ಪರಸ್ಪರರನ್ನು ತ ರೆಯುದು ಸಂಬಂಧವಿರಿಸದಿರುವುದು, ತಲಾಕ್‌ಗೆ ಹೇತುವಾಗುವುದಿಲ್ಲ. ಈ ಅವಸ್ಥೆಯು ಒಂದು ವರ್ಷದ ತನಕ ಮುಂದುವರಿದರೆ, ಮಾತ್ರ ಅದು ತಲಾಕ್‌ಗೆ ಹೇತುವಾಗುತ್ತದೆ. ಇದು 'ಈಲಾ'ಹ ಕಾನೂನಿನ ಒಂದು ಕ್ಷೀಣ ಪ್ರತಿರೂಪವಾಗಿದೆ. ಸ್ವಿಝರ್‌ಲೇಂಡ್‌ನಲ್ಲಿ ಅದಕ್ಕೆ ಮೂರು ವರ್ಷದ ಅವಧಿ ಇದೆ. ಹಾಲೇಂಡ್‌ನಲ್ಲಿ 5 ವರ್ಷ. ಇತರ ದೇಶಗಳ ಕಾನೂನು ಈ ಬಗ್ಗೆ ಮೌನವಾಗಿದೆ.

ನಾಪತ್ತೆಯಾದವನ ಬಗ್ಗೆ ಸ್ವೀಡನ್‌ನಲ್ಲಿ 6 ವರ್ಷ ಕಾಯುವ ಕಾಲ ನಿಶ್ಚಿತವಿದೆ. ಹಾಲೇಂಡ್‌ನಲ್ಲಿ 10 ವರ್ಷ. ಇತರ ದೇಶಗಳ ಕಾನೂನು ನಾಪತ್ತೆಯಾದವನ ಬಗ್ಗೆ ಏನೂ ಹೇಳುವುದಿಲ್ಲ. ಹುಚ್ಚು ಹಿಡಿದವನಿಗೆ ಜರ್ಮನಿ, ಸ್ವೀಡನ್ ಮತ್ತು ಸ್ವಿಝರ್‌ಲೇಂಡ್‌ಗಳಲ್ಲಿ 3 ವರ್ಷದ ಅವಧಿ ಇದೆ. ಇತರ ದೇಶಗಳ ಕಾನೂನು ಹುಚ್ಚನ ಬಗ್ಗೆ ಯಾವ ತೀರ್ಪನ್ನೂ ನೀಡಿಲ್ಲ.

ಬೆಲ್ಜಿಯಂನಲ್ಲಿ ತಲಾಕ್ ಪಡೆದವಳಿಗೆ 10 ತಿಂಗಳ ಇದ್ದತ್ ನಿಶ್ಚಿತವಿದೆ. ಫ್ರಾನ್ಸ್ ಮತ್ತು ಬೆಲ್ಜಿಯಂಗಳನ್ನು ಹೊರತು ಪಡಿಸಿ ಇತರ ಯಾವ ದೇಶದಲ್ಲೂ ತಲಾಕ್ ಪಡೆದ ಸ್ತ್ರೀಗೆ ಪುನರ್ವಿವಾಹಕ್ಕೆ ಅವಧಿ ನಿಶ್ಚಯಿಸಲ್ಪಟ್ಟಿಲ್ಲ.

ಆಸ್ಟ್ರೇಲಿಯಾದಲ್ಲಿ ದಂಪತಿಗಳ ಪೈಕಿ ಯಾರಾದರೊಬ್ಬರಿಗೆ 5 ವರ್ಷ ಅಥವಾ ಅದಕ್ಕಿಂತ ಹೆಚ್ಚಿನ ಕಾಲ ಸೆರೆವಾಸ ಆದರೆ ಅದು ತಲಾಕ್ ಪಡೆಯಲು ಸಕಾರಣವಾಗುವುದು. ಬೆಲ್ಜಿಯಂನಲ್ಲಿ ಸೆರೆವಾಸದ ಶಿಕ್ಷೆ ವಿಧಿಸಲ್ಪಡುವುದೇ ತಲಾಕ್ ಪಡೆಯಲು ಸಕಾರಣವಾಗಿದೆ. ಸ್ವೀಡನ್ ಮತ್ತು ಹಾಲೇಂಡ್‌ಗಳಲ್ಲಿ ಇದು ಜೀವಾವಧಿ ಶಿಕ್ಷೆಗೆ ಮಾತ್ರ ಅನ್ವಯಿಸುತ್ತದೆ.

ಇದು ಜಗತ್ತಿನಲ್ಲೇ ಅತ್ಯಂತ ಪ್ರಗತಿ ಹೊಂದಿದವರೆನಿಸಿದವರ ಕಾನೂನು. ಆದರೆ ಇವುಗಳ ಪೈಕಿ ಯಾವ ದೇಶಕ್ಕೂ ಒಂದು ಪರಿಪೂರ್ಣ ಮತ್ತು ಸಂತುಲಿತ ಕಾನೂನು ರಚಿಸಲು ಸಾಧ್ಯವಾಗಿಲ್ಲವೆಂಬುದು ಇವುಗಳ ಅಧ್ಯಯನದಿಂದ ತಿಳಿದು ಬರುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಇಸ್ಲಾಮೀ ಕಾನೂನನ್ನು ನ್ಯಾಯದ ದೃಷ್ಟಿಯಿಂದ ನೋಡುವವನು, ಸಂತುಲಿತತೆ, ಮಾನವ ಪ್ರಕೃತಿಯ ಪರಿಗಣನೆ, ಕ್ಷೋಭೆಗಳ ನಿವಾರಣೆ, ಚಾರಿತ್ರ್ಯದ ರಕ್ಷಣೆ, ನಾಗರಿಕತೆಯ ಬೇಡಿಕೆಗಳ ಸಂರಕ್ಷಣೆ, ದಾಂಪತ್ಯ ಜೀವನದ ಎಲ್ಲ ವ್ಯವಹಾರ ಮತ್ತು ಸಮಸ್ಯೆಗಳ ಬಗ್ಗೆ ಸಮಗ್ರವಾದ ದೃಷ್ಟಿ ಮುಂತಾದುವುಗಳಲ್ಲಿ ಇಸ್ಲಾಮೀ ಕಾನೂನು ಯಾವ ಪರಿಪೂರ್ಣತೆಯ ಮಟ್ಟವನ್ನು ತಲುಪಿದೆಯೋ ಅದರ ನೂರರಲ್ಲೊಂದು ಅಂಶವನ್ನು ಕೂಡಾ ಪಾಶ್ಚಿಮಾತ್ಯ ಕಾನೂನು ತಲಪಿಲ್ಲವೆಂಬುದನ್ನು ಒಪ್ಪದೆ ಇರಲಾರ. ಇದು 19ನೇ ಶತಮಾನದ 'ಜ್ಞಾನೋದಯದ' ಯುಗದಲ್ಲಿ ಯೂರೋಪಿನ ಸಹಸ್ರಾರು ವಿದ್ವಾಂಸರು ಮತ್ತು ಬುದ್ಧಿಜೀವಿಗಳು ಸೇರಿ ಒಂದು ಶತಮಾನದ ಚಿಂತನ ಮಂಥನಗಳ ಬಳಿಕ ರಚಿಸಿದ ಕಾನೂನಾಗಿದೆ. ಇಸ್ಲಾಮೀ ಕಾನೂನು ಹದಿನಾಲ್ಕು ಶತಮಾನಗಳ ಹಿಂದೆ ಅರಬ್ ದೇಶದ ಓರ್ವ ನಿರಕ್ಷರಿ ವ್ಯಕ್ತಿ ಯಾವುದೇ ಪಾರ್ಲಿಮೆಂಟ್, ಕಮೀಶನ್ ಮತ್ತು ತಜ್ಞರ ಸಮಿತಿಯೊಂದಿಗೆ ಸಮಾಲೋಚನೆ ಮಾಡದೆ ಜಗತ್ತಿನ ಮುಂದಿರಿಸಿದ್ದಾಗಿದೆ.

ಇಷ್ಟು ಸ್ಪಷ್ಟ ಮತ್ತು ಮಹತ್ವಪೂರ್ಣ ವ್ಯತ್ಯಾಸವನ್ನು ಕಂಡ ಬಳಿಕವೂ ಯಾರಾದರೂ ಇಸ್ಲಾಮೀ ಕಾನೂನು ದೈವಿಕ ಕಾನೂನು ಅಲ್ಲ. ಮಾನವ ನಿರ್ಮಿತ ಕಾನೂನು ಎಂದು ಹೇಳಿದರೆ ಇಂತಹ ಕಾನೂನನ್ನು ಸಮರ್ಪಿಸಿದ ವ್ಯಕ್ತಿಯಂತೂ ತಾನು ದೇವನೆಂದೇ ವಾದಿಸಬೇಕಾಗಿತ್ತು. ಆದರೆ ಅವರು ಹಾಗೆ ಮಾಡಲಿಲ್ಲ ಎಂದಷ್ಟೇ ಹೇಳಬಹುದು. ಈ ಮಾನವಾತೀತ ಮಹತ್ಸಾಧನೆಯ ಹಿರಿಮೆಯನ್ನು ಅವರು ತಮ್ಮ ಖಾತೆಗೆ ಸೇರಿಸದೆ 'ನಾನು ನನ್ನ ಮತಿಯಿಂದ ಏನನ್ನೂ ಹೇಳುತ್ತಿಲ್ಲ ನಿಮ್ಮ ಪ್ರಭುವಿನ ಕಡೆಯಿಂದ ದೊರೆತುದನ್ನು ಮಾತ್ರ ನಿಮಗೆ ತಲುಪಿಸುತ್ತಿದ್ದೇನೆ' ಎಂದು ಹೇಳಿರುವುದಕ್ಕಿಂತ ಮಿಗಿಲಾಗಿ ಅವರ ಪ್ರಾಮಾಣಿಕತೆಗೆ ಬೇರಾವ ಪುರಾವೆ ತಾನೇ ಬೇಕು?

ಇನ್ನು, ಇಂತಹ ಸುವ್ಯಕ್ತ ವ್ಯತ್ಯಾಸದ ಹೊರತಾಗಿಯೂ ಮನುಷ್ಯನು ತನ್ನ ಜೀವನದಲ್ಲಿ ದೇವ ಮಾರ್ಗದರ್ಶನದ ಅಗತ್ಯವನ್ನು ನಿರಾಕರಿಸಿದರೆ ಮತ್ತು ತನಗಾಗಿ ಸ್ವತಃ ತಾನೇ ಕಾನೂನನ್ನು ರಚಿಸುತ್ತಾ ಹೋದರೆ ಅದನ್ನು ಹಠಮಾರಿತನ ಮತ್ತು ಮೊಂಡುತನವೆಂದಲ್ಲದೆ ಬೇರೇನೂ ಹೇಳಲಾಗದು. ಓರ್ವ ನಿಸ್ವಾರ್ಥಿ ಮತ್ತು ಹಿತಾಕಾಂಕ್ಷಿಯಾದ ಮಾರ್ಗದರ್ಶಿಯು ಸನ್ಮಾರ್ಗವನ್ನು ತೋರಿಸುತ್ತಿರುವಾಗ ನಾನು ಅದನ್ನು ಸ್ವೀಕರಿಸುವುದಿಲ್ಲ. ನಾನು ನನ್ನ ಮಾರ್ಗವನ್ನು ಸ್ವಯಂ ಕಂಡು ಕೊಳ್ಳುತ್ತೇನೆನ್ನುತ್ತಾ ವಿಭಿನ್ನ ಮಾರ್ಗಗಳಲ್ಲಿ ಅಲೆಯುತ್ತಾ ಸಾಗುವಾತನಿಗಿಂತ ದೊಡ್ಡ ತಿಳಿಗೇಡಿ ಇನ್ನಾರಿರಬಹುದು.